# ನಾ ಕಂಡಂತೆ ನನ್ನ ಗುರುದೇವ

ಸೋದರಿ ನಿವೇದಿತಾ



ಶ್ರೀ ರಾಮಕೃಷ್ಣ ಆಶ್ರಮ
ಮೈಸೂರು
೧೯೫೭

## ವಿ ಷ ಯ ಸೂ ಚಿ ಕೆ

# ಮುನ್ನುಡಿ

ಪ್ರಖ್ಯಾತ ಕಲಾವಿದರಾದ ಅವನೀಂದ್ರನಾಥಠಾಕೂರರು ಸೋದರಿ ನಿವೇದಿತೆಯ ಚಿತ್ರವನ್ನು ಒಂದು ಸಣ್ಣ ಲೇಖನದಲ್ಲಿ ವಿವರಿಸುವರು. ಇದನ್ನು ಓದಿದರೆ ಅವರ ಲೇಖನಿ ಕುಂಚದಷ್ಟೇ ಸುಂದರವಾದ ಚಿತ್ರವನ್ನು ನಮ್ಮ ಕಣ್ಣೆದುರಿಗೆ ನಿಲ್ಲುವಂತೆ ಮಾಡುವುದು: "ಎಂತಹ ಪವಿತ್ರಶೀಲ ಸೋದರಿ ನಿವೇದಿತೆಯದು. ನಾನು ಮೊದಲು ಆಕೆಯನ್ನು ಕಂಡದ್ದು ಅಮೆರಿಕನ್ ಕೌನ್ಸಿಲ್ ಭವನದಲ್ಲಿ ಓಕಾಕುರನಿಗೆ ಕೊಟ್ಟ ಔತಣಕೂಟದಲ್ಲಿ. ಆಕೆಯನ್ನೂ ಅಲ್ಲಿಗೆ ಆಹ್ವಾನಿಸಿದ್ದರು. ಅವರು ಕಾಲಿನತನಕ ಬರುವ ಶ್ವೇತ ವಸನವನ್ನು ಧರಿಸಿದ್ದರು. ಕೊರಳಿನಲ್ಲಿ ರುದ್ರಾಕ್ಷಿಯ ಮಾಲೆಯನ್ನು ಧರಿಸಿದ್ದರು. ಶ್ವೇತ ಅಮೃತಶಿಲೆಯಿಂದ ಕೆತ್ತಿದ ಮಹಾ ತಪಸ್ವಿನಿಯ ಮೂರ್ತಿಯಂತೆ ನನಗೆ ತೋರಿದರು. ಆಕೆಯ ಸೌಂದರ್ಯವನ್ನು ಬಣ್ಣಿಸಲು ಅಸದಳ. ಮತ್ತೊಮ್ಮೆ ನಾನು ಅವರನ್ನು ಸಂದರ್ಶಿಸಿದ್ದು ಜಸ್ಟಿಸ್ ಹೋಮ್‌ವುಡ್ ಭವನದಲ್ಲಿ ಆರ್ಟ್ ಸೊಸೈಟಿಯ ಒಂದು ಸಭೆಯಲ್ಲಿ. ಆಕೆಗೂ ಅಲ್ಲಿಗೆ ಬರಲು ಆಹ್ವಾನಿಸಿದ್ದರು. ಜನರೆಲ್ಲ ನೆರೆದ ಮೇಲೆ ಇವರು ಸ್ವಲ್ಪ ಹೊತ್ತಾಗಿ ಬಂದರು. ಇದೊಂದು ಅಭೂತಪೂರ್ವ ಸಭೆ. ಕಲ್ಕತ್ತೆಯ ಪ್ರಖ್ಯಾತ ಮಹಿಳೆ ಮಹನೀಯರು ತಮ್ಮ ಅತ್ಯಂತ ಬೆಲೆ ಬಾಳುವ ಉಡುಗೆ ತೊಡಿಗೆಗಳನ್ನು ತೊಟ್ಟು ಬಂದಿದ್ದರು. ಅಲಂಕಾರ ಮತ್ತು ಸೌಂದರ್ಯದ ಒಂದು ಸ್ಪರ್ಧೆಯೊ ಎನ್ನುವಂತೆ ಕಂಡಿತು ಸಭೆ. ಮೃದು ಮಧುರ ಸಂಗೀತದ ಹಿನ್ನೆಲೆಯಲ್ಲಿ ಮಧ್ಯೆಮಧ್ಯೆ ಏಳುವ ನಗೆಯ ತರಂಗಭಂಗ. ಸೋದರಿ ನಿವೇದಿತಾ ಸಭೆಗೆ ಪ್ರವೇಶಿಸಿದಾಗ ಇನ್ನೇನು ಸಂಜೆವೆಣ್ಣು ಜಗವನ್ನೆಲ್ಲಾ ಆವರಿಸುವುದರಲ್ಲಿದ್ದಳು. ತಾರೆಗಳ ಮಧ್ಯದಲ್ಲಿ ಪ್ರಕಾಶಿಸುವ ಚಂದ್ರಮನಂತೆ ಕಂಡಳು ಸೋದರಿ ನಿವೇದಿತಾ ಆಗ. ಈಕೆಯ ಸರಳ ಸೌಂದರ್ಯ ಮತ್ತು ಸ್ನಿಗ್ಧ ಗಾಂಭೀರ್ಯದೆದುರಿಗೆ ಅಲ್ಲಿ ನೆರೆದಿದ್ದ ಲಾವಣ್ಯವತಿಯರೆಲ್ಲ ಮ್ಲಾನರಾಗಿ ಹೋದರು. ಹಿಂದಿನಂತೆಯೇ ಅದೇ ಶ್ವೇತವಸನ, ಕೊರಳಲ್ಲಿ ರುದ್ರಾಕ್ಷಿಯ ಮಾಲೆ, ತಲೆಯಲ್ಲಿ ಅರ್ಧ ಹೊಂಬಣ್ಣ, ಅರ್ಧ ರಜತವರ್ಣದ ಕೇಶರಾಶಿ. ಅಲ್ಲಿ ನೆರೆದವರ ದೃಷ್ಟಿಯೆಲ್ಲ ಇವರ ಕಡೆ ಧಾವಿಸಿದುವು. ಎಲ್ಲರನ್ನೂ ಈಕೆ ಆಕರ್ಷಿಸಿದರು. ಎಲ್ಲರೂ ಪಿಸು ಮಾತನಾಡತೊಡ[illegible]

ಬಹುದು ಈಕೆ ಎಂದು ವುಡ್‌ರೋಫ್ ಬ್ರಂಟ್ ಎನ್ನುವರು ನನ್ನನ್ನು ಕೇಳಿದರು. ನಾನು ನಿವೇದಿತಾರನ್ನು ನೆರೆದ ಪ್ರಮುಖರಿಗೆ ಪರಿಚಯ ಮಾಡಿಕೊಟ್ಟೆ. ನೀವು ಸೌಂದರ್ಯದ ವಿಷಯವಾಗಿ ಮಾತನಾಡಬಹುದು. ಆದರೆ ನನಗೆ ನಿವೇದಿತೆಯೇ ಸೌಂದರ್ಯಕ್ಕೆ ಆದರ್ಶವಾಗಿರುವರು. ಬಾಣನ ಕಾದಂಬರಿಯ ಮಹಾಶ್ವೇತೆಯಂತೆ ಇರುವರು ಅವರು. ನಾನು ಇಂತಹ ರೂಪನ್ನು ಸೌಂದರ್ಯವನ್ನು ನೋಡಿರುವುದು ಅಪರೂಪ. ಆಕೆ ಲಾವಣ್ಯದ ಪರಾಕಾಷ್ಠೆಯಂತೆ ನನಗೆ ಕಂಡರು. ಕೆಲವು ನಿಮಿಷಗಳು ಆಕೆಯೊಡನೆ ಮಾತನಾಡಿದರೂ ಸಾಕು ಸ್ಫೂರ್ತಿಕಿಡಿ ನಮ್ಮೆದೆಯಲ್ಲಿ ಜಾಗೃತವಾಗುವುದು.''

ಮೇಲಿನ ಚಿತ್ರವನ್ನು ಕೊಟ್ಟವರು ಕವಿ ರವೀಂದ್ರನಾಥರ ಹತ್ತಿರದ ಬಂಧುಗಳಾದ ಅವನೀಂದ್ರನಾಥಠಾಕೂರರು. ನಿವೇದಿತೆಯನ್ನು ಚೆನ್ನಾಗಿ ಬಲ್ಲವರು. ಆಧುನಿಕ ಕಲಾ ಪ್ರಪಂಚದಲ್ಲಿ ಪ್ರಖ್ಯಾತಿಯ ಶಿಖರವನ್ನು ಏರಿದವರು. ಇಂತಹವರ ಮೇಲೆಯೇ ಆಕೆಯ ಪ್ರಭಾವ ಅಷ್ಟು ಮಹತ್ತರವಾಗಿತ್ತು. ಆಗಿನಕಾಲದಲ್ಲಿ ವಂಗದೇಶದಲ್ಲಿ ನಿವೇದಿತೆಯ ಪ್ರಭಾವಕ್ಕೆ ಸಿಕ್ಕಿ ಸುಪ್ತವಾಗಿದ್ದ ತಮ್ಮ ಪ್ರತಿಭೆಯ ಅಗ್ನಿಕುಂಡವನ್ನು ಹಲವು ಮಹಿಮಾನ್ವಿತರು ಜಾಗ್ರತಗೊಳಿಸಿಕೊಂಡರು. ಅವರು ಜೀವನದ ಹಲವು ಕಾರ್ಯಕ್ಷೇತ್ರಗಳಲ್ಲಿ ಪ್ರಥಮದರ್ಜೆಯಲ್ಲಿರುವ ಮಹಾವ್ಯಕ್ತಿಗಳು. ಕವಿ ರವೀಂದ್ರನಾಥರು, ಮೇಲೆ ಹೇಳಿದ ಅವನೀಂದ್ರನಾಥರೂ, ನಂದಲಾಲ್‌ಬೋಸ್ ಇವರು ಕಲಾ ಪ್ರಪಂಚಕ್ಕೆ ಸೇರಿದವರು. ಅರವಿಂದಘೋಷರು ಕೂಡ ನಿವೇದಿತೆಯನ್ನು ಚೆನ್ನಾಗಿ ಬಲ್ಲವರು, ಅವರೊಡನೆ ಒಂದೇ ಕಾರ್ಯಕ್ಷೇತ್ರದಲ್ಲಿ ಕೆಲವುಕಾಲ ದುಡಿದವರು. ಜೆ. ಸಿ. ಬೋಸ್, ಪಿ. ಸಿ. ರಾಯ್ ಮುಂತಾದ ವಿಜ್ಞಾನಿಗಳು ಇದ್ದರು. ಮೇಜರ್ ಬಸು, ಸರ್ಕಾರ್ ಮುಂತಾದ ಪ್ರಖ್ಯಾತ ಇತಿಹಾಸಕಾರರು ಇದ್ದರು. ಇವರ ಮೇಲೆಲ್ಲ ತಮ್ಮ ಪ್ರಭಾವವನ್ನು ಅಚ್ಚಳಿಯದಂತೆ ಬೀರಬೇಕಾದರೆ ಇದೊಂದು ಅಸಾಧಾರಣ ಚೇತನವಾಗಿರಬೇಕು. ಈ ಒಂದು ಅಪೂರ್ವ ವ್ಯಕ್ತಿಯನ್ನು ಭರತಖಂಡಕ್ಕೆ ತಂದ ಕೀರ್ತಿ ಸ್ವಾಮಿ ವಿವೇಕಾನಂದರದು. ತಂದದ್ದು ಮಾತ್ರವಲ್ಲ, ಆಕೆಯನ್ನು ಸಾಧನೆಯ ಗರಡಿಯಲ್ಲಿ ತರಬೇತು ಮಾಡಿ, ಪರಿಶುದ್ಧಳನ್ನಾಗಿ ಮಾಡಿ, ಭರತಖಂಡದ ಉದ್ಧಾರಕ್ಕೆ ಆಕೆಯನ್ನು ನಿವೇದಿಸಿದರು. ಅಕ್ಷರಶಃ ಈ ಹೆಸರು ಆಕೆಗೆ ಸಲ್ಲುವುದು. ತಮ್ಮನ್ನು ಭರತಖಂಡದ ಹಿತಕ್ಕೆ ತಾವೇ ಅರ್ಪಿಸಿಕ[illegible]ವರು. ಕೋಗಿಲೆ ತನ್ನ ಬಾಲ್ಯವನ್ನು ಕಾಗೆಯ ಗೂಡಿನಲ್ಲಿ

ಕಳೆದು ಬುದ್ಧಿ ಬಂದಮೇಲೆ ತಮ್ಮವರನ್ನು ಹುಡುಕಿಕೊಂಡು ಹಾರಿಹೋಗು ವಂತೆ ಈಕೆ ಇಂಗ್ಲೆಂಡಿನಿಂದ ಭರತಖಂಡಕ್ಕೆ ಬಂದರು. ಇವರು ಹಿಂದೂ ಗಳಲ್ಲಿ ಹಿಂದೂಗಳಾದರು. ನಮ್ಮ ಸಂಸ್ಕೃತಿ ನಾಗರಿಕತೆಯ ಆಳಕ್ಕೆ ಹೋದರು. ನಮ್ಮ ತತ್ತ್ವವನ್ನು ಹೀರಿದರು. ದೃಷ್ಟಿಯಲ್ಲಿ ನಡೆನುಡಿ ಯಲ್ಲಿ ನಮ್ಮವರಿಗಿಂತ ಹೆಚ್ಚಾಗಿ ನಮ್ಮವರಾದರು. ಹೊರಗಿನಿಂದ ಬಂದ ವರು ಭರತಖಂಡವನ್ನು ಇಷ್ಟು ಪ್ರೀತಿಸಿದ್ದು ಯಾರೂ ಇಲ್ಲವೆಂತಲೇ ಹೇಳ ಬಹುದು. ಸ್ವಾಮಿ ವಿವೇಕಾನಂದರು ಇಂಗ್ಲೆಂಡಿನಲ್ಲಿ, ತಾವು ಮಾಡಿದ ಕೆಲಸಕ್ಕೆ ದೊರೆತ ಶ್ರೇಷ್ಠತಮ ಪುಷ್ಪ ನಿವೇದಿತೆ ಎಂದಿರುವರು. ಐರೋಪ್ಯರು ಭರತಖಂಡದ ಐಶ್ವರ್ಯವನ್ನು ಹಿಂದಿನಕಾಲದಲ್ಲಿ ದೋಚಿಕೊಂಡು ಹೋದರು. ಆದರೆ ಸ್ವಾಮಿ ವಿವೇಕಾನಂದರು ಅಲ್ಲಿಂದ ಒಂದು ಅತ್ಯಮೂಲ್ಯವಾದ ವಸ್ತುವನ್ನು ತಂದು ಭಾರತಮಾತೆಗೆ ಅರ್ಪಿಸಿದರು. ಅದೇ ಸೋದರಿ ನಿವೇದಿತಾ. ಇದರಿಂದ ಎರಡು ರಾಷ್ಟ್ರಗಳ ಬಂಧನ ತೊಡೆದುಹೋಗದೆ ಎರಡನ್ನೂ ಸೇರಿಸುವ ಒಂದು ಸೇತುವೆಯಾದರು ನಿವೇದಿತಾ.

ನಿವೇದಿತೆಯ ಪೂರ್ವಾಶ್ರಮದ ಹೆಸರು ಮಾರ್ಗರೆಟ್ ನೋಬೆಲ್ ಎಂದು. ಇವರ ತಂದೆ ಪ್ರಾಟೆಸ್ಟೆಂಟ್ ಪಾದ್ರಿಗಳಾದ ರೆವರೆಂಡ್ ಸ್ಯಾಮ್ಯು ಯಲ್ ರಿಚ್‌ಮಂಡ್ ನೋಬಲ್. ತಾಯಿ ಇಸಾಬಿಲಾ ನೋಬಲ್. ಮಹಾ ಸೌಂದರ್ಯವತಿಯೆಂದು ಆಗ ಪ್ರಖ್ಯಾತರಾಗಿದ್ದರು. ನಿವೇದಿತಾ ತನ್ನ ಬಾಹ್ಯ ಸೌಂದರ್ಯವನ್ನು ತಾಯಿಂದ ಪಡೆದರು. ಇವರ ತೌರೂರು ಐರ್‌ಲೆಂಡ್. ಅನಂತರ ಇಂಗ್ಲೆಂಡಿಗೆ ಬಂದರು. ನಿವೇದಿತೆಯ ತಾಯಿ ತಾನು ನಿವೇದಿತೆಗೆ ಗರ್ಭವತಿಯಾದಾಗಲೇ, ಹುಟ್ಟುವ ಮಗು ಗಂಡಾಗಲೀ ಹೆಣ್ಣಾಗಲೀ ಅದನ್ನು ದೇವರ ಸೇವೆಗೆ ಸಮರ್ಪಿಸುವೆನು ಎಂದು ಹರಕೆ ಹೊತ್ತಿದ್ದರಂತೆ. ಅನಂತರ ಆ ಮಗು ಬೆಳೆದು ದೊಡ್ಡವಳಾಗಿ ವಿವೇಕಾ ನಂದರ ಶಿಷ್ಯಳಾಗಿ ಭರತಖಂಡಕ್ಕೆ ಹೋಗುತ್ತೇನೆ ಎಂದಾಗ, ಬಹಳ ಹಿಂದೆ ತಾವು ಗರ್ಭವತಿಯಾದಾಗ ದೇವರಿಗೆ ಮಾಡಿದ ಹರಕೆ ಜ್ಞಾಪಕಕ್ಕೆ ಬಂದು ಮಗಳನ್ನು ಆಶೀರ್ವದಿಸಿ ಬೀಳ್ಕೊಟ್ಟರು.

ನಿವೇದಿತಾ ಇಂಗ್ಲೆಂಡಿನಲ್ಲಿ ಕಲಿತು ಆಧುನಿಕ ರೀತಿಯಲ್ಲಿ ಪ್ರಚಾರ ಮಾಡುವುದಕ್ಕಾಗಿ ವಿಂಬಲ್‌ಡನ್ ಎಂಬಲ್ಲಿ ಬಂದು ಶಾಲೆಯನ್ನು ತೆರೆದರು. ಶಿಕ್ಷಣ ಕ್ರಮಕ್ಕೆ ಸಂಬಂಧಪಟ್ಟ ಗ್ರಂಥಗಳನ್ನೆಲ್ಲಾ ಓದಿ ತಮ್ಮ ಮನಸ್ಸಿಗೆ ಹೊಳೆದ ಹೊಸಹೊಸ ಭಾವನೆಗಳನ್ನೆಲ್ಲಾ ಕಾರ್ಯರೂಪಕ್ಕೆ ತರಲು ಯತ್ನಿಸಿ

ತ್ತಿದ್ದರು. ಶಿಕ್ಷಣ ಒಂದೇ ಇವರ ಬಾಳನ್ನೆಲ್ಲಾ ವ್ಯಾಪಿಸಲಿಲ್ಲ. ಐರಿಷ್ ಕ್ರಾಂತಿ ಸಂಘಕ್ಕೆ ಕಾರ್ಯದರ್ಶಿಯಾಗಿದ್ದರು. ತತ್ತ್ವಶಾಸ್ತ್ರ, ಮಾನಸಿಕ ಶಾಸ್ತ್ರ, ಸಮಾಜ ಶಾಸ್ತ್ರ ಮುಂತಾದುವುಗಳನ್ನೆಲ್ಲಾ ಆಮೂಲಾಗ್ರವಾಗಿ ಅಧ್ಯಯನ ಮಾಡತೊಡಗಿದರು. ಜೀವನದಲ್ಲಿ ಆಧ್ಯಾತ್ಮಿಕ ಅತೃಪ್ತಿ ಪ್ರಾರಂಭವಾಯಿತು. ಆಗಲೇ ಸ್ವಾಮಿ ವಿವೇಕಾನಂದರು ಇಂಗ್ಲೇಂಡಿನಲ್ಲಿ ಉಪನ್ಯಾಸಗಳನ್ನು ಕೊಡುತ್ತಿದ್ದರು. ಆಗ ೧೮೯೫ ನೇ ವರುಷ. ಮಾರ್ಗ ರೇಟ್ ನೋಬಲ್ ವಿವೇಕಾನಂದರ ಬೋಧನೆಗೆ ಆಕರ್ಷಿತರಾದರು. ಆದರೆ ಬಡಪೆಟ್ಟಿಗೆ ಇವರು ಯಾವುದನ್ನು ಒಪ್ಪಿಕೊಳ್ಳುವ ಸ್ವಭಾವದವರಲ್ಲ. ಸ್ವಾಮಿಜಿಯವರನ್ನು ಅನೇಕ ವೇಳೆ ಪರಿಪ್ರಶ್ನೆಗಳಿಂದ ಮುತ್ತುತ್ತಿದ್ದರು. ಇದನ್ನು ನೋಡಿಯೇ ಯಾರೋ ಮತ್ತೊಬ್ಬ ಶಿಷ್ಯರು ನಿವೇದಿತೆಯನ್ನು ಹಾಸ್ಯಮಾಡತೊಡಗಿದರು. ಆಗ ಸ್ವಾಮಿ ವಿವೇಕಾನಂದರು ನಿವೇದಿತೆಯ ಪರವಾಗಿ ಮಾತನಾಡಿದರು. "ನಾನು ನನ್ನ ಗುರುವನ್ನು ಹನ್ನೆರಡು ವರುಷಗಳು ಪರೀಕ್ಷಿಸಿ ಸ್ವೀಕರಿಸಿದೆ. ಇದರ ಪರಿಣಾಮವಾಗಿ ಅವರನ್ನು ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯವಾಯಿತು. ಅದರಂತೆಯೇ ಯಾರೂ ಏನನ್ನು ಸುಲಭವಾಗಿ ಸ್ವೀಕರಿಸಬೇಕಾಗಿಲ್ಲ" ಎಂದರು.

ವಿವೇಕಾನಂದರು ಇಂಡಿಯಾ ದೇಶಕ್ಕೆ ಹಿಂತಿರುಗಿ ಬಂದಮೇಲೆ ನಿವೇದಿತೆ ಸ್ವಾಮಿ ವಿವೇಕಾನಂದರ ಶಿಷ್ಯರಾಗಲು ಭರತಖಂಡಕ್ಕೆ ೧೮೯೭ರಲ್ಲಿ ಬಂದರು. ಅವರ ಸಮೀಪದಲ್ಲೇ ಇದ್ದು ಪ್ರತಿದಿನ ಅವರ ಉಪದೇಶವನ್ನು ಕೇಳುವ ಸುಯೋಗವು ಇವರದಾಯಿತು. ಸ್ವಾಮಿ ವಿವೇಕಾನಂದರು ಕೆಲವು ಕಾಲದ ಮೇಲೆ ಇವರಿಗೆ ಬ್ರಹ್ಮಚಾರಿಣಿ ದೀಕ್ಷೆ ನೀಡಿ ನಿವೇದಿತಾ ಎಂಬ ಹೆಸರನ್ನು ಕರುಣಿಸಿದರು. ಸ್ವಾಮಿ ವಿವೇಕಾನಂದರೊಡನೆ ಉತ್ತರ ಇಂಡಿಯಾದಲ್ಲೆಲ್ಲಾ ಪ್ರವಾಸ ಮಾಡಿ ಕಾಶ್ಮೀರ ಮತ್ತು ಅಲ್ಲಿರುವ ಅಮರ ನಾಥ ಇವನ್ನು ನೋಡಿಕೊಂಡು ಬಂದರು. ಸಾಧನೆ ಜೀವನದಲ್ಲಿ ಮುಂದು ವರಿದರು. "ನಾ ಕಂಡ ನನ್ನ ಗುರುದೇವ" ಎಂಬ ಗ್ರಂಥದಲ್ಲಿ ಅವರಿಗೆ ಸಂಬಂಧಪಟ್ಟ ಕೆಲವು ಘಟನೆಗಳನ್ನು ನೋಡಬಹುದು. ಕೆಲವು ಕಾಲಾ ನಂತರ ಇಂಗ್ಲೇಂಡಿಗೆ ಹೋಗಿ ೧೯೦೨ ನೇ ಪ್ರಾರಂಭದಲ್ಲಿ ಬಂದರು. ಸ್ವಾಮಿ ವಿವೇಕಾನಂದರ ಮಹಾ ಸಾಮಾಧಿಯ ನಂತರ ಸೋದರಿ ನಿವೇದಿತಾಪಾಠ ಶಾಲೆ ಬಾಲಿಕೆಯರಿಗೆ ಪ್ರಾಂಭವಾಯಿತು. ಇದಕ್ಕಾಗಿ ಬಹಳ ಶ್ರಮಪಟ್ಟರು. ಸ್ವಾಮಿ ವಿವೇಕಾನಂದರ ತರುವಾಯ ನಿವೇದಿತಾ ವಂಗದೇಶದ

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸಿದರು. ಇವರು ಎಷ್ಟು ಸುಂದರವಾಗಿ ಬರೆಯ ಬಲ್ಲರೋ ಅಷ್ಟೇ ಸುಂದರವಾಗಿ ಮಾತನಾಡ ಬಲ್ಲವರಾಗಿದ್ದರು. ಸ್ವಾಮಿ ವಿವೇಕಾನಂದರು ಭರತಖಂಡಕ್ಕೆ ಇತ್ತ ಶಕ್ತಿಸಂದೇಶ ನಿವೇದಿತೆಯ ಲೇಖನ, ಗ್ರಂಥ, ಉಪನ್ಯಾಸಗಳಲ್ಲಿ ಹೊರ ಹೊಮ್ಮಿ ದೇಶವನ್ನು ಜಾಗ್ರತಗೊಳಿಸಿತು. ಸುಂಟರ ಗಾಳಿಯಂತೆ ಅಲೆದು ಸಿಂಹದಂತೆ ಘರ್ಜಿಸಿದರು. ಹಲವು ಗ್ರಂಥವನ್ನು ಬರೆದರು. ಅವೆಲ್ಲ ಭರತಖಂಡದ ಧರ್ಮ, ಪುರಾಣ, ಸಂಸ್ಕೃತಿ, ಇತಿಹಾಸಕ್ಕೆ ಸಂಬಂಧ ಪಟ್ಟದ್ದು. ಪರದೇಶದಿಂದ ಬಂದರೂ ಹುಟ್ಟು ಭಾರತೀಯನಿಗೂ ಅಸಾಧ್ಯವಾದಂತಹ ಸಹೃದಯತೆಯಿಂದ ಪ್ರತಿಯೊಂದು ಸಮಸ್ಯೆಯನ್ನು ವಿವರಿಸತೊಡಗಿದರು. ೧೯೧೧ರಲ್ಲಿ ಹೆಚ್ಚು ಕೆಲಸದಿಂದ ಅವರ ಆರೋಗ್ಯ ಶಿಥಿಲವಾಯಿತು. ನಿತ್ರಾಣರಾದರು. ಆದರೂ ತಾವು ಕಲ್ಕತ್ತೆಯಲ್ಲಿದ್ದ ತಮ್ಮ ಮನೆಯನ್ನು ಬಿಡಲಿಲ್ಲ. ಇವರನ್ನು ನೋಡಲು ಬಂದ ಡಾಕ್ಟರ್ ಜೆ. ಸಿ. ಬೋಸ್ ಮತ್ತು ಅವರ ಪತ್ನಿ ನಿವೇದಿತರನ್ನು ಡಾರ್ಜಲಿಂಗ್ ನಲ್ಲಿರುವ ತಮ್ಮ ಮನೆಗೆ ಸುಧಾರಿಸಿಕೊಳ್ಳಲು ಕರೆದುಕೊಂಡು ಹೋದರು. ಅಲ್ಲೆ ೧೯೧೧ ನೇ ಅಕ್ಟೋಬರ್ ೧೩ ನೇ ತಾರೀಖು ಮಹಾಸಮಾಧಿ ಪಡೆದರು. ಆಕೆ ಜೀವಿಸಿದ್ದು ಒಟ್ಟನಲ್ಲಿ ನಲವತ್ತನಾಲ್ಕು ವರುಷಗಳು. ಅದರಲ್ಲಿ ತಮ್ಮ ಬಾಳಿನ ಅತಿ ಮುಖ್ಯ ಕಾಲವನ್ನು ಭರತಖಂಡದ ಸೇವೆಗೆ ಅರ್ಪಿಸಿರುವರು.

"ನಾ ಕಂಡಂತೆ ನನ್ನ ಗುರುದೇವ" ಎಂಬ ಗ್ರಂಥ ಸೋದರಿ ನಿವೇದಿತೆಯ ಶ್ರೇಷ್ಠತಮ ಕೃತಿ. ನಿವೇದಿತೆ ಇಲ್ಲದೆ ಇದ್ದರೆ ಈ ಗ್ರಂಥದಲ್ಲಿ ವ್ಯಕ್ತವಾಗುವ ಸ್ವಾಮಿ ವಿವೇಕಾನಂದರ ಭವ್ಯ ಆಲೋಚನೆಗಳು ಜಗತ್ತಿಗೆ ಸಿಕ್ಕುವಂತೆ ಇರಲಿಲ್ಲ. ನಿವೇದಿತೆಯೇ ಈ ಗ್ರಂಥದಲ್ಲಿ ಭಾರತೀಯರಿಗಾಗಿ ನಾನು ನನ್ನ ಗುರುದೇವನ ಭಾವನೆಯನ್ನು ಬರೆದಿಡುತ್ತಿರುವೆನು ಎಂದು ಹೇಳುವರು. ಸ್ವಾಮಿ ವಿವೇಕಾನಂದರಂತಹ ಬಹುಮುಖದ ಶೀಲವನ್ನು ಎಲ್ಲರಿಗೂ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಅಂತಹ ಮಹಾ ಮಹಿಮರನ್ನು ಅರ್ಥಮಾಡಿಕೊಳ್ಳಬೇಕಾದರೂ ಒಬ್ಬ ಸಾಧನಾ ಜೀವನದಲ್ಲಿ ಬಹಳ ಮುಂದುವರಿದು ಹೋಗಿರಬೇಕು. ಅನಂತರ ಹಾಗೆ ಅರ್ಥ ಮಾಡಿ ಕೊಂಡುದನ್ನು ಚಿತ್ರಿಸಬೇಕಾದರೆ ಅದು ಎಲ್ಲರಿಗೂ ಸಾಧ್ಯವಿಲ್ಲ. ಇದಕ್ಕೇ ಬೇರೊಂದು ಬಗೆಯ ಸಾಹಿತ್ಯ ಪ್ರತಿಭೆ ಬೇಕಾಗುವ[illegible]. [illegible]ತ್ತೋ

ನಿವೇದಿತೆಗೆ ಇದು ದೈವದತ್ತವಾಗಿ ಬಂದಿದೆ. ಹಾಗೆ ದೈವದತ್ತವಾಗಿ ಬಂದ ಪ್ರತಿಭೆಯನ್ನು ಲೌಕಿಕ ಪ್ರಪಂಚಕ್ಕೆ ಉಪಯೋಗಿಸದೆ ಒಬ್ಬ ದೇವಮಾನವನ ಬಾಳಿನ ಚಿತ್ರವನ್ನು ನಿರೂಪಿಸಲು ಇಲ್ಲಿ ಉಪಯೋಗಿಸಿಕೊಂಡಿರುವರು. ಎಂತಹ ಸುಂದರವಾದ ಆಂಗ್ಲ ಭಾಷೆಯಲ್ಲಿ ಈಕೆ ಇದನ್ನು ಬರೆದಿರುವರು! ಈ ಪುಸ್ತಕ ಸ್ವಾಮಿ ವಿವೇಕಾನಂದರ ಜೀವನವನ್ನು ತಿಳಿದುಕೊಳ್ಳಲು ಒಂದು ಮೂಲಗ್ರಂಥ. ಇದರಿಂದಲೇ ಸ್ವಾಮಿಜಿ ಜೀವನ ಚರಿತ್ರೆ ಬರೆದಿರುವವರೆಲ್ಲ ಹಲವು ವಿಷಯಗಳನ್ನು ಆಯ್ದುಕೊಂಡಿರುವರು.

ಈ ಗ್ರಂಥ ಬೇಲೂರು ದೇವಾಲಯದಂತೆ. ಸುತ್ತ ಎತ್ತ ನೋಡಲಿ ಶಿಲ್ಪಕಲೆಯ ಪ್ರತಿಭೆಯನ್ನು ಕಾಣುವೆವು. ಇದರಂತೆ ಸೋದರಿ, ಹಿಂದೂ ಸಮಾಜ, ಧರ್ಮ, ಇಲ್ಲಿಯ ತತ್ತ್ವ, ಇಲ್ಲಿಯ ಜನರ ಆದರ್ಶ, ಇಲ್ಲಿಯ ವರ್ಣ ಆಶ್ರಮ, ಭರತಖಂಡದ ಭೂತ ವರ್ತಮಾನ ಭವಿಷ್ಯತ್ ಮುಂತಾದ ಹಲವು ವಿಷಯಗಳನ್ನು ಅವುಗಳ ಆಳಕ್ಕೆ ಹೋಗಿ, ಆದರ್ಶವನ್ನು ಚೆನ್ನಾಗಿ ಮನಗಂಡು, ಅದರಿಂದ ಸ್ಫೂರ್ತಿಯುತರಾಗಿ ಸಹೃದಯತೆಯಿಂದ ಸಹಾನುಭೂತಿಯಿಂದ ಚಿತ್ರಿಸಿರುವರು. ಆದರೆ ಬೇಲೂರು ದೇವಾಲಯದಲ್ಲಿ ಒಂದು ಮೂಲ ವಿಗ್ರಹ ಇದೆ. ಅದರೆಡೆಗೆ ಸೆಳೆಯುವುದಕ್ಕಾಗಿ, ಅದನ್ನು ಪೋಷಿಸುವುದಕ್ಕಾಗಿ ಉಳಿದ ಕೆತ್ತನೆಯ ಕೆಲಸವೆಲ್ಲ. ಆ ಮೂಲ ವಿಗ್ರಹವೇ ಈ ಗ್ರಂಥ ದೇಗುಲದಲ್ಲಿರುವ ಸ್ವಾಮಿ ವಿವೇಕಾನಂದರು, ಸೋದರಿ ನಿವೇದಿತೆಯ ಆರಾಧ್ಯಮೂರ್ತಿ, ಪರಮಗುರು. ಆ ಪೂಜ್ಯ ಗುರುದೇವನ ಬಹುಮುಖ ವ್ಯಕ್ತಿತ್ವವನ್ನು ಎಷ್ಟು ಅದ್ಭುತವಾಗಿ ಸುಂದರವಾಗಿ ಕಲಾಪೂರ್ಣವಾಗಿ ಚಿತ್ರಿಸಿರುವರು ಈ ಗ್ರಂಥದಲ್ಲಿ. ತಮ್ಮ ಗುರುದೇವನ ಪವಿತ್ರಸ್ಮೃತಿಗಾಗಿ ಕಟ್ಟಿದ ಪದದೇಗುಲ "ನಾ ಕಂಡಂತೆ ನನ್ನ ಗುರುದೇವ" ಎಂಬ ಗ್ರಂಥ. ಈ ಗರ್ಭಗುಡಿಯಲ್ಲೆ ಸ್ವಾಮಿ ವಿವೇಕಾನಂದರ ಮೂಲ ದೇವರನ್ನು ಪ್ರತಿಷ್ಠೆಮಾಡಿರುವರು. ಗ್ರಂಥದ ಮೂಲೆ ಮೂಲೆಯಲ್ಲಿ ಸ್ವಾಮಿಜಿಯವರ ಶ್ರದ್ಧೆ, ನಂಬಿಕೆ, ಶಕ್ತಿ, ಭಕ್ತಿ, ತತ್ತ್ವ, ಧರ್ಮ ಭಾವನೆಗಳು ಅಣುರಣಿತವಾಗುತ್ತಿವೆ.

ಪ್ರಕಾಶಕರು.

# ನಾ ಕಂಡಂತೆ ನನ್ನ ಗುರುದೇವ

**ಸೋದರಿ ನಿವೇದಿತಾ**

# ನಾ ಕಂಡಂತೆ ನನ್ನ ಗುರುದೇವ

## ೧

### ಲಂಡನ್ನಿನಲ್ಲಿ

ನನ್ನ ಗುರುದೇವ ೧೯೩೫ ಮತ್ತು ೧೯೩೬ರಲ್ಲಿ ಲಂಡನ್ನಿನಲ್ಲಿ ಮಾಡಿದ ಉಪನ್ಯಾಸಗಳನ್ನು ಕೇಳಿದ್ದರೂ ಅವರ ಜೀವನದ ವಿಷಯವಾಗಿ ಭರತಖಂಡಕ್ಕೆ ಬರುವುದಕ್ಕೆ ಮುಂಚೆ ನನಗೆ ಏನೂ ಗೊತ್ತಿಲ್ಲದೇ ಇದ್ದುದು ಒಂದು ಸೋಜಿಗ. ಆದರೂ ಮತ್ತೊಂದು ದೃಷ್ಟಿಯಿಂದ ಅದು ನನ್ನ ಅದೃಷ್ಟವೆಂದೇ ಭಾವಿಸುತ್ತೇನೆ. ಹೀಗೆ ಅವರನ್ನು ಮುಂಚೆ ಅರಿಯದೇ ಇದ್ದುದರಿಂದಲೇ ಭಾರತೀಯರ ಹಿನ್ನೆಲೆಯಾದ ಅರಣ್ಯ, ನಗರ, ರಾಜಮಾರ್ಗಗಳ ದೃಷ್ಟಿಯಿಂದ ಅವರ ವ್ಯಕ್ತಿತ್ವವನ್ನು ನಾನು ಅರಿಯಲು ಸಾಧ್ಯವಾಯಿತೆಂದು ನನಗೆ ಭಾಸವಾಗುವುದು. ಪೌರಾತ್ಯ ಗುರುವನ್ನು ಪೌರಾತ್ಯದೇಶದಲ್ಲೇ ಅರಿತಂತೆ ಆಯಿತು. ಅತಿ ದೂರ ದಲ್ಲಿರುವ ಲಂಡನ್ನಿನಲ್ಲಿ ನಾನು ಅವರನ್ನು ಪ್ರಥಮಬಾರಿ ಸಂದರ್ಶಿಸಿದಾಗ ನನ್ನ ಮನಸ್ಸಿನಲ್ಲಿ ಮೂಡಿದ ಭಾವನಾತರಂಗಗಳಂತೆ, ಆ ಉಷ್ಣವಲಯದ ತಾಯ್ನಾಡಿನ ನನ್ನ ಗುರುದೇವನ ಮನದಲ್ಲಿಯೂ ಹಲವು ಭಾವನೆಗಳು ಮೂಡಿದ್ದಿರಬಹುದು ಎಂದು ಈಗ ಭಾವಿಸಬಹುದು. ಅವರನ್ನು ಪ್ರಥಮ ಬಾರಿ ಸಂದರ್ಶಿಸಿದ ಕಾಲ ನವೆಂಬರ್ ತಿಂಗಳ ಭಾನುವಾರದ ಮಧ್ಯಾಹ್ನ. ಸ್ಥಳ ವೆಸ್ಟ್ ಎಂಡಿನ ಬೈಠಕ್ ಖಾನೆ. ಅವರ ಮುಂದೆ ಸುತ್ತಲೂ ಸ್ನೇಹಿತರು ಕುಳಿತು ಕೇಳುತ್ತಿದ್ದರು. ಹಿಂದೆ ಒಲೆಯಲ್ಲಿ ಬೆಂಕಿ ಉರಿಯುತ್ತಿತ್ತು. ಅವರು ಪ್ರಶ್ನೆಗಳಾದ ಮೇಲೆ ಪ್ರಶ್ನೆಗಳಿಗೆ ಉತ್ತರವೀಯುತ್ತಿದ್ದರು. ಕೆಲವು ವೇಳೆ ತಮ್ಮ ಅಭಿಪ್ರಾಯವನ್ನು ಸಮರ್ಥಿಸುವುದಕ್ಕಾಗಿ ಸಂಸ್ಕೃತ ಶ್ಲೋಕ ಗಳನ್ನು ಉದಹರಿಸುತ್ತಿದ್ದರು. ಈ ದೃಶ್ಯ ಅವರ ಮನಸ್ಸಿನಲ್ಲಿ ಭರತಖಂಡದ ಉದ್ಯಾನ ಒಂದರಲ್ಲಿ ಸಂಜೆ ಕಳೆದು ರಾತ್ರಿಯಾಗುತ್ತಿರುವ ಅಪೂರ್ವ ದೃಶ್ಯ ವನ್ನೋ, ಸಂಜೆ ಹಳ್ಳಿಯ ಹೊರಗೆ ಭಾವಿಯ ಬಳಿ ಶಿಷ್ಯರ ಸಮೇತ ಕುಳಿತ ಚಿತ್ರವನ್ನೋ ಅಥವಾ ಗ್ರಾಮದ ಹೊರಗೆ ಮರದ ಕೆಳಗೆ ಚಿತ್ರವನ್ನೋ ಮೂಡುವಂತೆ ಮಾಡಿರಬಹುದು. ಇಂಗ್ಲೆಂಡಿನಲ್ಲಿ ಮತ್ತೊಮ್ಮೆ

ಗುರುವಿನಂತೆ ಸ್ವಾಮಿಜಿ ಇಷ್ಟು ಸರಳವಾಗಿ ಕುಳಿತಿದ್ದುದನ್ನು ಕಾಣಲಿಲ್ಲ. ಅನಂತರ ಅವರು ಯಾವಾಗಲೂ ಬಹಿರಂಗ ಉಪನ್ಯಾಸ ಮಾಡುತ್ತಿದ್ದರು, ಅಥವಾ ತುಂಬಿದ ಸಭೆಯಲ್ಲಿ ಜನ ಸಾಂಪ್ರದಾಯಿಕವಾಗಿ ಕೇಳಿದ ಪ್ರಶ್ನೆಗೆ ಉತ್ತರವೀಯುತ್ತಿದ್ದರು. ಪ್ರಥಮಬಾರಿ ಮಾತ್ರ ನಾವಿದ್ದುದು ಸುಮಾರು ಹದಿನೈದೊ ಹದಿನಾರೊ ಜನಗಳು, ಹಲವರು ಅವರ ಅತಿ ನಿಕಟ ಸ್ನೇಹಿತರು. ಅವರು ನಮ್ಮ ಮಧ್ಯದಲ್ಲಿ ಕಾಶಾಯವಸ್ತ್ರಧಾರಿಗಳಾಗಿ ಯಾವುದೋ ಅತಿದೂರದೇಶದ ಸಂದೇಶವನ್ನು ತಂದಂತೆ ಕುಳಿತಿದ್ದರು. ಮಾತಿನ ಮಧ್ಯೆ ಮಧ್ಯೆ "ಶಿವ, ಶಿವ" ಎಂಬುವ ವಿಚಿತ್ರ ಸ್ವಭಾವ. ಅವರ ದೃಷ್ಟಿಯಲ್ಲಿ ಮಾಧುರ್ಯ ಮತ್ತು ಭವ್ಯತೆಗಳೆರಡೂ ಸಮ್ಮಿಳಿತವಾಗಿದ್ದುವು. ಧ್ಯಾನಾವಸ್ಥೆಯಲ್ಲಿ ಬಹಳಕಾಲ ಕಳೆದವರ ಮೊಗದ ಮೇಲಿನ ಕಾಂತಿ ಅವರಲ್ಲಿತ್ತು! ಮೇರಿಯ ಮಗು ಕ್ರಿಸ್ತನ ಹುಬ್ಬಿನ ಮೇಲೆ ರ್‍ಯಾಫೀಲ್ [Raphael] ಚಿತ್ರಿಸಿದ ಪ್ರಶಾಂತಿಯಂತೆ ಇತ್ತು ಅದು.

ಆ ದಿನದ ಮಧ್ಯಾಹ್ನ ಈಗ್ಗೆ ಹತ್ತು ವರುಷಗಳ ಹಿಂದೆ. ಅಂದಿನ ಸಂಭಾಷಣೆಯ ಎಲ್ಲೋ ಕೆಲವು ಮಾತುಗಳು ಮಾತ್ರ ಇಂದು ಜ್ಞಾಪಕದಲ್ಲಿವೆ. ಪೌರಾತ್ಯರ ರೀತಿ ಅತಿ ಅದ್ಭುತವಾಗಿ ನುಡಿದ ಆ ಸಂಸ್ಕೃತ ಶ್ಲೋಕಗಳನ್ನಂತೂ ನಾನು ಎಂದಿಗೂ ಮರೆಯುವಂತೆ ಇಲ್ಲ. ಅದು ನಮ್ಮ ಚರ್ಚುಗಳಲ್ಲಿ ಹಾಡುವ ಗ್ರಿಗೋರಿಯನ್ ಸಂಗೀತದಂತೆ ಇದ್ದರೂ ಅದಕ್ಕಿಂತ ಬೇರೆಯಾಗಿತ್ತು.

ಸ್ವಾಮಿಜಿ ತಮಗೆ ಸಂಬಂಧಿಸಿದ ಪ್ರಶ್ನೆಗೆ ಉತ್ತರಕೊಡಲು ಒಪ್ಪಿಕೊಂಡರು. ಅವರಿಗೆ ಹಾಕಿದ ಒಂದು ಪ್ರಶ್ನೆಗೆ ತಕ್ಷಣ ಉತ್ತರಕೊಟ್ಟರು. ತಾವು ಪಾಶ್ಚಾತ್ಯದೇಶಗಳಿಗೆ ಬಂದುದು ತಮ್ಮ ಭಾವನೆಗಳನ್ನು ಅವರಿಗೆ ಕೊಟ್ಟು ಅವರ ಭಾವನೆಗಳನ್ನು ಸ್ವೀಕರಿಸುವುದಕ್ಕೆ; ಆಗಲೇ ವ್ಯಾಪಾರಾದಿ ಉದ್ಯಮಗಳಲ್ಲಿ ಇದು ನಡೆಯುತ್ತಿದೆ ಎಂದರು. ಇದಾದನಂತರ ಸಂಭಾಷಣೆ ಸರಾಗವಾಯಿತು. ಭಾರತದಲ್ಲಿರುವ ಹಲವು ದೇವರುಗಳನ್ನು ವಿವರಿಸುವಾಗ ಇವೆಲ್ಲಾ ಒಂದೇ ಭಗವಂತನ ವಿಭಿನ್ನ ಆವಿರ್ಭಾವ ಎಂದು ಹೇಳಿದರು. ಇದನ್ನು ಸಮರ್ಥಿಸುವುದಕ್ಕೆ ನಮಗೆ ಹಲವು ಇಂದ್ರಿಯಗಳಿದ್ದರೂ ಅವುಗಳ ಮೂಲಕ ನೋಡುವ ವ್ಯಕ್ತಿಯೊಂದೇ ಹೇಗೊ ಹಾಗೆಯೆ ಎಂದರು. ಗೀತೆಯಲ್ಲಿ ಕೃಷ್ಣ ಹಲವು ಮಣಿಗಳ ಮಧ್ಯದಲ್ಲಿರುವ ಸೂತ್ರ ತಾನೆ ಎನ್ನುವುದನ್ನು ವಿವರಿಸಿದರು.

ಹಿಂದೂಗಳು, ಕ್ರೈಸ್ತರಲ್ಲಿ ಇರುವಂತೆಯೇ ಪ್ರೀತಿಯನ್ನು ಶ್ರೇಷ್ಠ ತಮ ಭಾವನೆ ಎಂದು ಪರಿಗಣಿಸುವರು ಎಂದರು.

ಅವರು ಮತ್ತೊಂದನ್ನು ಹೇಳಿದರು. ಅದೇ ನನ್ನನ್ನು ಚಳಿಗಾಲದ ನಂತರ ಬೇರೊಂದು ಆಲೋಚನಾ ಪ್ರಪಂಚಕ್ಕೇ ಒಯ್ದಿತು. ಅದೇ ದೇಹ ಮತ್ತು ಮನಸ್ಸು ಎರಡೂ ಆತ್ಮನಿಂದ ಪ್ರೇರಿತವಾಗಿ ಆತ್ಮನ ಆಧಾರದ ಮೇಲೆ ಇದೆ ಎಂಬುದು.

ಶ್ರೀ ಗುರುದೇವರು ಹಿಂದೂ ಮತ್ತು ಬೌದ್ಧಧರ್ಮಗಳನ್ನು ವಿವರಿಸು ತ್ತಿದ್ದರು. ಬೌದ್ಧರು ಇಂದ್ರಿಯಗಳು ಕೊಡುವ ಸಮಾಚಾರ ಸತ್ಯ ಎಂದು ನಂಬಿದ್ದರು ಎಂಬ ಮಾತುಗಳು ನನಗೆ ಇನ್ನೂ ಜ್ಞಾಪಕದಲ್ಲಿದೆ.

ಈ ದೃಷ್ಟಿಯಿಂದ ಬೌದ್ಧರಿಗೂ ಆಧುನಿಕ ಅಜ್ಞೇಯವಾದಿಗಳಿಗೂ ಎಷ್ಟೋ ವಿರೋಧವಿದೆ. ಆಧುನಿಕ ಅಜ್ಞೇಯವಾದಿಗಳು (Agnostics) ಇಂದ್ರಿಯ ವೇದನೆಗಳು ಕೇವಲ ಭ್ರಮೆಯ ಆಧಾರದಮೇಲೆ ನಿಂತಿವೆ ಎನ್ನುವರು. ಇದರಂತೆಯೇ ನಮ್ಮ ಅನುಮಾನವೆಲ್ಲ (Inference) ಹಿಂದೂಗಳ ಭಾವಗಳಿಗೆ ಸಮೀಪವರ್ತಿಯಾದಂತೆ ಆಯಿತು.

"ನಂಬಿಕೆ" ಎಂಬ ಪದವನ್ನು ಅವರು ವಿರೋಧಿಸಿ ಅದರ ಬದಲು ಸಾಕ್ಷಾತ್ಕಾರವಿರಬೇಕು ಎಂದರು. ಜಾತಿಗಳ ವಿಷಯವಾಗಿ ಮಾತ ನಾಡುತ್ತ ಇಂಡಿಯಾದೇಶದಲ್ಲಿ ರೂಢಿಯಲ್ಲಿರುವ "ಒಂದು ಚರ್ಚಿನಲ್ಲಿ ಹುಟ್ಟುವುದೇನೊ. ಒಳ್ಳೆಯದು, ಆದರೆ ಅಲ್ಲೇ ಸಾಯುವುದು ಭಯಾನಕ" ಎಂದು ಹೇಳಿದರು.

ಪುನರ್ಜನ್ಮದ ಸಿದ್ಧಾಂತವನ್ನು ಅವರು ಬಹುಶಃ ಅಂದು ಎತ್ತಿದರು ಎಂದು ಕಾಣುವುದು. ಕರ್ಮ, ಭಕ್ತಿ, ಜ್ಞಾನ, ಈ ಮೂರು ಮುಕ್ತಿಗೆ ಹಾದಿ ಎಂದು ಮಾತನಾಡಿದಂತೆ ಕಾಣುವುದು. ಮಾನವನಲ್ಲಿ ಸುಪ್ತ ವಾಗಿರುವ ಅದ್ಭುತ ಶಕ್ತಿಯ ವಿಷಯವಾಗಿ ಮಾತನಾಡಿದರು. ಎಲ್ಲಾ ಧರ್ಮಗಳ ಸಂದೇಶವೇ ತ್ಯಾಗ ಎಂದರು.

ಭರತಖಂಡದಲ್ಲಿ, ಪುರೋಹಿತರು ಮತ್ತು ದೇವಸ್ಥಾನಗಳಿಗೂ ಶ್ರೇಷ್ಠ ಆಧ್ಯಾತ್ಮಿಕ ಜೀವನಕ್ಕೂ ಯಾವ ಸಂಬಂಧವೂ ಇಲ್ಲ; ಶ್ರೇಷ್ಠ ಆಧ್ಯಾತ್ಮಿಕ ಜೀವಿಗಳು ಸ್ವರ್ಗಕ್ಕೆ ಹೋಗುವುದನ್ನು ತುಂಬಾ ತುಚ್ಛವಾಗಿ ಕಾಣುವರು ಎಂಬುದನ್ನು ವಿವರಿಸಿದರು.

ಆತ್ಮ ಮುಕ್ತಿಯೇ ಪೌರಾತ್ಯರ ಆದರ್ಶ. ಮಾನವಕೋಟಿಯ

ಹಿತಚಿಂತನೆಯೇ ಪಾಶ್ಚಾತ್ಯರ ಆದರ್ಶ. ಇವುಗಳಿಗೆ ಇರುವ ತೋರಿಕೆಯ ವ್ಯತ್ಯಾಸಕ್ಕೆ ಸಂಬಂಧಪಟ್ಟ ವಿಷಯಗಳನ್ನು ಹೇಳಿದರು ಎಂದು ಕಾಣು ವುದು. ಅವರು ಅಂದು ಸಮಾಜವೆಂಬ ಪದವನ್ನು ಬೇರೊಂದು ದೃಷ್ಟಿ ಯಿಂದ ಉಪಯೋಗಿಸಿದರು. ಆ ಭಾವನೆಯನ್ನು ನಾನು ಕೇಳಿದ್ದು ಅದೇ ಪ್ರಥಮ ಎಂದು ತೋರುವುದು. ಅವರು ತಮ್ಮ ಆದರ್ಶವನ್ನು ವ್ಯಕ್ತಪಡಿಸಿ ನಮ್ಮ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತಿದ್ದರು ಎಂದು ಕಾಣುವುದು. ಇದ ರಿಂದ ಸಮಾಜಕ್ಕೆ ಯಾವ ಪ್ರಯೋಜನವೂ ಆಗುವುದಿಲ್ಲ ಎನ್ನಬಹುದು ನೀವು ಎಂದರು. ನಿಮ್ಮ ಆಕ್ಷೇಪಣೆಯನ್ನು ಒಪ್ಪಿಕೊಳ್ಳಬೇಕಾದರೆ ಸಮಾಜ ರಕ್ಷಣೆಯೇ ಒಂದು ಪರಮ ಆದರ್ಶ ಎಂಬುದನ್ನು ನೀವು ದೃಢಪಡಿಸ ಬೇಕಾಗಿದೆ ಎಂದರು.

ನಾನು ಆಗ ಅವರನ್ನು ತಿಳಿದಮಟ್ಟಿಗೆ ಮಾನವಕೋಟಿ (humanity) ಎಂಬುದನ್ನು ಸಮಾಜ ಎಂಬ ದೃಷ್ಟಿಯಿಂದ ಉಪಯೋಗಿಸುತ್ತಿದ್ದರು. ಕೊನೆಗೆ ಪ್ರಪಂಚ ನಿಷ್ಪ್ರಯೋಜನವಾಗುವುದರಿಂದ ಅದಕ್ಕಾಗಿ ಮಾಡಿದ ಕೆಲಸಗಳೂ ಹಾಗೆಯೇ ವ್ಯರ್ಥ ಎಂಬಂತೆ ಇತ್ತು ಅವರ ಬೋಧನೆ. ಇದೇ ಅವರ ನಿಜವಾದ ಅರ್ಥ? ಹೀಗಿದ್ದರೆ ಮಾನವಕೋಟಿಯ ಸೇವೆಯೊಂದೇ ಅವರ ಏಕಮಾತ್ರ ಧ್ಯೇಯ ಎಂಬುದನ್ನು ರಾಜಿಮಾಡುವುದು ಎಂತು? ಅಥವಾ ಅವರು ಕೇವಲ ಒಂದು ಆದರ್ಶವನ್ನು ಹೇಳಿ ಅದರ ಯೋಗ್ಯತೆಗೆ ತಕ್ಕ ಬೆಲೆ ಸಿಕ್ಕಲಿ ಎಂದು ಅನಾಸಕ್ತರಾಗಿ ನಿಲ್ಲುತ್ತಿದ್ದರೊ? ಅಥವಾ ಯಾವುದನ್ನು ಅವರು Society ಎನ್ನುತ್ತಿದ್ದರೊ ಅದು ಸಮಾಜ ಎಂಬ ಪೌರಾತ್ಯಪದದ ಭಾಷಾಂತರವೊ? ಪೌರಾತ್ಯರ ಸಮಾಜ ಎಂಬ ಭಾವನೆ ಯಲ್ಲಿ, ನೈತಿಕ ಭಾವನೆಗಳೂ, ಮತ್ತು ನಮ್ಮ ಚರ್ಚಿಗೆ ಸಂಬಂಧಿಸಿದ ಭಾವನೆಗಳೂ ಸೇರಿವೆ.

ಅವರು, ಪರಿವ್ರಾಜಕಾಚಾರ್ಯರಾದ ತಮ್ಮ ಪಾತ್ರದ ಪ್ರಶ್ನೆಯನ್ನು ತೆಗೆದುಕೊಂಡು, ಭಾರತೀಯರು, ಧಾರ್ಮಿಕ ಸಂಸ್ಥೆಗೆ ಅಥವಾ ಒಂಧು ಚರ್ಚಿ ನಲ್ಲಿ ಕೊನೆಗಾಣುವ ಸಂಸ್ಥೆಗೆ ಅಷ್ಟು ಮಹತ್ವವನ್ನು ಕೊಡುವುದಿಲ್ಲ ಎಂಬು ದನ್ನು ವಿವರಿಸಿದರು. ಸಂಸ್ಥೆಗಳು ಯಾವಾಗಲೂ ಹೊಸಬಗೆಯ ಲೋಪ ದೋಷಗಳಿಗೆ ಮೂಲವಾಗುತ್ತವೆ ಎಂದು ನಾವು ನಂಬುತ್ತೇವೆ ಎಂದು ಅವರು ಹೇಳಿದರು.

ಪಾಶ್ಚಾತ್ಯ ದೇಶದಲ್ಲಿ ಆಗ ಪ್ರಚಾರದಲ್ಲಿದ್ದ ಕೆಲವು ಧಾರ್ಮಿಕ ಪಂಗಡ

ಗಳು ದ್ರವ್ಯದಾಸೆಯಿಂದ ಶೀಘ್ರವಾಗಿ ನಾಶವಾಗುವುವು ಎಂದು ಭವಿಷ್ಯ ನುಡಿದರು. ಮಾನವ ಅಸತ್ಯದಿಂದ ಸತ್ಯಕ್ಕೆ ಹೋಗುತ್ತಿಲ್ಲ, ಒಂದು ಸತ್ಯದಿಂದ ಮತ್ತೊಂದಕ್ಕೆ ಹೋಗುತ್ತಿರುವನು ಎಂದರು.

ಹಲವು ದೃಷ್ಟಿಕೋಣಗಳಿಂದ ಇವರು ಪದೇಪದೇ ಸಮರ್ಥಿಸುತ್ತಿದ್ದ ಅತಿ ಮುಖ್ಯವಾದ ಭಾವನೆ ಇದಾಗಿತ್ತು: ಅದೇ ಎಲ್ಲಾ ಧರ್ಮಗಳೂ ಸತ್ಯ, ನಾವು ಯಾವ ಅವತಾರವನ್ನೂ ದೂರುವಂತೆ ಇಲ್ಲ. ಏಕೆಂದರೆ ಇವರೆಲ್ಲಾ ಒಂದೇ ಭಗವಂತನ ಆವಿರ್ಭಾವ. ಆಗ ಗೀತೆಯ ಈ ಮುಖ್ಯವಾದ ಶ್ಲೋಕವನ್ನು ಉದಹರಿಸುತ್ತಿದ್ದರು:

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ

ನಾವು ಇವರನ್ನು ಆಗ ಲಂಡನ್ನಿನಲ್ಲಿ 'ಹಿಂದೂಯೋಗಿ' ಎಂದು ಕರೆಯುತ್ತಿದ್ದೆವು. ನಾವು ಹೆಚ್ಚು ಸಂಪ್ರದಾಯಸ್ಥರೂ ಅಲ್ಲ, ಅಥವಾ ಇವರು ಹೇಳುವುದನ್ನೆಲ್ಲಾ ಒಪ್ಪಿಕೊಳ್ಳುವಂತಹವರೂ ಅಲ್ಲ. ಬಿಳಿಯ ಕೂದಲಿನ, ಪ್ರಾಮುಖ್ಯವಾದ ಹೆಸರಿನ, ಸ್ವಾಮಿಜಿ ಎಡಭಾಗದಲ್ಲಿ ಕುಳಿತ ಹೆಂಗಸು ಅತಿ ವಿನಯದಿಂದ ಪ್ರಶ್ನೆಹಾಕುವುದರಲ್ಲಿ ಅಗ್ರಗಣ್ಯಳಾಗಿದ್ದಳು. ನಮ್ಮಲ್ಲೆಲ್ಲಾ ಸಂಪ್ರದಾಯಕ್ಕೆ ಅತೀತವಾಗಿ ಹೋದವರಲ್ಲಿ ಆಕೆಯೇ ಪ್ರಮುಖಳು ಎಂದು ಹೇಳಬಹುದು. ಆಕೆ ಫ್ರೆಡರಿಕ್ ಡೆನಿಸನ್ ಎಂಬುವನ ಸ್ನೇಹಿತೆ ಮತ್ತು ವಿದ್ಯಾರ್ಥಿನಿ ಆಗಿದ್ದಳು. ನಮ್ಮ ಅಭ್ಯಾಗತೆ ಮತ್ತು ಇನ್ನೂ ಕೆಲವರು ಆಧುನಿಕ ಮಾನಸಿಕ ಶಾಸ್ತ್ರದ ವಿಷಯಗಳ ಮೇಲೆ ನಿಂತ ಚಳುವಳಿಗಳಲ್ಲಿ ಆಸಕ್ತರಾಗಿದ್ದರು. ನಮ್ಮಲ್ಲಿ ನಂಬುವುದಕ್ಕೆ ಒಪ್ಪದವರೇ ಆ ದಿನದ ಮಧ್ಯಾಹ್ನದ ಪ್ರವಚನಕ್ಕಾಗಿ ಆರಿಸಲ್ಪಟ್ಟಿದ್ದರು.

ನಾವು ಅಂದು ಸ್ವಾಮಿಜಿ ಅವರು ತಂಗಿದ್ದ ಮನೆಯ ಗೃಹಸ್ಥ ಮತ್ತು ಗೃಹಿಣಿಯರನ್ನು ಬೀಳ್ಕೊಡುವಾಗ ಇವರ ಬೋಧನೆ ಏನೂ ಹೊಸದಲ್ಲ ಎಂದು ಟೀಕಿಸಿದೆವು. ನಮ್ಮ ದರ್ಪ ಮತ್ತು ಅನಾದರಣೆಗೆ ಕಾರಣ ಅನೌಚಿತ್ಯ ಉತ್ಸಾಹಕ್ಕೆ ಎಡೆಗೊಡಕೂಡದು ಎಂಬುದೇ ಎಂದು ತೋರುವುದು. ಇವುಗಳನ್ನೆಲ್ಲಾ ಹಿಂದೆಯೇ ಹಲವರು ಹೇಳಿರುವರು ಎಂದುಕೊಂಡೆವು.

ಆದರೆ ನನಗಾದರೊ ಮುಂದಿನ ವಾರ ಕೆಲಸದಲ್ಲಿ ನಿರತಳಾದಾಗ

ಒಂದು ಹೊಸ ವ್ಯಕ್ತಿಯ ಹೊಸ ಸಂದೇಶವನ್ನು ಹಾಗೆ ಅಲ್ಲಗಳೆಯುವುದು ಔದಾರ್ಯವೂ ಅಲ್ಲ ನ್ಯಾಯವೂ ಅಲ್ಲ ಎನ್ನಿಸಿತು. ಇವರು ಹೇಳಿದ ವಿಷಯ ಗಳಲ್ಲಿ ಒಂದೊಂದನ್ನೇ ಹಿಂದೆ ಯಾರೋ ಹೇಳಿರಬಹುದು, ಅಥವಾ ಆಲೋಚಿಸಿರಬಹುದು. ಆದರೆ ಅವನ್ನೆಲ್ಲಾ ಒಟ್ಟಿಗೇ, ನಾನು ಯಾವುದನ್ನು ಶ್ರೇಷ್ಠತಮ ಭಾವನೆ ಎಂದು ಭಾವಿಸಿದ್ದೆನೊ ಅದನ್ನೆಲ್ಲಾ ಒಂದು ಗಂಟೆಯಲ್ಲಿ ಹೇಳುವಂತ ಮಹಾಧೀಮಂತನನ್ನು ಇದಕ್ಕೆ ಮುಂಚೆ ನೋಡುವ ಭಾಗ್ಯ ನನ್ನ ದಾಗಿರಲಿಲ್ಲ. ಆದಕಾರಣ ಸ್ವಾಮಿಜಿ ಇನ್ನೂ ಲಂಡನ್ನಿನಲ್ಲಿ ಇರುವಾಗ ಮತ್ತೊಮ್ಮೆ ಅವರನ್ನು ಕೇಳುವ ಅವಕಾಶವನ್ನು ತೆಗೆದುಕೊಂಡೆ.

ಭವ್ಯ ಸಂಗೀತ ನಮ್ಮಲ್ಲಿ ಉದ್ದೀಪನಗೊಳಿಸುವ ಭಾವನೆ, ಅದನ್ನು ನಾವು ಪುನಃ ಪುನಃ ಕೇಳಿದಂತೆ ಆಳವಾಗುತ್ತಾ ಬರುವುದು. ಅದರಂತೆಯೇ ಅವರ ಎರಡು ಉಪನ್ಯಾಸಗಳ ಟಿಪ್ಪಣಿಯನ್ನು ಇಂದು ಪುನಃ ಓದಿ ನೋಡಿ ದಾಗ ಅಂದಿಗಿಂತ ಈಗ ಅದ್ಭುತವಾಗಿ ಕಂಡವು. ಗುರುದೇವನನ್ನು ನಾನಂದು ನೋಡುತ್ತಿದ್ದ ದೃಷ್ಟಿ ಅಜ್ಞಾನಜನ್ಯವಾದುದು. ನಾನು ಅದ ಕ್ಕಾಗಿ ಇಂದು ಎಷ್ಟು ಪಶ್ಚಾತ್ತಾಪಪಟ್ಟರೂ ಸಾಲದಾಗಿದೆ. "ವಿಶ್ವ ಒಂದು ಜೇಡರ ಬಲೆಯಂತೆ, ಮನಸ್ಸೇ ಜೇಡರಹುಳ; ಮನಸ್ಸು ಒಂದು ಮತ್ತು ಹಲವು". ಈ ವಿಷಯಗಳನ್ನು ಅವರು ಹೇಳಿದಾಗ ನಾನು ಅವನ್ನು ತಿಳಿದುಕೊಳ್ಳುವ ಸ್ಥಿತಿಯಲ್ಲೇ ಇರಲಿಲ್ಲ. ಅವರು ಹೇಳಿದ್ದು ಆಶ್ಚರ್ಯಕರ ವಾಗಿದ್ದರೂ, ಅದನ್ನು ಸ್ವೀಕರಿಸುವಂತೆಯೂ ಇರಲಿಲ್ಲ ಮತ್ತು ಟೀಕಿಸು ವಂತೆಯೂ ಇರಲಿಲ್ಲ ಎಂದು ನಾನು ಅಂದು ಬರೆದುಕೊಂಡಿದ್ದೆ. ಅವರು ಮಾರನೆ ವರುಷ ಮಾಡಿದ ಉಪನ್ಯಾಸವನ್ನು ಕೇಳಿದಾಗ, ಮತ್ತು ನಾನು ಭರತಖಂಡದಲ್ಲಿ ಕಾಲಿಟ್ಟ ಮೊದಲನೆದಿನದವರೆಗೂ ಇದೇ ದೃಷ್ಟಿಯೇ ನನ್ನಲ್ಲಿ ಬೇರೂರಿತ್ತು ಎಂಬುದು ನನ್ನಲ್ಲಿ ಬಹುಪಾಲು ಸತ್ಯದಂತೆ ಕಾಣುವುದು.

ಸ್ವಾಮಿಜಿ ಬೋಧನೆಗಳಲ್ಲಿ ತಕ್ಷಣ ಅದರ ಸತ್ಯವನ್ನು ತಿಳಿದುಕೊಳ್ಳ ತಕ್ಕಂಥವು ಕೆಲವು ಇದ್ದವು. ಸಾಧಾರಣ ಜನ ಹೇಗೆ ತಮ್ಮ ಧರ್ಮವೇ ಸತ್ಯವೆಂದು ನೋಡುತ್ತಾರೊ ಹಾಗೆ ಅಲ್ಲದೆ ಇದ್ದರೂ, ನಿಜವಾಗಿ ಎಲ್ಲ ಧರ್ಮಗಳೂ ಸತ್ಯ ಎಂಬುದನ್ನು ನಮ್ಮಲ್ಲಿ ಕೆಲವರು ತಕ್ಷಣ ಒಪ್ಪಿ ಕೊಂಡೆವು. ನಿಜವಾಗಿ ನಿರಾಕಾರನಾದ ಬ್ರಹ್ಮ ಇಂದ್ರಿಯಗಳೆಂಬ ಮಂಜಿನ ಮೂಲಕ ನೋಡಿದಾಗ ಸಾಕಾರನಾದ ಈಶ್ವರನಂತೆ ಕಾಣುವನು ಎಂದರು. ಈ ಭಾವನೆಯ ಸೌಂದರ್ಯಕ್ಕೆ ಮನಸೋತು ಸ್ಥಂಭಿತರಾದೆವು. ಒಂದು

ಕ್ರಿಯೆಯ ಹಿಂದೆ ಇರುವ ಭಾವ ಕ್ರಿಯೆಗಿಂತ ಪ್ರಬಲವಾದುದು ಎಂದು ಹೇಳಿದಾಗ ಅಥವಾ ಶಾಕಾಹಾರವನ್ನು ಸಮರ್ಥಿಸಿದಾಗ, ಇವುಗಳನ್ನು ಪರೀಕ್ಷೆಮಾಡಿ ನೋಡಬಹುದು ಎನ್ನಿಸಿತು. ಆದರೆ ಒಟ್ಟಿನಲ್ಲಿ ಇವರ ಸಿದ್ಧಾಂತವನ್ನು ನಾನು ಅನುಮಾನದಿಂದ ನೋಡಿದೆ. ಇತರ ಧಾರ್ಮಿಕ ನಂಬಿಕೆಗಳಂತೆ, ಇವುಗಳನ್ನೆಲ್ಲ ಒಪ್ಪಿಕೊಳ್ಳುತ್ತಾ ಹೋದರೆ ಕೊನೆಗೆ ಅವನು ಎಲ್ಲಕ್ಕೂ ಅತೀತನಾಗಿ ಎಲ್ಲವನ್ನೂ ತಿರಸ್ಕರಿಸಬೇಕಾಗುವುದು. ಇಂತಹ ಅನುಭವದ ಪರಿಣಾಮವಾಗಿ ಬರುವ ಯಾತನೆ ಮತ್ತು ಅವಮಾನ ದಿಂದ ಒಬ್ಬ ತತ್ತರಿಸಬೇಕಾಗುವುದು.

ಈಗ ಅದನ್ನು ಸಾಕಷ್ಟು ವಿವರಿಸುವುದಕ್ಕೆ ಸಾಧ್ಯವಿಲ್ಲ. ಸ್ವಾಮಿಜಿ ಇಂಗ್ಲೆಂಡನ್ನು ಬಿಡುವುದಕ್ಕೆ ಮುಂಚೆ ಅವರನ್ನು "ಗುರುದೇವ" ಎಂದು ಕರೆಯುವಕಾಲ ಬಂತು. ಆ ವ್ಯಕ್ತಿಯಲ್ಲಿದ್ದ ಅದ್ಭುತ ಶಕ್ತಿಯ ಪರಿಚಯ ವಾಗಿತ್ತು. ಸ್ವಾಮಿಜಿಗೆ ಅವರ ದೇಶದ ಜನರ ಮೇಲೆ ಇದ್ದ ಪ್ರೀತಿಗೆ ದಾಸಳಾಗಲು ನಾನು ಇಚ್ಛಿಸಿದೆ. ಆದರೆ ನಾನು ಸೋತದ್ದು ಅವರ ಶೀಲಕ್ಕೆ. ಗುರುವಿನ ದೃಷ್ಟಿಯಿಂದ ಅವರು ಒಂದು ಸಿದ್ಧಾಂತವನ್ನು ಕೊಟ್ಟರೂ ಸ್ವೀಕರಿಸುವವರು ಯಾವಾಗಲೂ ಅದಕ್ಕೇ ದಾಸರಾಗಿರಬೇಕಾಗಿಲ್ಲ. ಸತ್ಯ ಅವರನ್ನು ಬೇರೆಕಡೆಗೆ ಒಯ್ದರೆ ಅದನ್ನು ಅನುಸರಿಸುವುದಕ್ಕೆ ಸ್ವಾತಂತ್ರ್ಯ ವಿತ್ತು. ಈ ದೃಷ್ಟಿಯಿಂದ ನಾನು ಅವರ ಶಿಷ್ಯಳಾದೆ. ಉಳಿದವುಗಳಿಗಾಗಿ ನಾನು ಇದು ಎಷ್ಟುಮಟ್ಟಿಗೆ ಸತ್ಯ ಎಂಬುದನ್ನು ತಿಳಿಯುವುದಕ್ಕಾಗಿ ಅವರ ಬೋಧನೆಯನ್ನು ಓದತೊಡಗಿದೆ. ಆದರೆ ಅವರು ಹೇಳುವುದೆಲ್ಲ ಸತ್ಯ ಎಂದು ನನಗೆ ಅನುಭವವಾದಾಗ ಮಾತ್ರ ಅವರನ್ನು ಹಿಂಬಾಲಿಸಲು ಯತ್ನಿಸಿದೆ. ಆ ಸಮಯದಲ್ಲಿ ಅವರ ವ್ಯಕ್ತಿತ್ವಕ್ಕೆ ಮಾರುಹೋಗಿದ್ದರೂ, ಅವರನ್ನು ಇತರ ಮೇಧಾವಿಗಳೊಂದಿಗಾಗಲಿ ಪ್ರತಿಭಾವಂತರೊಂದಿಗಾಗಲಿ ಹೋಲಿಸಿದಾಗ, ಅವರೆಷ್ಟು ಎಲ್ಲರಿಗಿಂತಲೂ ಮುಂದೆಹೋಗಿದ್ದರು ಎಂಬುದು ಅರ್ಥವಾಗಲಿಲ್ಲ.

ನನ್ನ ಈ ಅನುಮಾನಿಸುವ ಸ್ವಭಾವ ಅವರ ಉಪನ್ಯಾಸವನ್ನು ಕೇಳುವುದಕ್ಕೆ ಬರುತ್ತಿದ್ದವರಿಗೆಲ್ಲಾ ಗೊತ್ತಿತ್ತು. ಇವರಲ್ಲಿ ಅದೃಷ್ಟಶಾಲಿನಿ ಯಾದ ವಿದ್ಯಾರ್ಥಿನಿಯೊಬ್ಬಳು ಸ್ವಾಮಿಜಿ ಸಮ್ಮುಖದಲ್ಲಿ, ತಾನು ಸ್ವಾಮಿಜಿ ಹೇಳಿದುದನ್ನೆಲ್ಲಾ ಮರುಮಾತಿಲ್ಲದೆ ಸ್ವೀಕರಿಸಿದೆ ಎಂದು ನನ್ನನ್ನು ಹಂಗಿಸುತ್ತಿದ್ದಳು. ಸ್ವಾಮಿಜಿ ಆ ಸಮಯದಲ್ಲಿ ಈ ಸಂಭಾಷಣೆಗೆ ಸ್ವಲ್ಪವೂ

ಗಮನಕೊಡಲಿಲ್ಲ. ಆದರೆ ಅನಂತರ ಒಂದುಸಲಿ ಅವರೇ ಹೀಗೆಂದರು: "ಒಮ್ಮೆಯೇ ಸ್ವೀಕರಿಸಲು ಸಾಧ್ಯವಾಗಲಿಲ್ಲವಲ್ಲ ಎಂದು ಯಾರೂ ವ್ಯಥೆ ಪಡೆದಿರಲಿ. ನಾನೇ ನನ್ನ ಗುರುವಿನೊಡನೆ ಆರು ವರುಷಗಳು ಹೋರಾಡಿದೆ. ಇದರ ಪರಿಣಾಮವಾಗಿ ಹಾದಿಯ ಪ್ರತಿಯೊಂದು ಅಂಗುಲವೂ ನನಗೆ ಗೊತ್ತಾಯಿತು. ಪ್ರತಿಯೊಂದು ಅಂಗುಲವೂ!"

ನಾನಂದು ಕೇಳಿದುದರಲ್ಲಿ ಒಂದೆರಡು ವಿಷಯಗಳು ನನ್ನ ಮನಸ್ಸಿನಲ್ಲಿ ಚೆನ್ನಾಗಿ ನಿಂತಿವೆ. ಒಂದು ಸಮಯದಲ್ಲಿ ಕ್ರೈಸ್ತಧರ್ಮ ಎಂದರೆ ದೇವರನ್ನು ತಂದೆ ಎಂದು ಸಾಕ್ಷಾತ್ಕಾರಮಾಡಿಕೊಳ್ಳುವುದು ಎಂದು ಭಾವಿಸಿದ್ದೆ. ಆದರೆ ಈ ಚಿಹ್ನೆಯಲ್ಲಿ ನನಗೆ ನಂಬಿಕೆಯೇ ಹೊರಟುಹೋಗಿತ್ತು. ಇದು ನಿಜವಾಗಿ ಸತ್ಯವೇ ಅಲ್ಲವೆ, ಅದನ್ನು ಬಿಟ್ಟು ಕೇವಲ ಒಂದು ಆದರ್ಶದ ದೃಷ್ಟಿಯಿಂದ ಇದರ ಪರಿಣಾಮವೇನು ಎಂಬುದನ್ನು ತಿಳಿಯಬೇಕೆಂದು ಇದ್ದೆ. ಇಂತಹ ಆದರ್ಶದಿಂದ ಇದನ್ನು ನಂಬುವವರ ಮೇಲೆ ಮತ್ತು ನಂಬಿಕೆ ಇಟ್ಟ ಜನಾಂಗದ ಮೇಲೆ ದೊಡ್ಡದೊಂದು ಪರಿಣಾಮ ಉಂಟಾಗುವುದು. ಆದರೆ ತುಲನೆಮಾಡಿನೋಡುವುದಕ್ಕೆ ಸಾಕಷ್ಟು ವಿಷಯಗಳು ಅಭಾವವಾಗಿದ್ದ ಕಾರಣ ಈ ಪ್ರಶ್ನೆಯನ್ನು ಇದುವರೆಗೆ ಬಗೆಹರಿಸಲು ಸಾಧ್ಯವಾಗಲಿಲ್ಲ. ಆದರೆ ಈ ಮಹಾಮಹಿಮರಾದರೊ ಹೀಗೆ ಭಗವದ್‌ಭಾವನೆಯ ಮೇಲೆ ನಿಂತ ಐದು ವಿಧವಾದ ಉಪಾಸನೆಗಳನ್ನು ಹೇಳಿದರು. ಧಾರ್ಮಿಕ ಭಾವನೆಗಳನ್ನು ವರ್ಗೀಕರಿಸುವುದರಿಂದಲೇ ಪ್ರಾರಂಭವಾದ ಧರ್ಮವನ್ನು ಇವರು ಬೋಧಿಸಿದರು.

ಪ್ರಥಮಬಾರಿ ನಾನು ಕೇಳಿದ ಭಾರತೀಯ ಭಾವನೆಯ ವೈಶಿಷ್ಟ್ಯ ಮತ್ತು ಭವ್ಯತೆಗೆ ನಾನು ಮಾರುಹೋದೆ. ಅವರು ಉದಾಹರಣೆಗೆ ಉಪಯೋಗಿಸುತ್ತಿದ್ದ ನಾವೀನ್ಯತೆ ಮತ್ತು ಹೊಸ ಆಲೋಚನೆಗಳು ನನ್ನ ಮನಸ್ಸಿನಲ್ಲಿ ಚಿರಸ್ಥಾಯಿಯಾದವು. ಒಬ್ಬ ಕಳ್ಳನನ್ನು ಅಟ್ಟಿಸಿಕೊಂಡು ಹೋದ ಸಾಧುವಿನ ಕಥೆ. ಕಳ್ಳ ಕದಿಯುವುದಕ್ಕೆ ಬಂದಿದ್ದ. ಯಾರೋ ಇವನನ್ನು ಕಂಡಾಗ ಅಂಜಿ ಕೆಲವು ಪಾತ್ರೆಗಳನ್ನು ಅಲ್ಲಿಯೇ ಬಿಟ್ಟು ಓಡಿದ. ಸಾಧು ಅವನು ಬಿಟ್ಟ ಪಾತ್ರೆಗಳನ್ನು ತೆಗೆದುಕೊಂಡು ಅವನನ್ನು ಹಿಂಬಾಲಿಸಿಹೋಗಿ ಪಾತ್ರೆಗಳನ್ನು ಅವನ ಹತ್ತಿರ ಇಟ್ಟು ಹೀಗೆ ಹೇಳಿದನು: "ಹೇ ದೇವರೆ, ನೀನು ಅಲ್ಲಿದ್ದುದು ನನಗೆ ಗೊತ್ತಿರಲಿಲ್ಲ. ಇವು ನಿನ್ನವು, ತೆಗೆದುಕೊ, ನನ್ನನ್ನು ಕ್ಷಮಿಸು." ಇದೇ ಸಾಧುವಿಗೆ ಒಂದು ಸಲಿ ಹಾವು ಕಚ್ಚಿತು. ರಾತ್ರಿ ಬಹಳ

ಹೊತ್ತಿನ ಮೇಲೆ ಪ್ರಜ್ಞೆ ಬಂದ ಸಮಯದಲ್ಲಿ "ನನ್ನ ಪ್ರಿಯತಮನಿಂದ ಒಬ್ಬ ಬೇಹುಗಾರ ಬಂದಿದ್ದ" ಎಂದನು. ಸ್ವಾಮಿಜಿ ಮರಳುಕಾಡಿನಲ್ಲಿ ತಮ್ಮ ಸ್ವಂತ ಅನುಭವದಿಂದ ಹೇಳಿದ ಮರುವನದ ಉದಾಹರಣೆಯೊಂದು ಇದೆ. ಇವರು ಮರೀಚಿಕೆಯನ್ನು ಹದಿನೈದು ದಿನದಿಂದ ನೋಡುತ್ತಿದ್ದರು. ಅದನ್ನು ಸರೋವರವೆಂತಲೇ ಭ್ರಮಿಸಿದ್ದರು. ಬಾಯಾರಿಕೆಯಾಗಿ ಅದರಲ್ಲಿ ನೀರನ್ನು ಕುಡಿಯಲು ಹೋದಾಗ ಮಾತ್ರ ಅದು ಬರೀ ಭ್ರಾಂತಿ ಎಂದು ಗೊತ್ತಾಯಿತು. ಅವರಿಗೆ ಅನಂತರ ಹಿಂದೆ ನೋಡಿದ ಮರೀಚಿಕೆಯೇ ಕಂಡರೂ ಅದು ಸುಳ್ಳು ಎಂಬುದು ತಕ್ಷಣ ಹೊಳೆಯುವುದು. ಇವುಗಳನ್ನೆಲ್ಲಾ ನಿರ್ಧರಿಸಲು ಸಾಧ್ಯವಾದುದೇ ಅವರ ಅನುಭವ. ಮರಳುಕಾಡಿನ ಪ್ರಯಾಣ, ಜೀವನದ ಪಯಣದಂತೆ ಇದೆ ಎನ್ನುವ ತತ್ತ್ವವೇ ಒಂದು ದೊಡ್ಡ ಶಿಕ್ಷಣದಂತೆ ಇತ್ತು.

ಸ್ವಾಮಿಜಿಯವರ ಬೋಧನೆಯಲ್ಲಿ ಮೂರನೆಯ ಮತ್ತೊಂದು ವಿಷಯ ಇತ್ತು. ಇದರ ಅನಿರೀಕ್ಷತೆಯೆ ವಿಸ್ಮಯಕಾರಿಯಾಗಿತ್ತು. ನಾನು ಚರ್ಚಿನಲ್ಲಿ ವೇದಿಕೆಯಮೇಲೆ ಕೇಳಿದ ಬಹಳ ಮುಂದುವರಿದ ವಿಷಯಗಳನ್ನೊಳಗೊಂಡ ಉಪನ್ಯಾಸಕರು ಮಾತ್ರವೇ ಅವರು ಆಗಿರಲಿಲ್ಲ ಎಂಬುದನ್ನು ಬಹಳ ಸುಲಭವಾಗಿ ಹೇಳಬಹುದಾಗಿತ್ತು. ಕೇವಲ ಶ್ರೀಮಂತರು ಮತ್ತು ಸೋಮಾರಿವರ್ಗದವರ ಮನರಂಜನೆಗೆ ಸುಂದರವಾದ ಕವಿತ್ವ ಮತ್ತು ಪಾಂಡಿತ್ಯದಿಂದ ಕೂಡಿದ ಭಾವನೆಗಳನ್ನು ಕೊಡುವುದು ಅವರ ಉದ್ದೇಶವಾಗಿರಲಿಲ್ಲ. ಭಗವಂತನ ರಾಜ್ಯಕ್ಕೆ ಪ್ರವೇಶಿಸಿ ಎಂದು ಬೋಧಿಸುವ ಕ್ರೈಸ್ಥಪಾದ್ರಿಗಳೊ Salvation Army ಅಧಿಕಾರಿಗಳಂತೆಯೊ ಅವರೂ ಒಬ್ಬ ಬೋಧಕರೆಂದು ಇತರರು ಭಾವಿಸಿದ್ದಿರಬಹುದು. ಆದರೆ ಅವರು ಮಾನವನಲ್ಲಿ ಯಾವುದು ಶ್ರೇಷ್ಠವಾಗಿರುವುದೊ ಭವ್ಯವಾಗಿರುವುದೊ ಅದರ ಆಧಾರದ ಮೇಲೆ ನಿಂತು ಮಾತನಾಡುತ್ತಿದ್ದರು. ಅವರು ಬೋಧಿಸಿದ ಪಾಪವೆನ್ನುವುದು ಒಂದು ದುಃಸ್ವಪ್ನ ಎಂಬುವನ್ನು ಕುರಿತು ನಾನು ಮಾತನಾಡುತ್ತಿಲ್ಲ. ಇದು ಅತಿ ಜಟಿಲವಾದ ಅವರ ಧಾರ್ಮಿಕ ಭಾವನೆಯ ಅಂಶವಾಗಿದ್ದಿರಬೇಕು. ಕೋಟನ್ನು ಯಾರಾದರೂ ತೆಗೆದುಕೊಂಡರೆ ಅವರಿಗೆ ಶರಾಯಿಯನ್ನೂ ಕೊಟ್ಟುಬಿಡಿ ಎಂಬ ಬೋಧನೆ ನಮಗೆ ಹೇಗೆಯೋ ಹಾಗೆಯೆ ಅವರಿಗೆ ಆ ಭಾವನೆ. ಅವರು ಕೊಟ್ಟ ಒಂದು ಉದಾಹರಣೆ ಅತಿ ಚಮತ್ಕಾರವಾಗಿತ್ತು. ಅವರ ಪ್ರೇಕ್ಷಕ ವರ್ಗದಲ್ಲಿದ್ದವರೆಲ್ಲ ಫ್ಯಾಷನಬಲ್

ತಾಯಂದಿರು. ಅವರು ದಾರಿಯಲ್ಲಿ ಹೋಗುತ್ತಿರುವಾಗ ಇದ್ದಕ್ಕಿದ್ದಂತೆ ಒಂದು ಹುಲಿ ಅವರ ಎದುರಿಗೆ ಬಂದರೆ ಅವರು ಅಂಜಿ ಹೇಗೆ ಪಲಾಯನ ಮಾಡುವರು ಎಂದರು. ಧ್ವನಿಯನ್ನು ತಕ್ಷಣ ಬದಲಾಯಿಸಿ "ಆದರೆ, ಹುಲಿ ಎದುರಿಗೆ ಒಂದು ಮಗು ಇತ್ತು ಎಂದು ಭಾವಿಸಿ. ಆಗ ನೀವು ಎಲ್ಲಿ ಇರುತ್ತಿದ್ದಿರಿ? ಹುಲಿಯ ಬಾಯಿಯಲ್ಲಿ. ನಿಮ್ಮಲ್ಲಿ ಯಾರಾದರೂ ಆಗಲಿ, ಅದರ ಬಾಯಲ್ಲಿ ಇರುತ್ತಿದ್ದಿರಿ. ಅದರಲ್ಲಿ ಸಂದೇಹವಿಲ್ಲ" ಎಂದರು.

ಆ ಚಳಿಗಾಲ ಸ್ವಾಮಿಜಿ ಅವರು ಇಂಗ್ಲೆಂಡಿನಿಂದ ಅಮೆರಿಕಾಕ್ಕೆ ಹೋದಾಗ ಮುಂದಿನ ಕೆಲವು ಭಾವನೆಗಳನ್ನು ಸ್ಮರಿಸಿಕೊಂಡು ಮನನ ಮಾಡತೊಡಗಿದೆ: ಮೊದಲು ಅವರ ಧಾರ್ಮಿಕ ಸ್ವಭಾವದ ಔದಾರ್ಯ; ಎರಡನೆಯದೆ ಅವರು ನಮಗೆ ತಂದ ಆಲೋಚನೆಯಲ್ಲಿದ್ದ ಹೊಸ ದೃಷ್ಟಿ ಮತ್ತು ಸ್ವಾರಸ್ಯ. ಮೂರನೆಯದಾಗಿ ಅವರು ಪ್ರತಿ ಮಾನವನಲ್ಲಿರುವ ಶ್ರೇಷ್ಠತಮ ಭಾವನೆ ಮತ್ತು ಶಕ್ತಿಯ ನಿಲುವಿನ ಮೇಲೆ ನಿಂತು ಮಾತನಾಡುತ್ತಿದ್ದರೇ ಹೊರತು ಅವನ ಲೋಪದೋಷಗಳನ್ನು ಗಮನಕ್ಕೇ ತರುತ್ತಿರಲಿಲ್ಲ.

೨

## ಎರಡನೆಯವೇಳೆ ಲಂಡನ್ನಿನಲ್ಲಿ

ಸ್ವಾಮಿಜಿ ಬರುವ ವರುಷ ೧೮೯೬ರಲ್ಲಿ ಲಂಡನ್ನಿಗೆ ಹಿಂತಿರುಗಿದರು. ಇವರ ಆಪ್ತಸ್ನೇಹಿತರಾದ ಇ. ಟಿ. ಸ್ಟರ್ಡಿಯವರ ಮನೆಯಲ್ಲಿದ್ದು ಪ್ರತಿದಿನ ಪ್ರವಚನಾದಿಗಳನ್ನು ನಡೆಸುತ್ತಿದ್ದರು. ಅನಂತರ ಬೇಸಿಗೆ ರಜವಾದ ಮೇಲೆ ವಿಕ್ಟೋರಿಯಾ ರಸ್ತೆಯಲ್ಲಿದ್ದ ದೊಡ್ಡ ಒಂದು ಪ್ರಾಂಗಣದಲ್ಲಿ ಭಾಷಣ ಕೊಡುತ್ತಿದ್ದರು. ಜುಲೈ, ಆಗಸ್ಟ್, ಸೆಪ್ಟೆಂಬರ್ ತಿಂಗಳಲ್ಲಿ ಇವರು ತಮ್ಮ ಸ್ನೇಹಿತರಾದ ಮಿಸ್ಟರ್ ಮತ್ತು ಮಿಸೆಸ್ ಸೇವಿಯರ್ ಮತ್ತು ಮಿಸ್ ಎಚ್. ಎಫ್. ಮುಲ್ಲರೊಡನೆ ಫ್ರಾನ್ಸ್, ಜರ್ಮನಿ, ಸ್ವಿಟ್ಸರ್ಲೆಂಡಿಗೆ ಹೋಗಿಬಂದರು. ಡಿಸೆಂಬರಿನಲ್ಲಿ ತಮ್ಮ ಕೆಲವು ಸ್ನೇಹಿತರೊಡನೆ ರೋಮಿನ ಮೂಲಕ ಭರತಖಂಡಕ್ಕೆ ಹೊರಟು ೧೮೯೭ನೇ ಜನವರಿ ೧೫ರಲ್ಲಿ ಸಿಲೋನಿನ ಕೊಲಂಬೊ ನಗರವನ್ನು ಸೇರಿದರು.

೧೮೯೬ರಲ್ಲಿ ಕೊಟ್ಟ ಉಪನ್ಯಾಸಗಳಲ್ಲಿ ಹಲವನ್ನು ಈಗ ಪ್ರಕಟಿಸಿರುವರು. ಅದರಲ್ಲಿ ಹೇಗೆ ಅವರು ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿರುವರು ಎಂಬುದನ್ನು ಜನರೆಲ್ಲಾ ಈಗ ಓದಬಹುದು. ಸರ್ವವ್ಯಾಪಿಯಾದ ಭಗವಂತನಲ್ಲಿ ನಂಬುವ ಹಿಂದೂಗಳ ಪ್ರಚಾರಕರಂತೆ ಅವರು ನಮ್ಮ ಬಳಿಗೆ ಬಂದರು. ಆ ಸಿದ್ಧಾಂತದ ಸತ್ಯವನ್ನು ಸ್ವತಃ ನೀವೇ ನಿಮ್ಮ ಜೀವನದಲ್ಲಿ ಸಾಕ್ಷಾತ್ಕಾರ ಮಾಡಿಕೊಳ್ಳಿ ಎಂದು ಬೋಧಿಸಿದರು. ಆಗಲಾಗಲಿ ಅಥವಾ ಮತ್ತಾವ ಸಮಯದಲ್ಲೇ ಆಗಲಿ ಅವರು ಪ್ರೇಕ್ಷಕರಿಗೆ ಯಾವ ಯಾವ ಪ್ರತ್ಯೇಕ ಧರ್ಮವನ್ನೂ ಬೋಧಿಸಿದಂತೆ ನನಗೆ ತೋರುವುದಿಲ್ಲ. ಅವರು ಅನೇಕ ವೇಳೆ ತಾವು ಹೇಳಿರುವುದನ್ನು ಪ್ರತಿಪಾದಿಸಲು ಇಂಡಿಯಾ ದೇಶದ ಜಾತಿಗಳನ್ನು [ನಾನು ಅವುಗಳನ್ನು ಚರ್ಚುಗಳೆಂದು ಕರೆಯಲಿಚ್ಛಿಸುತ್ತೇನೆ] ಉದಹರಿಸುತ್ತಿದ್ದರು. ಆದರೆ ಅವರು ಆ ಜಾತಿಗಳ ಹಿಂದೆಲ್ಲಾ ಇರುವ ತತ್ತ್ವವನ್ನಲ್ಲದೆ ಬೇರಾವುದನ್ನೂ ಬೋಧಿಸಲಿಲ್ಲ. ಅವರು ಗೀತೆ ಉಪನಿಷತ್ತು ವೇದಗಳಲ್ಲದೆ ಬೇರಾವುದನ್ನೂ ಹೇಳುತ್ತಿರಲಿಲ್ಲ. ಅವರು ತಮ್ಮ ಬಹಿರಂಗ ಉಪನ್ಯಾಸಗಳಲ್ಲಿ ತಮ್ಮ ಗುರುಗಳ ವಿಷಯವಾಗಲಿ, ಹಿಂದೂಗಳ ಯಾವ ಪುರಾಣದ ವಿಷಯವಾಗಲಿ ಯಾವುದನ್ನೂ ತರುತ್ತಿರಲಿಲ್ಲ.

ಪಾಶ್ಚಾತ್ಯ ಪ್ರಪಂಚ ಆಧುನಿಕ ವೈಜ್ಞಾನಿಕ ನವನವಾನ್ವೇಷಣೆಗಳನ್ನು ಅರ್ಥಮಾಡಿಕೊಂಡು ಅದನ್ನು ಸ್ವೀಕರಿಸಬೇಕಾದರೆ ಮತ್ತು ಕಾಲಕ್ರಮೇಣ ನಾಶವಾಗಿಹೋಗುವ ಪುರಾಣಗಳನಂತರವೂ ಬಾಳಬೇಕಾದರೆ, ಭಾರತೀಯ ಭಾವನೆ ಅತ್ಯಾವಶ್ಯಕ ಪಾಶ್ಚಾತ್ಯದೇಶಕ್ಕೆ ಎಂದು ಅವರು ದೃಢವಾಗಿ ನಂಬಿದ್ದರು. ಸತ್ಯವನ್ನು ಎದುರಿಸಲು ಸಾಮರ್ಥ್ಯವಿರುವಂತಹ ಶ್ರದ್ಧೆ ಬೇಕಾಗಿದೆ ಎಂದು ಅವರು ಮನಗಂಡರು. ಇವರು ತಮ್ಮ ಒಂದು ಪತ್ರ ದಲ್ಲಿ "ಯೂರೋಪಿನ ಮುಕ್ತಿ, ಯುಕ್ತಿಪೂರಿತವಾದ ಧರ್ಮದಲ್ಲಿದೆ" ಎಂದು ವ್ಯಕ್ತಪಡಿಸಿರುವರು. ಅನಂತರ ಇವರು ತಮ್ಮ ಒಂದು ಉಪನ್ಯಾಸದಲ್ಲಿ ಮತ್ತು ಅನೇಕವೇಳೆ ಸಂಭಾಷಣೆಗಳಲ್ಲಿ "ದ್ರವ್ಯವಾಸ್ತವತಾವಾದಿಯೂ [Materialist] ಸತ್ಯ! ಇರುವುದೊಂದೆ. ಆದರೆ ಅವನು ಅದನ್ನು ದ್ರವ್ಯವೆನ್ನುವನು; ನಾನು ಅದನ್ನೇ ದೇವರು ಎನ್ನುವೆನು!" ಎನ್ನು ತ್ತಿದ್ದರು. ಮತ್ತೊಂದು ವೇಳೆ ಇದಕ್ಕಿಂತ ದೊಡ್ಡ ವಾಕ್ಯದಲ್ಲಿ, ಧಾರ್ಮಿಕ ಭಾವನೆ ಹೇಗೆ ಬೆಳೆಯಿತು, ಅದರಲ್ಲಿ ಒಂದಕ್ಕೂ ಮತ್ತೊಂದಕ್ಕೂ ಇರುವ ಸಂಬಂಧಗಳೇನು, ಎಂಬುದನ್ನು ವಿವರಿಸುವರು. "ಪ್ರಾರಂಭದಲ್ಲಿ ಗುರಿ ಪ್ರಪಂಚಕ್ಕೆ ದೂರದಲ್ಲಿದೆ, ಅತೀತವಾಗಿದೆ, ನಮ್ಮನ್ನೆಲ್ಲಾ ಅಲ್ಲಿಗೆ ಆಕರ್ಷಿ ಸುತ್ತಿದೆ. ಗುರಿಯನ್ನು ಅಧೋಗತಿಗೆ ಎಳೆಯದೆ ನಾವು ಸಮೀಪಕ್ಕೆ ಬರಬೇಕಾಗಿದೆ. ನಾವು ಕ್ರಮೇಣ ಸಮೀಪಕ್ಕೆ ಬಂದ ಮೇಲೆ ಸ್ವರ್ಗದಲ್ಲಿ ರುವ ದೇವರು ಪ್ರಪಂಚದಲ್ಲಿರುವ ದೇವರಾಗುವನು, ಪ್ರಪಂಚದಲ್ಲಿರುವ ದೇವರು ಪ್ರಪಂಚವೇ ಆಗುವನು, ಪ್ರಪಂಚವೇ ದೇವರಾಗುವನು, ದೇಹ ದೇವಾಲಯದಲ್ಲಿರುವ ದೇವರಾಗುವನು, ದೇಹ ದೇವಾಲಯದಲ್ಲಿರುವ ದೇವರು ಕೊನೆಗೆ ದೇವಾಲಯವೇ ಆಗುವನು. ಜೀವಾತ್ಮನೇ ದೇವರಾಗ ವನು. ಕ್ರಮೇಣ ಅದು ಬೋಧನೆಯ ಪರಾಕಾಷ್ಠತೆಯನ್ನು ಮುಟ್ಟುವುದು ಯಾರನ್ನು ಋಷಿಗಳು ಎಲ್ಲಾ ಕಡೆಯಲ್ಲಿಯೂ ಹುಡುಕಿದರೊ ಅವನ ನಮ್ಮ ಹೃದಯದಲ್ಲಿಯೇ ಇರುವನು. ಹೇ ಮಾನವ ನೀನೆ ಅವನು, ನೀನೆ ಅವನು."

ಈ ಸಮಯದಲ್ಲಿ ಅವರ ಅತ್ಯಂತ ಪ್ರತಿಭಾಸಂಪನ್ನ ಕೆಲಸವೇ ಮಾಯಾವಾದದ ಮೇಲೆ ಕೊಟ್ಟ ಉಪನ್ಯಾಸವೆಂದು ಅವರು ಪರಿಗಣಿ ಸುತ್ತಿದ್ದರು. ಇದನ್ನು ನಾವು ಜೋಪಾನದಿಂದ ಓದಿದಾಗ ಮಾತ್ರ ಈ ಭಾವನೆಗಳನ್ನು ಆಂಗ್ಲೇಯಭಾಷೆಗೆ ಇಡುವುದು ಎಷ್ಟು ಕಷ್ಟ ಎಂಬುದನ್ನು

ಊಹಿಸಬಹುದು. ಇದನ್ನು ಓದುತ್ತಿರುವಾಗಲೆಲ್ಲ ತಮಗೆ ಸ್ಪಷ್ಟವಾಗಿ ಗೊತ್ತಿದ್ದರೂ ಅದನ್ನು ವ್ಯಕ್ತಪಡಿಸಲು ತಕ್ಕಭಾಷೆಯಿಲ್ಲದೆ ಹೋರಾಡು ತ್ತಿರುವಂತೆ ಭಾಸವಾಗುವುದು. ಮಾಯೆ ಎಂದರೆ ಜನ ಭ್ರಾಂತಿ ಎಂದು ತಪ್ಪು ತಿಳಿದುಕೊಂಡಿರುವರು ಎನ್ನುವರು ಸ್ವಾಮಿಜಿ. ಪ್ರಾರಂಭದಲ್ಲಿ ಮಾಯೆ ಎಂದರೆ ಮಂತ್ರ [ Magic ] ಎಂದಿದ್ದಿರಬಹುದು. "ಇಂದ್ರ ಮಾಯೆಯಿಂದ ಹಲವು ಆಕಾರಗಳನ್ನು ಧರಿಸಿದನು." ಆದರೆ ಕ್ರಮೇಣ ಈ ಅರ್ಥಮಾಯವಾಗಿ ಹಲವು ಭಾವನೆಗಳನ್ನು ಪಡೆಯುತ್ತಾ ಹೋಯಿತು. ಕೊನೆಗೆ ಇದರ ಒಂದು ಮುಖ್ಯವಾದ ಅರ್ಥವನ್ನು ಮುಂದೆ ಬರುವ ವಾಕ್ಯ ದಲ್ಲಿ ನೋಡಬಹುದು. "ನಾವು ವ್ಯರ್ಥವಾಗಿ ಮಾತನಾಡುವುದರಿಂದ, ವಿಷಯವಸ್ತುಗಳಲ್ಲಿ ತೃಪ್ತರಾಗಿರುವುದರಿಂದ, ಪ್ರಾಪಂಚಿಕ ಬಯಕೆಗಳನ್ನು ಬೆನ್ನಟ್ಟಿಹೋಗುವುದರಿಂದ ಸತ್ಯವನ್ನು ಮಂಜಿನಿಂದ ಮುಚ್ಚುವೆವು." ಕೊನೆಗೆ ಇದರ ಮುಖ್ಯವಾದ ಅರ್ಥ ಶ್ವೇತಾಶ್ವತರ ಉಪನಿಷತ್ತಿನ ಈ ಮಂತ್ರದಲ್ಲಿ ದೊರಕುವುದು: "ಪ್ರಕೃತಿಯೆ ಮಾಯೆ, ಮನಸ್ಸೆ ಈಶ್ವರ ನಂತೆ ಈ ಮಾಯೆಯನ್ನು ಆಳುತ್ತಿರುವುದು." ವೇದಾಂತದ ದೃಷ್ಟಿಯಲ್ಲಿ ಕೊನೆಗೆ ಮಾಯೆ ಎಂದರೆ, ನಾವೇನಾಗಿರುವೆವು, ಸುತ್ತಲೂ ಏನನ್ನು ನೋಡುತ್ತಿರುವೆವು ಅದನ್ನು ಯತಾರ್ಥವಾಗಿ ವಿವರಿಸುವುದು.

ಮಾಯಾ ಸಿದ್ಧಾಂತದ ಮೇಲಿನ ಉಪನ್ಯಾಸವನ್ನು ಓದಿದರೆ ಮೇಲೆ ಹೇಳಿರುವುದು ವಿವರಣೆಯಲ್ಲ ಎಂದು ಗೊತ್ತಾಗುವುದು. ಪ್ರಪಂಚ ನಮ್ಮ ಇಂದ್ರಿಯಗಳಿಗೆ ಹೇಗೆ ಗೋಚರಿಸುವುದೊ ಅದಕ್ಕೆ ಮಾತ್ರ ಇದು ಅನ್ವಯಿಸು ವುದಿಲ್ಲ. ಆ ಜ್ಞಾನ ನೇರವಾಗಿಲ್ಲ, ವಕ್ರವಾಗಿದೆ, ದೋಷದಿಂದ ಕೂಡಿದೆ. ಯತಾರ್ಥಜ್ಞಾನಕ್ಕೆ ವ್ಯತಿರಿಕ್ತವಾಗಿದೆ ಎಂದು ಗೊತ್ತಾಗುವುದು. ಸ್ವಾಮಿಜಿ ಹೀಗೆ ಹೇಳುವರು: "ಇದೊಂದು ಸಿದ್ಧಾಂತವಲ್ಲ; ಪರಿಸ್ಥಿತಿ ಹೇಗೆ ಇದೆಯೊ ಅದನ್ನು ವಿವರಿಸುವುದು. ಈ ಪ್ರಪಂಚ ಒಂದು ಟ್ಯಾಂಟಲಸ್* ನರಕದಂತೆ. ನಿಮಗೆ ಈ ಪ್ರಪಂಚದ ವಿಷಯವಾಗಿ ಏನೂ ಗೊತ್ತಿಲ್ಲ. ಆದರೂ ಗೊತ್ತಿಲ್ಲ ಎಂದು ಹೇಳುವಂತೆ ಇಲ್ಲ. ಕನಸಿನ ಮಧ್ಯೆ ಚಲಿಸುವಂತೆ. ಅರ್ಧ ಎಚ್ಚರ,

---

* ನೀರಿನಲ್ಲಿ ಒಬ್ಬ ನಿಂತಿರುವನು. ಅವನ ಮೇಲೆ ಹಣ್ಣುಗಳಿವೆ. ಕೆಳಗೆ ನೀರಿದೆ. ಹಸಿವಾಯಿತೆಂದು ಹಣ್ಣನ್ನು ಕೀಳಲು ಕೈ ಎತ್ತಿದರೆ, ಹಣ್ಣು ಮೇಲಕ್ಕೆ ಹೋಗುವುದು. ದಾಹವಾಯಿತೆಂದು ನೀರನ್ನು ಕುಡಿಯಲು ಕೆಳಗೆ ಬಗ್ಗಿದರೆ ನೀರು ಮತ್ತೂ ಕೆಳಗೆ ಹೋಗುವುದು.

ಅರ್ಥ ಕನಸು. ಜೀವನವನ್ನೆಲ್ಲಾ ಈ-ಸ್ಥಿತಿಯಲ್ಲಿ ಕಳೆದಂತೆ ಇದೆ. ಇದೇ ನಮ್ಮೆಲ್ಲರ ಹಣೆಯಬರಹ. ಇಂದ್ರಿಯ ಜ್ಞಾನವೆಲ್ಲವೂ ಹೀಗೆಯೇ. ಇದೇ ಪ್ರಪಂಚ." ಬೇರೆ ಕಡೆ ಸ್ವಾಮಿಜಿ ವಿವರಿಸುವಂತೆ ಇಲ್ಲಿಯೂ ಕೂಡ ಭಾರತೀಯ ಭಾವನೆಗಳನ್ನು ಆಂಗ್ಲಭಾಷೆಯಲ್ಲಿ ಸರಿಯಾಗಿ ಇಡುವುದಕ್ಕೆ ಆಗುವುದಿಲ್ಲ. ಯಾವುದೊ ಒಂದೆರಡು ವಾಕ್ಯಗಳಿಗೆ ಅರ್ಥಮಾಡುವ ಬದಲು ಅವರು ಒಟ್ಟು ಹೇಳುವುದರಲ್ಲಿರುವ ಧ್ವನಿಯನ್ನು ಗ್ರಹಿಸಬೇಕಾಗುವುದು. ಮಾಯೆ ಎಂದರೆ ಯಾವುದೊ ಮಿರುಗುತ್ತಿರುವಂತೆ ಕಾಣುತ್ತಿದೆ, ಆದರೆ ಅಗ್ರಾಹ್ಯವಾದುದು. ಅರ್ಧನಿಜ ಅರ್ಧಸುಳ್ಳು. ಅಲ್ಲಿ ಇಂದ್ರಿಯದಲ್ಲಾಗಲಿ, ಇಂದ್ರಿಯಜ್ಞಾನದ ಮೇಲೆ ನಿಂತ ಮನಸ್ಸಿನ ಜ್ಞಾನದಲ್ಲಾಗಲಿ ತೃಪ್ತಿಯಿಲ್ಲ, ಆರಾಮವಿಲ್ಲ. ಆದರೂ "ಯಾವುದರಿಂದ ಇವೆಲ್ಲವೂ ವ್ಯಾಪ್ತವಾಗಿರುವುದೊ ಅದನ್ನು ಬ್ರಹ್ಮ ಎಂದು ಅರಿ". ಈ ಎರಡು ಭಾವನೆಗಳ ಮೂಲಕ ಹಿಂದೂಗಳ ಸಿದ್ಧಾಂತವನ್ನೆಲ್ಲಾ ಸ್ವಾಮಿ ವಿವೇಕಾನಂದರು ಪಾಶ್ಚಾತ್ಯ ದೇಶದಲ್ಲಿ ವಿವರಿಸಿರುವರು. ಇತರ ಭಾವನೆ ಬೋಧನೆಗಳೆಲ್ಲ ಇವೆರಡರ ಅಧೀನವಾಗಿವೆ. ಧರ್ಮ ಎಂದರೆ ವ್ಯಕ್ತಿಯ ಬೆಳವಣಿಗೆಗೆ ಸಂಬಂಧ ಪಟ್ಟಿರುವುದು; ಅದರಂತೆ ಆಗುವುದು. ಈ ಬೆಳವಣಿಗೆ ಎರಡು ಮುಖ್ಯ ವಿಷಯಗಳ ಆಧಾರದ ಮೇಲೆ ನಿಂತಿದೆ. ಒಂದು ಮತ್ತೊಂದರಲ್ಲಿ ಲೀನವಾಗ ಬೇಕು. ಅದೇ ಆತ್ಮ ಮತ್ತು ಮಾಯೆ. ಮಾಯೆಗೆ ಅತೀತವಾಗಿ ಆತ್ಮನಲ್ಲಿ ತಲ್ಲೀನನಾಗಬೇಕು. ಪೌರಾತ್ಯರ ರೀತಿಯಲ್ಲಿ ಮಾಯೆಗೆ ಅಧೀನರಾಗಿರುವುದೇ ಬಂಧನ. ಇದರಿಂದ ಪಾರಾಗುವುದೇ ಮುಕ್ತಿ ಅಥವಾ ನಿರ್ವಾಣ. ಮುಕ್ತ ನಾಗಬೇಕೆನ್ನುವವನು ತ್ಯಾಗಿಯಾಗಬೇಕು, ಭೋಗವನ್ನು ಅರಸಿಕೊಂಡು ಹೋಗಕೂಡದು. ಎಲ್ಲ ಧರ್ಮಗಳು ಏನನ್ನು ಸಾರುತ್ತಿದ್ದವೊ ಅದನ್ನೇ ಸ್ವಾಮಿಜಿ ಇಲ್ಲಿ ಪುನಃ ನಾನು ಸಾರುತ್ತಿರುವೆ ಎನ್ನುತ್ತಿದ್ದರು. ಭಾರತೀಯ ಮತ್ತು ಇತರ ಧರ್ಮಗಳೆಲ್ಲ ಭೋಗಾನ್ವೇಷಣೆಯನ್ನು ನಿಲ್ಲಿಸಿ ಎನ್ನುವುವು. ಜೀವನವನ್ನು ಒಂದು ಕುರುಕ್ಷೇತ್ರವನ್ನಾಗಿ ಮಾಡಲು ಯತ್ನಿಸಿರುವವೇ ವಿನಃ ಒಂದು ನೃತ್ಯಶಾಲೆಯನ್ನಾಗಿ ಮಾಡಿಲ್ಲ. ಮೃತ್ಯುವನ್ನು ಇದಿರಿಸಲು ಸಿದ್ಧನನ್ನಾಗಿ ಮಾಡಿವೆಯೆ ಹೊರತು ಪ್ರಪಂಚದಲ್ಲಿ ನಿರತನಾಗುವಂತೆ ಮಾಡಲು ಯತ್ನಿಸಿಲ್ಲ. ಸ್ವಾಮಿಜಿಗೂ ಇತರ ಬೋಧಕರಿಗೂ ಇದ್ದ ಒಂದು ವ್ಯತ್ಯಾಸವೇ ಎಲ್ಲಾ ವಿಧವಾದ ಸ್ವಾಮಿತ್ವ (Mastery) ವನ್ನು ಅವರು ಒಂದು ತ್ಯಾಗ ಎನ್ನುತ್ತಿದ್ದರು. ಜೀವನದ ಕೊನೆಯಲ್ಲಿ ನಾನು ಅವರಿಗೆ, ತ್ಯಾಗ

ಎಂಬ ಮಾತೊಂದನ್ನೇ ನಿಮ್ಮ ಬಾಯಿಂದ ನಾನು ಇದುವರೆಗೆ ಕೇಳಿದ್ದು ಎಂದೆ. ಆದರೆ ಜಯ (Conquer) ಎಂಬುದು ತ್ಯಾಗಕ್ಕಿಂತ ಧ್ವನಿ ಪೂರ್ಣವಾಗಿತ್ತು ಎಂದು ಹೇಳಬಹುದು. ತ್ಯಾಗದಿಂದ ಎಂದರೆ, ಬಿಡದೆ ದೃಢಪ್ರಯತ್ನಮಾಡಿ, ಒಂದು ಸಮಸ್ಯೆಯನ್ನು ಬಗೆಹರಿಸಲು ಹಗಲುರಾತ್ರಿ ಅದರಲ್ಲಿ ತಲ್ಲೀನರಾಗಿ ಹೋಗಿ, ಸುಖವನ್ನು ಆಶಿಸದೆ, ಕಷ್ಟವನ್ನು ಸ್ವೀಕರಿಸಿದುದರಿಂದಲೇ ಸ್ಟೀವನ್‌ಸನ್ ರೈಲ್ವೆ ಎಂಜಿನ್ ಕಂಡುಹಿಡಿದನು. ಒಂದು ರೋಗವನ್ನು ಪ್ರಾರ್ಥನೆ ಮತ್ತು ಆಲೋಚನೆಯಿಂದ ಗುಣಪಡಿಸುವುದಕ್ಕೆ ಯಾವ ಏಕಾಗ್ರತೆ ಬೇಕೊ ಅಷ್ಟೇ ಏಕಾಗ್ರತೆ ವೈದ್ಯಶಾಸ್ತ್ರ ಪ್ರಯೋಗಕ್ಕೂ ಬೇಕಾಗಿದೆ ಎಂಬುದನ್ನು ಅವರು ತೋರಿಸಿದರು. ಅಧ್ಯಯನವೆಲ್ಲಾ ವಿದ್ಯಾರ್ಜನೆಗಾಗಿ ಮಾಡಿದ ತಪಸ್ಸು. ಎಲ್ಲಕ್ಕಿಂತ ಹೆಚ್ಚಾಗಿ ಧಾರ್ಮಿಕ ಪ್ರಪಂಚದಲ್ಲಿ ದೀರ್ಘಕಾಲದ ಪರಿಣಾಮವಾಗಬೇಕಾದರೆ ಚಾರಿತ್ರಶುದ್ಧಿ ಯೊಂದೇ ಎಂಬುದನ್ನು ಬೋಧಿಸಿದರು. ಪೌರನ ಕರ್ತವ್ಯ ಸಮಸ್ಯೆಯನ್ನು ಎದುರಿಸುವುದು, ಸನ್ಯಾಸಿ ಅದನ್ನು ಎದುರಿಸದೆ ಇರಬಹುದು. ಮಿಕ್ಕವರೆಲ್ಲಾ ಶಕ್ತಿಯನ್ನು ಸಂಗ್ರಹಿಸಬೇಕಾಗಿದೆ. ನಿನ್ನ ಸಹಾಯಕ್ಕೆ ಒಂದು ದೊಡ್ಡ ಸೇನಾಸಮೂಹವನ್ನೇ ತಂದು ಸುಲಭವಾಗಿ ಜಯವನ್ನು ಗಳಿಸಲು ಸಾಧ್ಯ ವಿದ್ದರೆ ಆಗ ಕ್ಷಮಿಸು. ಆದರೆ ಇನ್ನೂ ಜಯವೇ ಅನುಮಾನವಾಗಿರುವಾಗ ಹೇಡಿ ಮಾತ್ರ ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆಯನ್ನು ತೋರುವನು ಎನ್ನುತ್ತಿದ್ದರು.

ಸ್ವಾಮಿಜಿ ಗುರುದೇವರು ಹೇಳಿದ ಮತ್ತೊಂದು ಕಥೆಯಲ್ಲಿಯೂ ಇದೇ ನೀತಿಯನ್ನೇ ನೋಡುತ್ತೇವೆ. ಒಬ್ಬ ಹುಡುಗ ನೀರಿನಮೇಲೆ ನಡೆಯುವ ಶಕ್ತಿಯನ್ನು ಪಡೆಯಲು ಇಪ್ಪತ್ತುವರುಷ ತಪಸ್ಸನ್ನು ಮಾಡಿದನಂತೆ! "ಅದಕ್ಕಾಗಿ ಇಪ್ಪತ್ತುವರುಷ ತಪಸ್ಸನ್ನು ವ್ಯರ್ಥಮಾಡಬೇಕೆ? ದೋಣಿ ಯವನು ಮೂರುಕಾಸಿಗೆ ಅದನ್ನು ಮಾಡುವನು!" ಎಂದನಂತೆ ಜ್ಞಾನಿ ಯೊಬ್ಬ. ಆದರೆ ಆ ಹುಡುಗ ಯಾವ ದೋಣಿಯವನೂ ತನ್ನಂತೆ ಮಾಡ ಲಾರ ಎಂದು ಹೇಳಬಹುದಾಗಿತ್ತು. ಆದರೆ ಇಂತಹ ಪರಮಜ್ಞಾನಿಗಳಿಗೆ ನಾವಿಕಾಶಾಸ್ತ್ರಕ್ಕೆ ತಕ್ಕ ಸ್ಥಳವಿವೆ, ಅದರಿಂದ ಪೂರ್ಣಪ್ರಯೋಜನವಿದೆ ಎಂಬುದು ಗೊತ್ತಿತ್ತು. ಹಲವು ವರುಷಗಳಾದ ಮೇಲೆ ಯಾರೊ ಮೇಲೆ ಹೇಳಿದಂತಹ ವ್ಯಾವಹಾರಿಕಶಾಸ್ತ್ರದ ವಿಷಯದಲ್ಲಿ ಭರತಖಂಡ ಎಷ್ಟು ಮಟ್ಟಿಗೆ ಪ್ರಗತಿ ಹೊಂದಿತ್ತು ಎಂದು ಪ್ರಶ್ನೆ ಹಾಕಿದರು. "ಬುದ್ಧ ಒಂದು

ಸುಳ್ಳು ಹಲವು ಸತ್ಯ ಎಂದೂ, ಸಂಪ್ರದಾಯಸ್ಥ ಹಿಂದೂಗಳು ಹಲವು ಸುಳ್ಳು, ಏಕವೊಂದೇ ಸತ್ಯ ಎಂದು ಬೋಧಿಸಿದರೆ?'' ಎಂದು ಯಾರೋ ಸ್ವಾಮಿಜಿಯನ್ನು ಕೇಳಿದರು. ಹೌದು ಎಂದರು ಸ್ವಾಮಿಜಿ: ''ಆದರೆ ನಾನು ಮತ್ತು ಶ್ರೀರಾಮಕೃಷ್ಣಪರಮಹಂಸರು ಇದಕ್ಕೆ ಮತ್ತೊಂದನ್ನೂ ಸೇರಿಸಿರುವೆವು. ಏಕ ಮತ್ತು ಅನೇಕ ಎರಡೂ ಒಂದೇ ಸತ್ಯ; ಬೇರೆಬೇರೆ ಕಾಲದಲ್ಲಿ ಬೇರೆಬೇರೆ ದೃಷ್ಟಿಯಿಂದ ನೋಡಿದುದು ಅಷ್ಟೇ.''

ತತ್ತ್ವ ಅವರ ಬಾಯಿಂದ ಬಂದಾಗ ಸಚೇತನವಾಗಿರುತ್ತಿತ್ತು. ಇಂತಹ ಒಂದು ಅದ್ಭುತ ಶಕ್ತಿ ಅವರಲ್ಲಿತ್ತು. ಯಾವಾಗಲೂ ಪೂರ್ವಕಾಲದ ಶಾಸ್ತ್ರ ಗಳಿಂದ ಬಹಳ ಆಳವಾದ ಗಹನವಾದ ವಿಷಯಗಳನ್ನು ಉದಹರಿಸುತ್ತಿದ್ದರು. ಅವರು ನಮ್ಮೆದುರಿಗೆ ಎಲ್ಲಕ್ಕಿಂತ ಹೆಚ್ಚಾಗಿ ಆಧ್ಯಾತ್ಮಿಕಜೀವನದ ದೇವದೂತನಂತೆ ದೃಶ್ಯವನ್ನು ದೃಗ್‌ಗೆ ಅಧೀನಗೊಳಿಸಿದ ಮಹಾಪ್ರವಾದಿ ಯಂತೆ ಕಂಡರು. ಒಂದು ಸಲ ಅವರು ಶಿಷ್ಯರಿಗೆ ಹೇಗೆ ಹೇಳಿದರು: ''ನೆನಪಿನಲ್ಲಿಡಿ, ಭರತಖಂಡದ ಸಂದೇಶ ಪ್ರಕೃತಿಗಲ್ಲ ಆತ್ಮ ಇರುವುದು, ಆತ್ಮನಿಗಾಗಿ ಪ್ರಕೃತಿ.'' ಈ ಪಲ್ಲವಿಯೊಂದೇ ಅವರು ಬೋಧಿಸಿದ ದೃಷ್ಟಿ ಯಲ್ಲಿ, ಪ್ರವಚನಾದಿಗಳಲ್ಲಿ, ತಲೆಯೆತ್ತಿ ಕಾಣುತ್ತಿತ್ತು. ಅರುಣೋದಯ ಸಮಯದಲ್ಲಿ ದೂರದ ಯಾವುದೋ ಒಂದು ನದೀತೀರದಿಂದ ಬರುತ್ತಿದ್ದ ಕೊಳಲಿನ ಇನಿದನಿಯಂತೆ ಇತ್ತು ಅದು. ಪ್ರಪಂಚದ ಮಧುರಗಾನಗಳಲ್ಲಿ ಅದೂ ಒಂದರಂತೆ ಇತ್ತು. ಅದನ್ನು ಕೇಳುವವನು ಸಮೀಪಿಸುತ್ತಾ ಹೋಗಿ ಕೊನೆಗೆ ಆ ಗಾನದಲ್ಲಿ ತನ್ಮಯನಾದಾಗ ಅವನೇ ಆ ಗಾನವನ್ನು ಮಾಡುತ್ತಿದ್ದಂತೆ ಕಾಣುವುದು. ಇದರಂತೆಯೇ ಇತ್ತು ಸ್ವಾಮಿಜಿ ಪೂರ್ವ ಮತ್ತು ಪಾಶ್ಚಾತ್ಯದೇಶಗಳ ಆಧ್ಯಾತ್ಮಿಕ ಜೀವನವನ್ನು ಕುರಿತು ಮಾಡಿದ ಭಾಷಣ. ಇದರೊಡನೆ ತ್ಯಾಗದ ಮಹಿಮೆಯೂ ಇತ್ತು. ಅದು ಹಿಂದೆ ಇದ್ದುದಕ್ಕಿಂತ ಹೆಚ್ಚೇನೂ ಇರಲಿಲ್ಲವೆನ್ನಬಹುದು. ಸ್ವತಂತ್ರವಾದ ಯಾವ ಬಂಧನಕ್ಕೂ ಎಡೆಗೊಡದ, ನಿರಂಕುಶ ಸ್ವಾತಂತ್ರ್ಯದ ನಿಜವಾದ ತ್ಯಾಗ ಜೀವನವನ್ನು ಪ್ರತ್ಯಕ್ಷ ಅವರಲ್ಲಿ ಆಗ ಅನುಭವಿಸಬಹುದಾಗಿತ್ತು. ತ್ಯಜಿಸ ಬೇಕು, ಪುನಃ ಪ್ರಪಂಚಕ್ಕೆ ಬರದಿರಲು ಬಡತನ ಮತ್ತು ಧ್ಯಾನಮಯ ಮೌನಜೀವನವನ್ನು ಕೈಕೊಳ್ಳಬೇಕು ಎಂದು ಏಳುತ್ತಿದ್ದ ಭಾವನೆಗಳೊಡನೆ ಹೋರಾಡಬೇಕಾಗಿತ್ತು.

ಈ ಭಾವನೆಯನ್ನು ಬಹಳ ಪರಿಣಾಮಕಾರಿಯಾಗಿ ಬೋಧಿಸಿದ ಒಂದು

ಸಮಯ ಬಂತು. ಸಂವಾದದ ಮಧ್ಯೆ ಅಂದು ಒಂದು ಪ್ರಶ್ನೆ ಎದ್ದಿತು. "ಇಂದು ಪ್ರಪಂಚಕ್ಕೆ ಏನುಬೇಕಾಗಿದೆ ಗೊತ್ತೆ? ಸಮಾಜದ ಮೇಲೆ ಸಿಡಿಗುಂಡಿನಂತೆ ಬೀಳುವಂತಹ ವ್ಯಕ್ತಿಗಳು! ಹೊರಗಡೆ ಬೀದಿಯಲ್ಲಿ ನಿಂತು ದೇವರಲ್ಲದೆ ತಮಗೆ ಮತ್ತಾವುದೂ ಇಲ್ಲ ಎಂದು ಧೈರ್ಯವಾಗಿ ಹೇಳ ಬಲ್ಲಂತಹ ಇಪ್ಪತ್ತು ಜನ ಸ್ತ್ರೀಪುರುಷರು ಇಂದು ಪ್ರಪಂಚಕ್ಕೆ ಬೇಕಾಗಿದೆ. ಯಾರು ಅದಕ್ಕೆ ಸಿದ್ಧರಾಗಿರುವಿರಿ?" ಎಂದು ಹೇಳಿದರು. ಅಷ್ಟು ಹೊತ್ತಿಗೆ ಅವರು ಎದ್ದುನಿಂತು ಪ್ರೇಕ್ಷಕರನ್ನು ಸುತ್ತಲೂ ನೋಡುತ್ತಿದ್ದರು, ತಮ್ಮೊಡನೆ ಯಾರಾದರೂ ಬನ್ನಿ ಎಂದು ಕೇಳಿಕೊಳ್ಳುತ್ತಿರುವಂತೆ. "ಅಂಜು ವುದೇಕೆ?" ಅನಂತರ ಅವರೆಂದರು: "ಇದು [ದೇವರು] ಸತ್ಯವಾದರೆ ಉಳಿದವುಗಳಿಂದ ಪ್ರಯೋಜನವೇನು? ಇದು ಸತ್ಯವಲ್ಲದೇ ಇದ್ದರೆ ನಮ್ಮ ಬಾಳಿನಿಂದ ಪ್ರಯೋಜನವೇನು?" ಅವರಾಡಿದ ಮಾತಿನ ಹಿಂದೆ ಇದ್ದ ಅದ್ಭುತ ಸತ್ಯವನ್ನು ಇಷ್ಟು ವರುಷಗಳಾದ ಮೇಲೆ ನೆನಸಿಕೊಂಡರೂ ಕೇಳಬಹುದು.

ಪ್ರಪಂಚಕ್ಕೆ ಬೇಕಾಗಿರುವುದು ಪುಣ್ಯಚಾರಿತ್ರ. ಅವರು ಆ ಸಮಯ ದಲ್ಲಿ ಒಬ್ಬ ಸ್ನೇಹಿತರಿಗೆ ಬರೆದ ಪತ್ರದಲ್ಲಿ ಹೇಗೆ ಹೇಳುವರು: "ಯಾರ ಜೀವನ ನಿಸ್ವಾರ್ಥ ಪ್ರೇಮದ ನಂದಾದೀವಿಗೆಯಂತೆ ಬೆಳಗುತ್ತಿದೆಯೊ ಅಂತಹ ಮಹಾವ್ಯಕ್ತಿಗಳು ಪ್ರಪಂಚಕ್ಕೆ ಬೇಕಾಗಿರುವರು. ಅಂತಹ ಪ್ರೇಮಶಕ್ತಿಯಿಂದ ಆವಾಹಿತವಾದ ಅವರ ಪ್ರತಿಯೊಂದು ನುಡಿಯೂ ಅದ್ಭುತ ಪರಿಣಾಮಕಾರಿಯಾಗುವುದು. ಜಾಗ್ರತರಾಗಿ, ಜಾಗ್ರತರಾಗಿ; ಪ್ರಪಂಚ ದುಃಖದಲ್ಲಿ ಬೆಂದು ಸೊರಗುತ್ತಿದೆ. ನೀವು ನಿದ್ರಿಸಬಲ್ಲಿರಾ?"

ಆ ಕಾಲದಲ್ಲಿ ಈ ಭಾರತೀಯ ಭಾವನೆ ನನಗೆ ಎಷ್ಟು ಹೊಸದಾಗಿ ಕಂಡಿತು: ಮಾತು ಪರಿಣಾಮಕಾರಿಯಾಗುವಂತೆ ಮಾಡಿದ್ದು ಹಿಂದಿರುವ ಚಾರಿತ್ರ, ಸೇವೆ ಪುಣ್ಯಪ್ರದವಾಗುವಂತೆ ಮಾಡಿದ್ದು ಹಿಂದಿರುವ ಪ್ರೀತಿ, ಹೇಳಿದ ಮಾತಿನ ಹಿಂದೆ ಇದ್ದ ಶಕ್ತಿ ಮನಸ್ಸಿನ ಏಕಾಗ್ರತೆ. "ನೋಡಿ ಲಿಲ್ಲಿ (Lillies) ಹೇಗೆ ಬೆಳೆಯುತ್ತವೆ!" ಎಂಬ ನುಡಿಯಲ್ಲಿ ನಮ್ಮನ್ನು ಮುಗ್ಧರನ್ನಾಗಿ ಮಾಡುವುದು ಅದರ ಸೌಂದರ್ಯವಲ್ಲ, ಅದರಲ್ಲಿ ಧ್ವನಿಪೂರ್ಣ ವಾಗಿರುವ ತ್ಯಾಗ ಎಂದರು ಸ್ವಾಮಿಜಿ. ಇದು ನಿಜವೆ? ಅನುಭವದಿಂದ ಇದನ್ನು ಪರೀಕ್ಷಿಸಬಹುದು ಎಂದುಕೊಂಡೆ. ಕೆಲವು ಕಾಲದ ಮೇಲೆ ಇದು ಸತ್ಯ ಎಂದು ವೇದ್ಯವಾಯಿತು. ಜೋಪಾನವಾಗಿ ಆಲೋಚನೆ

ಯನ್ನು ತುಂಬಿ ಆಡಿದ ಮಾತಿಗೆ ಹೆಚ್ಚು ಬೆಲೆ ಇದೆ; ಇದೇ ಮಾತನ್ನು ಯಾರೋ ಅಜಾಗರೂಕತೆಯಿಂದ ಆಡಿದಾಗ ಅದಕ್ಕೆ ಈ ಶಕ್ತಿ ಇರುವುದಿಲ್ಲ. ಈ ಮಾತನ್ನು ನಿದರ್ಶಿಸಬಲ್ಲ ಕಲೀಫ್ ಆಲಿಯ ನುಡಿಯೊಂದಿದೆ. ಇದಕ್ಕಿಂತ ಮೇಲಾಗಿರುವುದನ್ನು ನಾನು ಕೇಳಿಲ್ಲ. ಈ ಮಾತನ್ನು ಎಷ್ಟೋ ಜನ ಕೇಳಿರುವರು. ಆ ಇಸ್ಲಾಮಿಧರ್ಮದ ವೀರಕೇಸರಿಯ ಮಾತನ್ನು ಕೇಳಿದಾಗ ಭಾವಪೂರಿತರಾಗದವರೇ ಇಲ್ಲ. "ನಿನ್ನ ಅದೃಷ್ಟ ಜೀವನದಲ್ಲಿ ನಿನ್ನನ್ನು ಹುಡುಕಾಡುತ್ತಿದೆ. ಆದಕಾರಣ ನೀನು ಅದನ್ನು ವೃಥಾ ಹುಡಿಕಿಕೊಂಡು ಅಲೆಯಬೇಡ." ಆದರೆ ಈ ಸರಳವಾದಮಾತಿನ ಹಿಂದೆ ಇರುವ ಅದ್ಭುತ ಸತ್ಯ ನಮಗೆ ಹೊಳೆಯುವುದಕ್ಕೆ ಕಾರಣ ಈ ಮಾತು ಯಾರಿಂದ ಬಂದಿತೊ ಅವನ ಜೀವನದ ಉಸಿರಾಗಿತ್ತು ಇದು.

ಸುಮ್ಮನೆ ಜನರಿಗೆ ಕೇಳುವಂತೆ ಮಾತ್ರ ಹೇಳದೆ ಕೇಳುವವರ ಮನಸ್ಸನ್ನು ಉದ್ದೇಶಿಸಿ ಹೇಳಿದರೆ ಹೆಚ್ಚು ಪರಿಣಾಮಕಾರಿಯಾಗುವುದೆಂದು ನಾನು ಕಂಡುಹಿಡಿದೆ. ಇದನ್ನು ಅರಿತಮೇಲೆ ಯುಕ್ತಿಗೆ, ದ್ರವ್ಯ ಮತ್ತು ಆಲೋಚನೆಗೆ ಮೇರೆಯನ್ನು ಕಲ್ಪಿಸಲು ಸಾಧ್ಯವಿಲ್ಲದೇ ಇದ್ದರೆ, ನಾವು ಯಾವುದನ್ನು ದ್ರವ್ಯ ಎನ್ನುತ್ತೇವೆಯೊ ಅದು ಆತ್ಮ ಅಥವಾ ಆಲೋಚನೆ ಎಂಬುದರ ಪರಿಣಾಮವಾಗಿರಬೇಕೆ ಹೊರತು ದ್ರವ್ಯದಿಂದ ಇವು ಬಂದಿರಲಾರವೆಂದು ಕ್ರಮೇಣ ಅರಿಯತೊಡಗಿದೆ. ಜೀವದಿಂದ ದೇಹ ಉತ್ಪತ್ತಿಯಾಯಿತೆಂದು ಹೇಳಬೇಕೆ ವಿನಃ ಇಚ್ಛೆಯಿಂದ ದೇಹ ಉತ್ಪತ್ತಿಯಾಯಿತೆಂದು ಹೇಳುವುದಕ್ಕೆ ಆಗುವುದಿಲ್ಲ. ಇದರಿಂದ ದೇಹಕ್ಕೆ ಅತೀತವಾಗಿರುವಂತಹ ಭಾವನೆಯೊಂದು ಇದೆ ಎಂದಂತೆ ಆಯಿತು. ಜೀವನವನ್ನು ಆಳುವಂತಹ ಒಂದು ವಸ್ತು ಇದೆ, ಅದು ದ್ರವ್ಯದ ಅಧೀನದಲ್ಲಿ ಇಲ್ಲ. ದೇಹ ಹೇಗೆ ಹಳೆಯ ಚರ್ಮವನ್ನು ಆಚೆಗೆ ಎಸೆಯುವುದೊ ಹಾಗೆಯೆ ಜೀವ ಒಂದು ದೇಹವನ್ನು ಆಚೆಗೆ ಒಗೆದು ಮತ್ತೊಂದು ದೇಹವನ್ನು ಸ್ವೀಕರಿಸುವುದು. ದೇಹ ಬರುತ್ತದೆ ಹೋಗುತ್ತದೆ ಎಂಬ ಸ್ವಾಮಿಜಿ ಅವರ ಭಾವನೆಯನ್ನು ನನ್ನ ಮನಸ್ಸೇ ಉಸುರುತ್ತಿರುವಂತೆ ಕಂಡಿತು. ಆದರೆ ಈ ಭಾವನೆ ಕ್ರಮೇಣ ಪುಷ್ಟಿಯಾಗತೊಡಗಿತು. ಅದು ಚೆನ್ನಾಗಿ ಅರ್ಥವಾಗಲು ಹಲವು ತಿಂಗಳುಗಳು ಹಿಡಿದುವು.

ನಾನು ಆಗಿನ ಸಮಯವನ್ನು ಕುರಿತು ಯೋಚಿಸತೊಡಗಿದರೆ ಸ್ವಾಮಿಜಿಯವರ ಪ್ರವಚನಗಳಲ್ಲಿ ಕೇವಲ ಸಿದ್ಧಾಂತಗಳನ್ನು ಕೇಳಲಿಲ್ಲ,

ಒಂದು ಹೊಸ ಭವ್ಯವಾದ ಜೀವನದ ಅನುಭವ ಅಥವಾ ಭರತಖಂಡದಲ್ಲಿ ಹೇಳುವ ಸಾಕ್ಷಾತ್ಕಾರದ ಅನುಭವವಾಯಿತು.

ದೇವರನ್ನು ಮಗುವಂತೆ ಭಾವಿಸುವ ವಾತ್ಸಲ್ಯಭಾವದಲ್ಲಿ, "ನಾವು ಆ ಮಗುವಿನಿಂದ ಏನನ್ನಾದರೂ ಆಶಿಸುವೆವೆ?" ಎಂಬುದನ್ನು ಕೇಳಿದೆವು. ಪ್ರೀತಿ ಯಾವಾಗಲೂ ಆನಂದದ ಆವಿರ್ಭಾವ ಎಂಬ ಸಂದೇಶಕ್ಕೆ ಮಣಿದೆವು. ಯಾವ ಪ್ರೀತಿಯಲ್ಲಿ ವ್ಯಥೆ ಮತ್ತು ವ್ಯಸನವಿದೆಯೊ ಅದನ್ನು ಸ್ವಾರ್ಥ ಮತ್ತು ದೈಹಿಕ ಎನ್ನಬೇಕಾಗುವುದು. ನಮಗೂ ಇತರರಿಗೂ ಭೇದವನ್ನು ಉಂಟುಮಾಡುವ ಯಾವ ಒಂದು ಭಾವನೆಯೇ ಆಗಲಿ ಅದನ್ನು ದ್ವೇಷ ದಂತೆ ಪರಿಗಣಿಸಬೇಕು. ಒಟ್ಟುಗೂಡಿಸುವುದು ಪ್ರೇಮ ಎಂಬ ಸಿದ್ಧಾಂತ ವನ್ನು ಒಪ್ಪಿಕೊಂಡೆವು. ತಮ್ಮ ಶೈಶವಾವಸ್ಥೆಯ ಧರ್ಮಗಳಲ್ಲಿ ನಂಬಿಕೆ ಇಲ್ಲದೇ ಇದ್ದರೂ ಕೂಡ, ಪರಹಿತವೇ ಒಂದು ಗುರಿ, ಸೇವೆಯ ಮುಖ್ಯ ಉದ್ದೇಶವನ್ನು ಇಟ್ಟುಕೊಂಡರೆ ಜೀವನದಲ್ಲಿ ಕರ್ಮಮಾಡುವುದಕ್ಕೆ ತಕ್ಕ ಪ್ರೋತ್ಸಾಹ ಸಿಕ್ಕುವುದೆಂದು ಭಾವಿಸಬಹುದು. ಈ ಭಾವನೆ ನಮ್ಮ ಮನಸ್ಸಿನಲ್ಲಿ ಆಗ ಇದ್ದುದು. ಹತ್ತುವರುಷಗಳ ಹಿಂದೆ ಸ್ವಾಮಿಜಿ ಹೇಳಿದ ಶ್ರೇಷ್ಠದಾನವೇ ಆಧ್ಯಾತ್ಮ, ಅದಕ್ಕಿಂತ ಒಂದು ಮೆಟ್ಟಲು ಕೆಳಗಿನದು ವಿದ್ಯಾದಾನ, ಅದಕ್ಕಿಂತಲೂ ಕನಿಷ್ಟವಾಗಿರುವುದು ಅನ್ನದಾನಾದಿಗಳು ಎಂಬುದನ್ನು ಕೇಳಿದಾಗ ನಮಗೆ ಆಶ್ಚರ್ಯವಾಯಿತು. ರೋಗಿಗಳಿಗೆ ದರಿದ್ರರಿಗೆ ನಾವು ತೋರುವ ಕರುಣೆಯೆಲ್ಲ ಅತ್ಯಂತ ಕನಿಷ್ಟಪಕ್ಷದ್ದು ಆಯಿತು. ಇದನ್ನು ಅರಿಯುವುದಕ್ಕೆ ನನಗೆ ಹಲವು ವರುಷಗಳಾಯಿತು. ಆದರೆ ಈಗ ಗೊತ್ತಾಗಿದೆ ಮೇಲಿನ ದಾನವನ್ನು ಕೊಡಬೇಕಾದರೆ ಕೆಳಗಿನ ದಾನದ ಮೂಲಕ ಹೋಗಬೇಕಾಗಿದೆ ಎಂಬುದು.

ಪರಿಶುದ್ಧವಾದ ಗಾಳಿ ಮತ್ತು ಒಳ್ಳೆಯ ವಾತಾವರಣ ಇರಬೇಕು, ಅದೇ ಎಲ್ಲಕ್ಕಿಂತಲೂ ಶ್ರೇಷ್ಠವಾದುದು ಎಂದು ಅದರಲ್ಲೆ ಅಂಧರಾಗಿದ್ದ ಪಾಶ್ಚಾತ್ಯರಿಗೆ ಬಾಹ್ಯಶೌಚವೇ ಸಾಧು ಜೀವನದ ಚಿಹ್ನೆ ಎಂಬ ಭಾವ ಬಂದು ಹೋಗಿತ್ತು. ಪ್ರಪಂಚವನ್ನು ನಿಕೃಷ್ಟದೃಷ್ಟಿಯಿಂದ ನೋಡಬೇಕು ಎಂಬ ಪೌರಾತ್ಯ ಭಾವನೆಗೆ ವಿರೋಧವಾಗಿತ್ತು. ಇವೆರಡನ್ನೂ ಆಯಾ ದೃಷ್ಟಿಯಿಂದ ತಿಳಿದುಕೊಳ್ಳುವುದಕ್ಕೆ ಸರಿಯಾದಮಾರ್ಗ ಆಗ ನಮಗೆ ಗೊತ್ತಿರಲಿಲ್ಲ. ಈ ವಿರೋಧಭಾವನೆಗಳೆರಡನ್ನೂ ಮನಗಂಡ ಸ್ವಾಮಿಜಿ ಧೈರ್ಯವಾಗಿ, ಸಾಧುಗಳು ಬೆಟ್ಟದ ಮೇಲೆ ಇದ್ದುದು ಮನೋಹರವಾದ

ದೃಶ್ಯವನ್ನು ನೋಡುವುದಕ್ಕೆ ಎಂದರು. ಅವರು ಹೇಳಿದ, ಪೂಜಾಮಂದಿರ ದಲ್ಲಿ ಹೂವು ಗಂಧದಕಡ್ಡಿಯನ್ನು ಹಚ್ಚಿ, ಆಹಾರ ಶುದ್ಧವಾಗಿರಲಿ, ದೇಹ ಶುದ್ಧವಾಗಿರಲಿ ಎಂಬುದನ್ನು ಕೇಳಿದಾಗ, ಎರಡು ಅತಿರೇಕಗಳನ್ನು ಹೇಗೆ ಒಂದು ಗೂಡಿಸುವುದು ಎಂಬ ಶಂಕೆ ತಲೆದೋರಿತು. ಇಲ್ಲಿ ನಿಜವಾಗಿ ಸ್ವಾಮಿಜಿ ಭರತಖಂಡದಲ್ಲಿ ಬಾಹ್ಯಶೌಚ ವೆಂದರೆ ಏನೊ ಅದನ್ನೆ ನಮ್ಮ ಭಾಷೆಯಲ್ಲಿ ವಿವರಿಸುತ್ತಿದ್ದರು. ಪಾಶ್ಚಾತ್ಯದೇಶದ ದೊಡ್ಡ ನಗರಗಳಲ್ಲಿ ದೀನರು ವಾಸಿಸುವ ಸ್ಥಳಗಳನ್ನು ಶುಚಿಯಾಗಿಡುವ ತನಕ ನಮ್ಮ ಶೌಚದ ಭಾವನೆ ಕೇವಲ ಶ್ರೀಮಂತರ ಒಂದು ಸ್ವಾರ್ಥ ಎಂದರು.

ಪ್ರಾಪಂಚಿಕ ಸ್ಥಿತಿಗತಿಗಳನ್ನು ಜಯಪ್ರದವಾಗಿ ನೆರವೇರಿಸಿದ ಮಹಾತ್ಮರನ್ನು ನಾವು ಗೌರವದಿಂದ ನೋಡುತ್ತಿದ್ದೆವು. ಈ ಭಾವನೆಗೂ ಇದೇ ಗತಿ ಕಾದುಕೊಂಡಿತ್ತು. ನಿಜವಾದ ಆಧ್ಯಾತ್ಮಿಕತೆ ಪ್ರಪಂಚವನ್ನು ಸಹಿಸಲಾರದು, ಅದನ್ನು ನಿಕೃಷ್ಟದೃಷ್ಟಿಯಿಂದ ನೋಡುವುದು, ಅದನ್ನು ಗಮನಿಸುವುದೇ ಇಲ್ಲ, ಎನ್ನುತ್ತಿದ್ದರು ಸ್ವಾಮಿಜಿ. ಈ ಭಾವನೆಯನ್ನು ಎಂದಿಗೂ ಸ್ವಾಮಿಜಿ ತಗ್ಗಿಸಲಿಲ್ಲ. ಇದನ್ನು ಸಾರುವಾಗ ಅನುಮಾನಿಸು ತ್ತಲೇ ಇರಲಿಲ್ಲ. ಶ್ರೇಷ್ಠ ಆಧ್ಯಾತ್ಮಿಕತೆ ಪ್ರಾಪಂಚಿಕತೆಯನ್ನು ಸಹಿಸ ಲಾರದು.

ಇದು ಕೇವಲ ಆಧ್ಯಾತ್ಮಿಕ ಜೀವಿಗಳಿಗೆ ಮಾತ್ರ ಅನ್ವಯಿಸುವುದು ಎಂಬುದನ್ನು ಸ್ಪಷ್ಟವಾಗಿ ಅರಿತೆವು. ನಾವೊಂದು ಹೊಸ ಜನಾಂಗದ ಭಾಷೆಯನ್ನು ಕ್ರಮೇಣ ಕಲಿಯುತ್ತಿದ್ದೆವು. ಇದರಿಂದ ಪ್ರಪಂಚದ ಅತ್ತ ಕಡೆ ಇರುವವರೊಂದಿಗೆ ಮಾತನಾಡುವುದಕ್ಕೆ ಸುಲಭವಾಗುತ್ತಿತ್ತು. ಪೌರನೀತಿ ಗೃಹನೀತಿ ಇವುಗಳೆಲ್ಲ ಜೀವಿಗೆ ಶಿಶುವಿಹಾರಗಳಂತೆ. ಇದರಲ್ಲಿ ಯಾವ ಭಿನ್ನಾಭಿಪ್ರಾಯವೂ ಇರಲಿಲ್ಲ. ಮತ್ತೊಂದು ದೇಶವನ್ನು ಅಭಿ ವೃದ್ಧಿಗೆ ತಂದ ಜವಾಬ್ದಾರಿ ಮತ್ತು ಕ್ರಮಜೀವನ ಇವನ್ನು ಅನುಕರಿಸ ಕೂಡದು ಎಂದು ಇರಲಿಲ್ಲ. ಆದರೂ ಅದನ್ನು ಕಲಿಯುವಾಗ "ಆಧ್ಯಾ ತ್ಮಿಕತೆ ಪ್ರಾಪಂಚಿಕತೆಯನ್ನು ಸಹಿಸಲಾರದು" ಎಂಬ ಭಾರತೀಯ ಭಾವನೆ ಮುಖ್ಯ ಪಲ್ಲವಿಯಾಗಿತ್ತು. ನಾವು ಇದಕ್ಕೆ ವಿರೋಧವಾಗಿ ಕ್ರಮಬದ್ಧವಾದ, ಸರಿಯಾಗಿ ನಿಯೋಜಿತವಾದ, ಪರಹಿತಾಕಾಂಕ್ಷಿ ಗಳಾದ ಪಾಶ್ಚಾತ್ಯ ಯತಿ ಸಂಸ್ಥೆಯ ಅಬೆಟ್, ಬಿಷಪ್ ಮತ್ತು ಸಹೋ ದರಿಯರನ್ನು ಭರತಖಂಡದ ಭಗವದ್ಭಕ್ತಿಯಲ್ಲಿ ಉನ್ಮತ್ತರಾದ, ಮಲಿನ

ವಸನಧಾರಿಗಳಾದ ಭಿಕ್ಷುಕರೊಂದಿಗೆ ಹೋಲಿಸಿ ನೋಡಿದರೆ! ಪಾಶ್ಚಾತ್ಯ ದೇಶದಲ್ಲಿ ಕೂಡ ಆಧ್ಯಾತ್ಮಿಕ ಜೀವನ ತನ್ನ ಪರಾಕಾಷ್ಠತೆಯನ್ನು ಮುಟ್ಟಿದಾಗ ಅದು ಪೌರಾತ್ಯ ಮಹಾತ್ಮರ ವೇಷವನ್ನೆ ಧರಿಸಿತ್ತೆಂದು ಹೇಳಬಹುದು. ಯಾರಿಗೆ ಮೀರಾ ಬಾಯಿ, ಚೈತನ್ಯ, ತುಕಾರಾಮ, ರಾಮಾನುಜ ಮುಂತಾದವರ ದೇಶದ ಪರಿಚಯವಿದೆಯೊ ಅವರು ಅಸಾಸಿಯ ಸೈಂಟ್ ಫ್ರಾನ್ಸಿಸ್‌ರನ್ನು ಕೂಡ ಅವರ ಗುಂಪಿಗೆ ಸೇರಿಸುವುದರಲ್ಲಿ ಸಂದೇಹವಿಲ್ಲ.

ಇಂಗ್ಲೀಷಿಗೆ ಭಾಷಾಂತರಮಾಡಿರುವ ಜಾತಕ ಕಥೆಗಳಲ್ಲಿ ಈ ಒಂದು ಭಾವನೆ ಪದೇಪದೇ ಬರುವುದು. ಅದೇ "ನರಕಕ್ಕೆ ಅಂಜುವಂತೆ ಸ್ವರ್ಗಕ್ಕೂ ಅಂಜುವಂತಹ ಒಂದು ಸ್ಥಳಕ್ಕೆ ಬಂದಾಗ" ಎಂಬುದು. ಸ್ವಾಮಿಜಿ ಸಾನ್ನಿಧ್ಯದಿಂದ ನಮ್ಮ ಮನದಲ್ಲಿ ಮೂಡಿದ ಭಾವನೆಗಳನ್ನು ವಿವರಿಸಲು ಮೇಲಿನ ವಾಕ್ಯಕ್ಕಿಂತ ಸುಂದರವಾದುದು ಬೇರೊಂದಿಲ್ಲ. ೧೮೯೬ ರಲ್ಲಿ ಸ್ವಾಮಿಜಿ ಪ್ರವಚನಗಳನ್ನು ಕೇಳಿದ ಅನೇಕರಿಗೆ ಭಾರತೀಯರಲ್ಲಿರುವ ಸಂಸಾರದಿಂದ ಪಾರಾಗಬೇಕೆಂಬ ಹಂಬಲವನ್ನು ಸ್ವಲ್ಪವಾದರೂ ಅರಿಯಲು ಸಾಧ್ಯವಾಯಿತು.

ಆದರೆ ಎಲ್ಲ ಭಾವಗಳಿಗೂ ಅತೀತವಾಗಿದ್ದುದೇ, ಅದನ್ನೆಲ್ಲಾ ಅತಿಕ್ರಮಿಸಿದ್ದುದೇ, "ದೇವರು ಸತ್ಯವಾದರೆ ಇತರ ವಸ್ತುಗಳಿಂದ ಏನು ಪ್ರಯೋಜನ? ಅದು ಸತ್ಯವಲ್ಲದೇ ಇದ್ದರೆ ನಮ್ಮ ಜೀವನದಿಂದ ಏನು ಪ್ರಯೋಜನ?" ಎಂಬ ಭಾವನೆ. ಈ ಆಚಾರ್ಯರಲ್ಲಿ ತಮ್ಮ ಬೋಧನೆಯ ಸಾರವನ್ನೆಲ್ಲಾ, ತಮ್ಮ ಜೀವನದ ಭವ್ಯ ಭರವಸೆಯನ್ನೆಲ್ಲಾ, ಕೆಲಸಕ್ಕೆ ಬಾರದ ವಸ್ತುವಿನಂತೆ ಬೇಕಾದರೆ ಇತರರಿಗೆ ಸಹಾಯವಾಗುವಹಾಗಿದ್ದರೆ ಕಿತ್ತೆಸೆಯಬಲ್ಲ ಶಕ್ತಿ ಇತ್ತು. ಕೆಲವು ವರುಷಗಳಾದಮೇಲೆ ಉದ್ವಿಗ್ನರಾಗಿ ನನ್ನ ಒಂದು ಪ್ರಶ್ನೆಗೆ ಹೀಗೆ ಉತ್ತರ ಕೊಟ್ಟರು:" ನಾನು ಬೇಕಾದರೆ ಒಂದು ಮಹಾಪರಾಧವನ್ನು ಮಾಡಿ ನರಕಕ್ಕೆ ಹೋಗಲೂ ಸಿದ್ಧನಾಗಿರುವೆನು, ಇದರಿಂದ ಒಂದು ವ್ಯಕ್ತಿಗೆ ಸಹಾಯವಾಗುವ ಹಾಗಿದ್ದರೆ!" ಇದೇ ಉದ್ದೇಶವನ್ನು ಅವರು ನಮ್ಮಲ್ಲಿ ಕೆಲವರಿಗೆ ಮಾಡುತ್ತಿದ್ದ ಬೋಧನೆಯಲ್ಲಿ ನೋಡಬಹುದಾಗಿತ್ತು. ಅದು ಈ ಯುಗಕ್ಕೆ ಅತಿ ಮುಖ್ಯವಾಗಿ ಬೇಕಾಗಿತ್ತೇನೊ? ಅದೇ ಬೋಧಿಸತ್ವನ ಜೀವನದಲ್ಲಿ ಪ್ರಪಂಚದ ಪ್ರತಿಯೊಂದು ಕಣವೂ ನಿರ್ವಾಣವನ್ನು ಪಡೆದಲ್ಲದೆ ತಾನು ನಿರ್ವಾಣವನ್ನು ಪಡೆಯುವುದಿಲ್ಲ ಎಂಬ ಆದರ್ಶ. ಮುಕ್ತಿಯ ಹಂಬಲವನ್ನು ತ್ಯಜಿಸುವುದೇ

ಮುಕ್ತನ ಪರಮಚಿಹ್ನೆ ಏನೊ? ನಾನು ಅನಂತರ ಅದೇ ಆದರ್ಶವನ್ನು ಹಲವು ಭಾರತೀಯ ಕಥೆಗಳಲ್ಲಿ ಓದಿರುವೆನು. ರಾಮಾನುಜರು ತಾವಿತ್ತ ಭಾಷೆಗೆ ವಿರೋಧವಾಗಿ ಪರೆಯರಿಗೆಲ್ಲಾ ಮಂತ್ರವನ್ನು ಉಪದೇಶ ಮಾಡಿದ್ದು, ಬುದ್ಧ ಯಾವ ರಹಸ್ಯವನ್ನೂ ಬಚ್ಚಿಡದೆ ಎಲ್ಲವನ್ನೂ ಪ್ರಚಾರ ಮಾಡಿದ್ದು, ಶಿಶುಪಾಲ ದೇವರ ಸಮೀಪಕ್ಕೆ ಬೇಗ ಹೋಗಬೇಕೆಂದು ಅವನ ಶತ್ರುವಾಗಿದ್ದು, ಹಲವು ಜನ ಮಹಾತ್ಮರು ದೇವರಿಗೆ ವಿರೋಧವಾಗಿ ಹೋರಾಡಿದ್ದು ಇದರಲ್ಲೆಲ್ಲಾ ನಾವು ಆ ಭಾವನೆಯನ್ನು ನೋಡುವೆವು.

ಆದರೆ ಸ್ವಾಮಿಜಿ ಕೆಲವು ವೇಳೆ ವ್ಯಕ್ತಿಗಳ ವಿಷಯವಾಗಿಯೂ ಮಾತನಾಡುತ್ತಿದ್ದರು. ಒಂದು ದಿನ ಉಪನ್ಯಾಸವಾದಮೇಲೆ ನಮ್ಮ ನಮ್ಮೊಳಗೆ ಏನನ್ನೋ ಮಾತನಾಡಿಕೊಳ್ಳುತ್ತಿದ್ದೆವು. ಆಗ ಸ್ವಾಮಿಜಿ ನಮ್ಮ ಸಮೀಪಕ್ಕೆ ಬಂದು ಯಾವುದೋ ಒಂದು ವಿಷಯವನ್ನು ಕುರಿತು ಹೇಳುವಾಗ "ನನ್ನಲ್ಲಿ ಒಂದು ಮೂಢನಂಬಿಕೆ ಇದೆ. ಆದರೆ ಇದು ಕೇವಲ ನನ್ನ ನಂಬಿಕೆ ಮಾತ್ರ. ಆದೇ ಯಾರು ಹಿಂದೆ ಬುದ್ಧನಂತೆ ಬಂದನೋ ಅವನೇ ಅನಂತರ ಕ್ರಿಸ್ತನಂತೆ ಬಂದನು" ಎಂದರು. ಆಗ ಬೇರೊಂದು ಮಾತನ್ನು ಎತ್ತಿದಾಗ ತಮ್ಮ ಗುರುದೇವನನ್ನು ಕುರಿತು ಮಾತನಾಡತೊಡಗಿದರು. ಆದೇ ಪ್ರಥಮಬಾರಿ ಅವರ ಬಾಯಿಂದ ಅವರ ಗುರುದೇವರ ವಿಷಯವನ್ನು ಕೇಳಿದ್ದು. ಮದುವೆಯಾಗಿ ಮರೆತು ಹೋಗಿದ್ದ ಅವರ ಧರ್ಮಪತ್ನಿ, ಕಂಬನಿದುಂಬಿ ಪತಿಗೆ ಸ್ವಾತಂತ್ರ್ಯವನ್ನು ಕೊಟ್ಟದ್ದನ್ನು ಕೇಳಿದೆವು. ಅವರು ಈ ವಿಷಯನ್ನು ಕುರಿತು ಮಾತನಾಡುತ್ತಿದ್ದಾಗ ಧ್ವನಿ ತುಂಬ ನಿಧಾನವಾಯಿತು. ಕೊನೆಗೆ ಅವರೇನು ಕನಸಿನ ಆಳದಲ್ಲಿ ಮಾತನಾಡುತ್ತಿರುವರೋ ಎಂದು ಭಾಸವಾಯಿತು. ಕೊನೆಗೆ ಆ ಭಾವದಿಂದ ಜಾಗ್ರತರಾಗಿ ಎದ್ದು ಒಬ್ಬರೇ ಮಾತನಾಡಿಕೊಳ್ಳುತ್ತಿರುವಂತೆ ಹೀಗೆಂದರು: "ಹೌದು, ಹೌದು, ಇದೆಲ್ಲಾ ಹಿಂದೆ ಆಗಿತ್ತು, ಮುಂದೆ ಆಗುತ್ತದೆ. ಮಗಳೆ, ಶಾಂತಳಾಗಿ ಹೋಗು. ನಿನ್ನ ಶ್ರದ್ಧೆ ನಿನ್ನನ್ನು ಪೂರ್ಣಾತ್ಮಳನ್ನಾಗಿ ಮಾಡಿದೆ."

ಒಂದು ದಿನ ಆಕಸ್ಮಿಕವಾಗಿ ಅವರು ಹೀಗೆಂದರು: "ನನ್ನ ದೇಶದ ಸ್ತ್ರೀಯರ ಮೇಲ್ಮೆಗಾಗಿ ನಾನೊಂದು ಯೋಜನೆಯನ್ನು ಚಿಂತಿಸುತ್ತಿರುವೆನು. ಅದರಲ್ಲಿ ನೀನು ನನಗೆ ಬಹಳ ಸಹಾಯಕಳಾಗಬಹುದು." ನನ್ನ ಜೀವನವನ್ನು ಬದಲಾಯಿಸುವಂತಹ ಒಂದು ಸಂದೇಶವನ್ನು ನಾನು

ಕೇಳಿದೆ ಎಂದು ತಿಳಿದೆ. ಆ ಯೋಜನೆಗಳು ಏನೊ ನನಗೆ ಗೊತ್ತಿಲ್ಲ. ಇದುವರೆಗಿನ ನನ್ನ ಜೀವನವನ್ನು ತ್ಯಜಿಸುವುದರಲ್ಲಿ ಸಿರತಳಾಗಿದ್ದುದರಿಂದ ಆ ಯೋಜನೆ ವಿಷಯವಾಗಿ ಕೇಳಲೂ ಇಲ್ಲ. ಅನ್ಯದೇಶೀಯರ ಭಾವನೆಯನ್ನು ನಾನು ಅರಿಯಬೇಕಾದರೆ ನಾನು ಹೊಸದಾಗಿ ಕಲಿತುಕೊಳ್ಳಬೇಕಾದಂತಹ ವಿಷಯಗಳು ಎಷ್ಟೋ ಇವೆ ಎನ್ನುವುದು ನನಗೆ ಗೊತ್ತಿತ್ತು.

ಲಂಡನ್ ನಗರಿಯನ್ನು ಸುಂದರವಾಗಿಡುವ ಆವಶ್ಯಕತೆಯನ್ನು ಕುರಿತು ನಾನು ಒಮ್ಮೆ ಅವರಿಗೆ ಹೇಳಿದಾಗ ಸ್ವಾಮಿಜಿ, "ನೀವು ಇತರ ನಗರಿಗಳನ್ನು ಧ್ವಂಸಮಾಡಿರುವಿರಿ!" ಎಂದು ಹಠಾತ್ತಾಗಿ ನನಗೆ ಹೇಳಿದರು. ನನಗೆ ಲಂಡನ್ ನಗರಿಯು ರಹಸ್ಯ ಮತ್ತು ದುರಂತ ಇಡೀ ಮಾನವ ಕೋಟಿಯ ಸಮಸ್ಯೆಯ ಒಂದು ಜ್ವಲಂತ ಉದಾಹರಣೆಯಂತೆ ಇತ್ತು. "ನಿಮ್ಮ ನಗರಿಯನ್ನು ಸುಂದರಮಾಡುವುದಕ್ಕೆ ಇತರರ ನಗರಿಗಳನ್ನು ಧ್ವಂಸಮಾಡಿರುವಿರಿ" ಎಂದರು ಅವರು. ನಾನು ಈ ವಿಷಯವಾಗಿ ಹೆಚ್ಚು ಅವರ ಬಾಯಿಂದ ಕೇಳಲಿಲ್ಲ. ಆದರೆ ಹಲವು ದಿನಗಳವರೆಗೆ ಈ ಮಾತು ನನ್ನ ಕಿವಿಯಲ್ಲಿ ಅನುರಣಿತವಾಗುತ್ತಿತ್ತು. ನನ್ನ ದೃಷ್ಟಿಯಲ್ಲಿ ಲಂಡನ್ ನಗರ ಸುಂದರವಾಗಿರಲಿಲ್ಲ. ನನ್ನ ಪ್ರಶ್ನೆಯನ್ನು ಅವರು ತಪ್ಪು ತಿಳಿದುಕೊಂಡಿದ್ದರು. ಆದರೆ ಅವರು ತಪ್ಪುತಿಳಿದುಕೊಂಡಿದ್ದರಿಂದ ಬೇರೊಂದು ದೃಷ್ಟಿ ನನಗೆ ಪರಿಚಯವಾಯಿತು.

"ಆಂಗ್ಲೇಯರು ಒಂದು ದ್ವೀಪದಲ್ಲಿ ಜನಿಸಿರುವರು; ಯಾವಾಗಲೂ ದ್ವೀಪದಲ್ಲಿಯೇ ಇರಲು ಬಯಸುವರು" ಎಂದು ಒಂದು ದಿನ ನನ್ನ ಗುರುದೇವ ಹೇಳಿದರು. ಇದು ನನ್ನ ಪಾಲಿಗೆ ಸತ್ಯವಾಗಿ ಕಂಡಿತು. ನಾನು ಆಗಿನ ನನ್ನ ಸ್ಥಿತಿಯನ್ನು ಇಂದು ಊಹಿಸಿಕೊಂಡಾಗ ನನ್ನ ಭಾವನೆ ಮತ್ತು ಆದರ್ಶ ಪ್ರತ್ಯೇಕ ಮನೋಭಾವದಿಂದ ಕೂಡಿದ್ದಿತು ಎಂದು ನನಗೆ ಗೊತ್ತಾಗುವುದು. ನಾನು ಇಂಗ್ಲೆಂಡಿನಲ್ಲಿ ಇರುವವರೆಗೆ ಭಾರತೀಯ ದೃಷ್ಟಿಯನ್ನು ಕಲಿಯಲಿಲ್ಲ. ನನ್ನನ್ನು ಅನಂತರ ಭರತಖಂಡದಲ್ಲಿ ತನ್ನ ಸಮೀಪಕ್ಕೆ ಕರೆಸಿಕೊಂಡ ಸ್ನೇಹಿತಳೊಬ್ಬಳು ಇಂಗ್ಲೆಂಡಿನಲ್ಲಿ ಒಂದು ದಿನ ಸಂಜೆ ಅವರ ಮನೆಯಲ್ಲಿ ಸ್ವಾಮಿಜಿ ಅವರಿಗೆ ನಾನು ಭರತಖಂಡಕ್ಕೆ ಅ[illegible] ಕೆಲಸದಲ್ಲಿ ಸಹಾಯಕಳಾಗಿ ಹೋಗಲು ಸಿದ್ಧನಾಗಿರುವೆ ಎಂಬುದನ್ನು ಹೇಳಿದರು. ಅವರಿಗೆ ಆಶ್ಚರ್ಯವಾಯಿತು. ಆದರೆ ಶಾಂತವಾಗಿ "ನನ್ನ ಜನರಿಗಾಗಿ ಕೆಲಸಮಾಡಲು ಆವಶ್ಯಕವಿದ್ದರೆ ಇನ್ನೂರು ಜನ್ಮಗಳನ್ನಾ[illegible]ರೂ

ನಾನು ಎತ್ತಲು ಸಿದ್ಧನಾಗಿರುವೆ'' ಎಂದರು. ಈ ಮಾತು ಮತ್ತು ಅನಂತರ ಅವರು ಇಂಡಿಯಾದೇಶಕ್ಕೆ ಬರುವುದಕ್ಕೆ ಮುಂಚೆ ನನಗೆ ಪತ್ರದಲ್ಲಿ ಬರೆದ ಮುಂದಿನ ನುಡಿಗಳು ನನ್ನ ಮನಸ್ಸಿನಲ್ಲಿ ಚಿರಜಾಗ್ರತವಾಗಿ ನಿಂತಿವೆ: "ನೀನು ಇಂಡಿಯಾದೇಶಕ್ಕೆ ಕೆಲಸಮಾಡಲಿ ಬಿಡಲಿ, ವೇದಾಂತವನ್ನು ನೀನು ಸ್ವೀಕರಿಸಿದರೂ ಒಂದೇ, ತ್ಯಜಿಸಿದರೂ ಒಂದೇ; ಆಜೀವಪರಿಯಂತರ ನಾನು ನಿನ್ನೊಡನೆ ಇರುವೆನು. ಆನೆಯ ಕೊಂಬುಗಳು ಹೊರಗೆ ಬರುತ್ತವೆಯೇ ಹೊರತು ಒಳಗೆ ಹೋಗುವುದಿಲ್ಲ. ಅದರಂತೆಯೇ ಮನುಷ್ಯನ ಮಾತು."

ಸ್ವಾಮಿಜಿ ತಮ್ಮ ಜನರನ್ನು ಕುರಿತು ಹೇಳುತ್ತಿದ್ದುದು ಕೇವಲ ಅವರ ಸ್ವಂತ ಅಭಿಪ್ರಾಯವಷ್ಟೆ. ಅದು ಎಲ್ಲರಿಗೂ ಅನ್ವಯಿಸುವುದಲ್ಲ, ಗೌಣವಾಗಿತ್ತು. ಅವರ ಪ್ರವಚನಾದಿಗಳಲ್ಲಿ, ಬೋಧನೆಗಳಲ್ಲಿ, ಮಾನವ ಕೋಟಿ ಅಜ್ಞಾನದಿಂದ ಪಾರಾಗಬೇಕು ಎಂಬುದು ಅವರ ಹಂಬಲವಾಗಿತ್ತು. ಇಂತಹ ಪ್ರೀತಿ, ಇಂತಹ ಅನುಕಂಪವನ್ನು ಅವರ ಉಪನ್ಯಾಸವನ್ನು ಕೇಳಿದ ನಾವು ಬೇರೆಲ್ಲೂ ನೋಡಿಲ್ಲ. ಅವರಿಗೆ ಶಿಷ್ಯರೆಲ್ಲಾ ಒಂದೇ. ಭಾರತೀಯನೋ ಪಾಶ್ಚಾತ್ಯನೊ ಯಾರಾದರಾಗಲಿ ವ್ಯತ್ಯಾಸವಿರಲಿಲ್ಲ. ಆದರೂ ತಮ್ಮ ಸಂದೇಶ ಅತ್ಯಂತ ಪ್ರಭಾವಾನ್ವಿತವಾದುದು ಎಂಬುದನ್ನು ಅರಿತಿದ್ದರು. ಅವರು ಲಂಡನ್ನಿನಲ್ಲಿ ಕೊನೆಯ ದಿನ Royal Society of Painters in Water Colours ಎಂಬ ಸಂಸ್ಥೆಯಲ್ಲಿ ಡಿಸೆಂಬರ್ ೧೫ ನೇ ತಾರೀಖು ೧೮೯೬ ರಲ್ಲಿ ಉಪನ್ಯಾಸಮಾಡಿದಾಗ ಹೀಗೆ ಹೇಳಿದರು: "ಚರಿತ್ರೆಯಘಟನೆಗಳು ಪುನಃ ಪ್ರಾರಂಭವಾಗುವುವು. ರೋಮನ್ ಚಕ್ರಾಧಿಪತ್ಯದ ಶಾಂತಿ ಕ್ರೈಸ್ತಧರ್ಮ ಹಬ್ಬಲು ಸಹಾಯಕವಾಯಿತು." ಇದನ್ನು ಹೇಳುತ್ತಿದ್ದಾಗ ಅವರ ಬುದ್ಧನಂತಿರುವ ಗಾಂಭೀರ್ಯ ಮತ್ತು ಪ್ರಶಾಂತಿಯನ್ನು ಕಂಡಾಗ ಮುಂದೆ ಇವರ ಉಪನ್ಯಾಸದ ಪರಿಣಾಮವಾಗಿ ಹಲವು ಜನ ಬೋಧಕರು ಪಾಶ್ಚಾತ್ಯ ದೇಶಗಳಿಗೆ ಬರಬಹುದು, ಅವರು ತಮ್ಮ ನಂತರ ಬರುವವರಿಗೆ ಅವಕಾಶಮಾಡಿಕೊಡಬಹುದು ಎಂಬುದನ್ನು ಅವರ ಮುಖಮುದ್ರೆಯಲ್ಲಿ ಗ್ರಹಿಸಬಹುದಾಗಿತ್ತು.

## ೩
## ಆದರ್ಶಗಳ ಘರ್ಷಣೆ

ಸ್ವಾಮಿ ವಿವೇಕಾನಂದರು ತಮ್ಮ ಗುರುಗಳಾದ ಶ್ರೀರಾಮಕೃಷ್ಣ ಪರಮಹಂಸರನ್ನು ಕುರಿತು, "ಅವರಿಗೆ ವೇದಾಂತವೂ ಗೊತ್ತಿರಲಿಲ್ಲ, ಯಾವ ಸಿದ್ಧಾಂತವೂ ಗೊತ್ತಿರಲಿಲ್ಲ. ತಾವು ಅತಿ ಶ್ರೇಷ್ಠ ಬಾಳುವೆಯನ್ನು ಬಾಳಿ ಇತರರಿಗೆ ಅದನ್ನು ವಿವರಿಸುವುದಕ್ಕೆ ಬಿಟ್ಟುಹೋದರು" ಎಂದರು. ಮಹಾಪುರುಷರಲ್ಲಿ ತಮಗೇ ಗೊತ್ತಿಲ್ಲದ ಮಹಿಮಾಮಯಗುಣಗಳಿರುತ್ತವೆ ಎಂಬುದು ನನ್ನ ಗುರುದೇವನ ಜೀವಿತದಿಂದಲೂ ವ್ಯಕ್ತವಾಯಿತು.

ಪಾಶ್ಚಾತ್ಯದೇಶದಲ್ಲಿ ಸ್ವಾಮಿಜಿ ಕೇವಲ ಧಾರ್ಮಿಕ ಗುರುಗಳಂತೆ ಮಾತ್ರ ಕಾಣಿಸಿಕೊಂಡರು. ಈಗಲೂ ಕೂಡ ನಾವು ಸ್ವಲ್ಪ ಹಿಂದಿನದನ್ನು ಸ್ಮರಿಸಿಕೊಂಡರೆ ಹಿಂದೆ ಉಪನ್ಯಾಸದ ಪ್ರಾಂಗಣದಲ್ಲಿ ಸ್ವಲ್ಪ ಎತ್ತರದ ವೇದಿಕೆಯ ಮೇಲೆ ಬುದ್ಧನಂತೆ ಮಂಡಿಸಿದ ಸ್ವಾಮಿಜಿಯ ಚಿತ್ರಹೊಳೆಯು ವುದು. ಮತ್ತೊಮ್ಮೆ ಪೌರಾತ್ಯರ ಸಂದೇಶ ಆಧುನಿಕ ಪ್ರಪಂಚದಲ್ಲಿ ಸ್ವಾಮಿಜಿ ಅವರ ವಾಣಿಯ ಮೂಲಕ ಕೇಳುವುದು. ಆಗ ಅವರು ಮಾತ ನಾಡುತ್ತಿದ್ದುದೆಲ್ಲ ತ್ಯಾಗ, ಮುಕ್ತನಾಗಬೇಕೆಂಬ ಹಂಬಲ, ಬಂಧನವನ್ನು ತುಂಡರಿಸುವುದು, ಶುದ್ಧಚಾರಿತ್ರದ ಜ್ಯೋತಿ, ಸಾಕ್ಷಿಯ ನಿಲುವಿನಲ್ಲಿ ಇರುವ ಆನಂದ, ಅವ್ಯಕ್ತದಲ್ಲಿ ನಮ್ಮ ವ್ಯಕ್ತಿತ್ವವನ್ನು ಲೀನಗೊಳಿಸುವುದು ಮುಂತಾದ ವಿಷಯಗಳೇ ಆಗಿದ್ದುವು. ಕೆಲವು ವೇಳೆ ಒಂದೆರಡು ಸಲ ಅವರು ದೇಶಭಕ್ತರಂತೆ ಕಂಡುದೂ ನಿಜ. ಆದರೆ ಅವರು ನಮಗೆ ಹಿಂದೂ ದೇಶದ ಸಂದೇಶಕರಂತೆ ಕಂಡರೇ ಹೊರತು ಭರತಖಂಡಕ್ಕೆ ದುಡಿಯು ತ್ತಿರುವ ವ್ಯಕ್ತಿಯಂತೆ ಕಾಣಲಿಲ್ಲ. "ಮಾನವನ ಪವಿತ್ರತೆಯನ್ನು ನಿಜವಾಗಿ ಅರಿತು ಕರ್ಮಮಾಡುವವನು ಎಷ್ಟು ಪ್ರಶಾಂತಚಿತ್ತನಾಗಿರುವನು. ಅಂತಹವರಿಗೆ ಜನರ ಅಜ್ಞಾನವನ್ನು ಪರಿಹರಿಸುವುದೊಂದಲ್ಲದೆ ಬೇರೆ ಕೆಲಸವೇ ಇಲ್ಲ. ಉಳಿದವುಗಳೆಲ್ಲಾ ತಾವಾಗಿ ಸರಿಹೊಂದಿಕೊಳ್ಳುವುವು" ಎಂದರು ಒಮ್ಮೆ. ಇಂತಹ ಆಳವರಿಯಲಾರದ ಪ್ರಶಾಂತಿಯಿಂದ ಬಂದುದಾಗಿರಬೇಕು ನಾವು ಅವರಲ್ಲಿ ನೋಡಿದುದೆಲ್ಲ, ಅವರ ಬಾಯಿಂದ ಕೇಳಿದುದೆಲ್ಲ.

ನಾನು ಭರತಖಂಡಕ್ಕೆ ಕಾಲಿಟ್ಟಕೂಡಲೇ ಅವರಲ್ಲಿ ನಾನು ಹಿಂದೆ

ನಿರೀಕ್ಷಿಸದ, ಮತ್ತಾವುದೋ ಒಂದು ಸ್ವಭಾವವನ್ನು ಕಂಡೆ. ಇದು ಶ್ರೀರಾಮಕೃಷ್ಣ ಪರಮಹಂಸರ ವಿಷಯವಾಗಲಿ, ಅವರಗೆ ಸಂಬಂಧಪಟ್ಟ ಮತ್ತಾವುದೋ ವಿಷಯವಾಗಲೀ ಅಲ್ಲ. ನನಗೆ ಆಶ್ಚರ್ಯವನ್ನುಂಟು ಮಾಡಿದ್ದು ಒಂದು ಪಂಜರದಲ್ಲಿ ಸಿಕ್ಕಿ ವೃಥಾ ತಪ್ಪಿಸಿಕೊಳ್ಳಲು ಹೋರಾಡುವ ಕೇಸರಿಯಂತೆ ಇದ್ದ ನನ್ನ ಗುರುದೇವನ ಶೀಲ. ನನ್ನನ್ನು ಹಡಗಿನ ಹತ್ತಿರ ಕಂಡ ದಿನದಿಂದ ಹಿಡಿದು ಗೋಧೂಳೀ ಸಮಯದ ಪ್ರಶಾಂತವೇಳೆಯಲ್ಲಿ ಪ್ರಪಂಚವೆಂಬ ಹಳ್ಳಿಯಿಂದ ದೇಹವೆಂಬ ವಸನವನ್ನು ಮಡಿಸಿಟ್ಟುಹೋಗುವವರೆಗೆ ಅವರಲ್ಲಿ ಈ ಆಂತರಿಕ ಘರ್ಷಣೆಯನ್ನು ನೋಡುತ್ತಿದ್ದೆ.

ಆದರೆ ಅವರು ಏತಕ್ಕೆ ಹೋರಾಡುತ್ತಿದ್ದರು? ಯಾವುದೋ ತಮ್ಮ ಉದ್ದೇಶಕ್ಕೆ ಅಡ್ಡಿ ತಂದಿದೆ, ಆತಂಕ ಬಂದಿದೆ ಎಂಬ ಭಾವ ಮತ್ತೆಮತ್ತೆ ಏತಕ್ಕೆ ಬರುತ್ತಿತ್ತು? ಸ್ಪಷ್ಟವಾಗಿ ಕಾಣತೊಡಗಿದ ಮಹಾ ಉದ್ದೇಶ ಸಾಧನೆಗೆ ದೇಹದ ದಾರ್ಢ್ಯ ಸಾಲದು ಎಂಬುದೆ? ಇಂಗ್ಲೆಂಡಿಗೆ ಮುಟ್ಟಿದ ಭರತಖಂಡದಲ್ಲಿ ಸ್ವಾಮಿಜಿ ಅವರ ಜೈತ್ರಯಾತ್ರೆಯ ಹರ್ಷಸಮಾಚಾರ ದೊಂದಿಗೆ ಈ ಸುದ್ದಿಯನ್ನು ನನ್ನ ಸ್ನೇಹಿತರೊಬ್ಬರು ಹೇಳಿದರು. ಇವರ ಶಕ್ತಿ ತನ್ನ ಪರಾಕಾಷ್ಠತೆಯನ್ನು ಮುಟ್ಟಿದಾಗಲೇ ಇವರ ಆರೋಗ್ಯವೆಲ್ಲಾ ಹದಗೆಟ್ಟು ಹಿಮಾಲಯದಲ್ಲಿ ಸುದಾರಿಸಿಕೊಳ್ಳುತ್ತಿದ್ದರು. ಆಗ ಒಬ್ಬ ಸ್ನೇಹಿತರಿಗೆ ಬರೆದ ಪತ್ರದಲ್ಲಿ ನಿರಾಶೆಯ ಕ್ರಂದನವನ್ನು ಕೇಳುವೆವು. ಆಗ ನಮ್ಮಲ್ಲಿ ಕೆಲವರು ಇಂಡಿಯಾದೇಶದ ಕೆಲಸವನ್ನು ಇತರರಿಗೆ ವಹಿಸಿ ಹೇಗಾದರೂ ಅವರನ್ನು ಪಾಶ್ಚಾತ್ಯದೇಶಗಳಿಗೆ ಮತ್ತೆ ಕರೆತರಬೇಕೆಂದು ಪ್ರಯತ್ನಿಸತೊಡಗಿದರು. ನಾವು ಹೀಗೆ ಸನ್ನಾಹಮಾಡುತ್ತಿದ್ದಾಗ ಸ್ವಾಮಿಜಿ ಹೊರೆಯನ್ನು ಭರತಖಂಡದಲ್ಲಿ ಹೊರುವವನಿಗೆ ಎಷ್ಟು ಸಾಮರ್ಥ್ಯಬೇಕು, ಈ ಮಹತ್ಕಾರ್ಯ ಎಷ್ಟು ಕಷ್ಟ ಮತ್ತು ಜಟಿಲವಾದುದು ಎಂಬುದನ್ನು ಗಮನಿಸಲಿಲ್ಲ.

ಸ್ವಾಮಿಜಿ ಹೋರಾಟಕ್ಕೆ ನಿಜವಾಗಿ ಏನು ಕಾರಣ? ಅತೀಂದ್ರಿಯ ಗಂಗೆಯನ್ನು ಇಹಲೋಕಕ್ಕೆ ತರಲೆತ್ನಿಸುವ ಭಗೀರಥ ಪ್ರಯತ್ನವೊ? ನಿಜವಾಗಿ ಅವರು ಜನ್ಮತಾಳಿದ್ದೆ ಇಂತಹ ಗುರುಭಾರವನ್ನು ಹೊರುವುದಕ್ಕೆ. ಪೂರ್ವದಿಂದಲೂ ಯಾವ ಪಥದಲ್ಲಿ ಜನ ಹೋಗುತ್ತಿರುವರೊ ಅದನ್ನು ತ್ಯಜಿಸಿ ಅದಕ್ಕೆ ವಿರೋಧದಂತೆ ಕಾಣುವ ಸುಧಾರಿತಮಾರ್ಗವನ್ನು ನಿರ್ಮಿಸುವುದು.

ಒಂದು ಪ್ರಚಂಡಕಾರ್ಯ. ಇದನ್ನು ಮೀರಿದ ಸಾಹಸ ಪ್ರಪಂಚದಲ್ಲಿ ಇಲ್ಲ. ಶ್ರೀರಾಮಕೃಷ್ಣರು ಬಾಲ್ಯದಲ್ಲಿ ನರೇಂದ್ರನನ್ನು (ಸ್ವಾಮಿ ವಿವೇಕಾನಂದರ ಪೂರ್ವಾಶ್ರಮದ ಹೆಸರು) "ಮಗು, ಜೀವನದಲ್ಲಿ ಏನು ನಿನ್ನ ಚರಮಗುರಿ" ಎಂದು ಕೇಳಿದರು. ಆಗ ನರೇಂದ್ರ "ಯಾವಾಗಲೂ ಸಮಾಧಿಮಗ್ನ ನಾಗಿರುವುದು" ಎಂದು ಹೇಳಿದ್ದರು. ಇವರ ಗುರು ನಸುನಗುತ್ತ "ಮಗು, ನೀನು ಇದಕ್ಕಿಂತ ಶ್ರೇಷ್ಠವಾದ ಮತ್ತಾವುದಕ್ಕೊ ಜನ್ಮ ತಾಳಿರುವೆ ಎಂದು ಭಾವಿಸಿದ್ದೆ" ಎಂದು ಅಷ್ಟು ಮಾತ್ರ ಹೇಳಿದರು. ಶಿಷ್ಯನಲ್ಲಿ ಈ ಘಟನೆ ಅವರ ಜೀವನದ ಬೇರೊಂದು ಅಧ್ಯಾಯಕ್ಕೆ ಕಾರಣವಾಯಿತು ಎನ್ನಬಹುದು. ನಿಜವಾಗಿ ಅವರ ನಂತರದ ಜೀವನದಲ್ಲಿ ಅದರಲ್ಲೂ ಕೊನೆಯ ಐದೂವರೆ ವರುಷಗಳು ತಮ್ಮ ಜನರಿಗೆ ತಮ್ಮ ಸರ್ವಸ್ವವನ್ನೂ ತೆತ್ತಕಾಲ. ಆಧ್ಯಾತ್ಮಿಕ ಜೀವನದ ಶ್ರೇಷ್ಠ ಲಕ್ಷಣವೇ ಅನಾಸಕ್ತರಾಗಿ ಕೆಲಸಮಾಡುವುದು. ಭರತಖಂಡದ ಇತಿ ಹಾಸದಲ್ಲಿ ಪ್ರಥಮಬಾರಿ ದೇಶದಲ್ಲಿ ಹೊಸಬಗೆಯ ನೀತಿಯನ್ನು ಜಾರಿಗೆ ತರಲು ಸನ್ಯಾಸಿಗಳೆಲ್ಲಾ ಒಟ್ಟು ಕಲೆತು ಒಂದು ಸಂಸ್ಥೆಮಾಡಿಕೊಂಡರು. ಯೂರೋಪಿನಲ್ಲಿ ಆತ್ಮಾನುಭೂತಿ ಅಪರೂಪ, ಭಾರತೀಯರಷ್ಟು ಚೆನ್ನಾಗಿ ಅದನ್ನು ತಿಳಿದುಕೊಂಡಿಲ್ಲ. ಇಂತಹವರು ಮೇಲಿನ ಸೇವೆಯನ್ನು ಭಕ್ತಿ ಎಂದು ಸಾಧಾರಣವಾಗಿ ನೋಡುವರು. ಆದರೆ ಇಂಡಿಯಾದೇಶದಲ್ಲಿ ಸನ್ಯಾಸಿಗಳೆಲ್ಲಾ ಮಹಾತ್ಮರಾಗಬೇಕೆಂದು ನಿರೀಕ್ಷಿಸುವರು. ಹಿಂದಿನಿಂದ ಬಂದ ಆಧ್ಯಾತ್ಮಿಕ ಅನುಭವಗಳ ಪರಂಪರೆಯನ್ನು ತ್ಯಜಿಸಿ ಸಮಾಜವನ್ನು ಮೇಲಕ್ಕೆ ಎತ್ತುವ ಆದರ್ಶವನ್ನು ಹಿಂದೆ ಸ್ಪಷ್ಟವಾಗಿ ಅರಿತುಕೊಂಡಿರಲಿಲ್ಲ.

ಸ್ವಾಮಿಜಿ ದೃಷ್ಟಿಯಲ್ಲಿ ಇಂತಹ ಸೇವಾ ಕೆಲಸ ಕ್ರಮೇಣ ಭಕ್ತಿಯ ಸ್ಥಾನವನ್ನು ಆಕ್ರಮಿಸುವುದರಲ್ಲಿ ಸಂದೇಹವಿರಲಿಲ್ಲ. ನಿಜವಾದ ಅದ್ವೈತಿಯಗುರಿ ಏಕಮೇವ ಅದ್ವಿತೀಯವನ್ನು ಸೇರುವುದಾಗಿದೆ. ಯಾರು ಇಂತಹ ಸ್ಥಾನವನ್ನು ಸೇರಿರುವರೊ ಅಂತಹವರಿಗೆ ಪೂಜೆ ಸಾಧ್ಯವಾಗುವು ದಿಲ್ಲ. ಏಕೆಂದರೆ ಅಲ್ಲಿ ಪೂಜಿಸುವವನು ಇಲ್ಲ, ಪೂಜಿಸಿಕೊಳ್ಳತಕ್ಕಂತಹುದೂ ಇಲ್ಲ. ಎಲ್ಲಾ ವಿಧವಾದ ಕೆಲಸಗಳ ಹಿಂದೆಯೂ ಸರ್ವವ್ಯಾಪಿಯಾದ ಬ್ರಹ್ಮನೇ ವ್ಯಕ್ತವಾಗುತ್ತಿರುವುದು. ಯಾವುದೋ ಒಂದರಲ್ಲಿ ಅವನು ಹೆಚ್ಚು ವ್ಯಕ್ತವಾಗುತ್ತಿರುವನು ಎಂದು ಹೇಳಲಾಗುವುದಿಲ್ಲ. ಪೂಜಿಸು ವವನು, ಪೂಜೆ, ಪೂಜಿಸಿಕೊಳ್ಳುವುದು ಎಲ್ಲಾ ಒಂದೇ ಆಗುವುದು.

ಆದರೂ ಅದ್ವೈತಿಗಳೂ ಕೂಡ ಪ್ರಾರ್ಥನೆ ಪೂಜೆಗಳನ್ನು ಮಾಡುವವರ ಚಿತ್ತವನ್ನು ಅದು ಶುದ್ಧಿಮಾಡುತ್ತದೆ ಎಂದು ನಂಬುವರು. ದೇವರ ವಿಷಯ ವನ್ನು ಎತ್ತಿದಾಗ, ನಮ್ಮ ಸ್ವಾರ್ಥತೆಯನ್ನು ನಿಗ್ರಹಿಸುವಷ್ಟು ಬೇರೆ ಯಾವುದರಿಂದಲೂ ಸಾಧ್ಯವಿಲ್ಲ ಎಂದರು. ಪೂಜೆ ಒಂದು ಶಾಲೆಯಂತೆ. ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದು ಹೋಗುವವರಿಗೆ ಇದು ಸಹಾಯ ವಾಗುವುದು. ಇದರಂತೆಯೇ ಸ್ವಾಮಿಜಿ ಕರ್ಮವನ್ನು ಎಂದರೆ ಮಾನವ ಸೇವೆಯನ್ನು ನೋಡುತ್ತಿದ್ದರು. ಚಿತ್ತಶುದ್ಧಿ ಎಂದರೆ ಸ್ವಾರ್ಥದಹನ. ಪೂಜೆ ಸ್ವಾರ್ಥಕ್ಕೆ ವಿರೋಧವಾದುದು. ಸೇವೆ ಮತ್ತು ತ್ಯಾಗ ಕೂಡ ಇದರಂತೆಯೇ. ಸ್ವಾಮಿಜಿ ಸೇವೆ ಎಂಬ ಪದವನ್ನು ಪವಿತ್ರಗೊಳಿಸಿದರು; ಆದರಂತೆಯೇ ಮಾನವನು ಕೂಡ ಪವಿತ್ರವಾದನು. ಸಂಘದ ಪ್ರಾರಂಭ ದೆಸೆಯಲ್ಲಿ ಶಿಷ್ಯನೊಬ್ಬನು ಇಂತಹ ಸೇವಾಭಾವದಿಂದ ಕೂಡಿದವನಾಗಿ ಕುಷ್ಠರೋಗಿಯ ವ್ರಣವನ್ನು ರೋಗಿಗೆ ಮೇಲಾಗಲಿ ಎಂದು ತವ್ಮು ಬಾಯಿಂದ ನೆಕ್ಕಿದ ಪ್ರಸಂಗ ನನಗೆ ಗೊತ್ತಿದೆ. ಮೊದಲಿನಿಂದಲೂ ಶ್ರೀರಾಮಕೃಷ್ಣರ ಶಿಷ್ಯರು ರೋಗಿಗಳ ಶುಶ್ರೂಷೆ, ಬಡವರಿಗೆ ಅನ್ನದಾನ ಮಾಡುವುದು ಮುಂತಾದುವುಗಳಲ್ಲಿ ಉದ್ಯುಕ್ತರಾಗಿದ್ದರು. ಆದರೆ ಸ್ವಾಮಿ ವಿವೇಕಾನಂದರು ಪಾಶ್ಚಾತ್ಯದೇಶದಿಂದ ಬಂದಮೇಲೆ ಸೇವಾಕ್ಷೇತ್ರ ಮತ್ತೂ ವಿಶಾಲವಾಗುತ್ತಾ ಬಂದಿತು. ಅದನ್ನು ಇಡೀ ದೇಶದ ದೃಷ್ಟಿಯಿಂದ ನೋಡಲೆತ್ನಿಸಿದರು. ಮಠದಿಂದ ಜನರನ್ನು ಬರಗಾಲದ ಪ್ರದೇಶಗಳಿಗೆ ಪರಿಹಾರಕೊಡುವುದಕ್ಕೆ, ನಗರ ನೈರ್ಮಲ್ಯವನ್ನು ಸರಿಪಡಿಸುವುದಕ್ಕೆ, ತೀರ್ಥಸ್ಥಳಗಳಲ್ಲಿ ರೋಗಿಗಳು ಮತ್ತು ಮರಣೋನ್ಮುಖರಾದವರಿಗೆ ಶುಶ್ರೂಷೆಮಾಡಲು ಕಳುಹಿಸುತ್ತಿದ್ದರು. ಒಬ್ಬರು ಮುರ್ಶಿದಾಬಾದ್ ನಲ್ಲಿ ಅನಾಥಾಲಯ ಮತ್ತು ಇಂಡಸ್ಟ್ರಿಯಲ್ ಶಾಲೆಯನ್ನು ತೆರೆದರು. ಮತ್ತೊಬ್ಬರು ದಕ್ಷಿಣದಲ್ಲಿ ಒಂದು ಶಿಕ್ಷಾ ಕೇಂದ್ರವನ್ನು ತೆರೆದರು. ಇವರನ್ನೆಲ್ಲಾ ಆಧ್ಯಾತ್ಮಿಕ ಸೇನೆಯ ಮುಂದಳದವರು ಎನ್ನುತ್ತಿದ್ದರು ಸ್ವಾಮಿಜಿ. ಅವರ ಯೋಜನೆ ಇದನ್ನೂ ಮೀರಿತ್ತು. ಭಾರತೀಯ ಸ್ತ್ರೀಯರಿಗೆ ವಿದ್ಯೆ ಕೊಡಬೇಕು, ಇತರ ಜನರಲ್ಲಿ ಯಾಂತ್ರಿಕ ಮತ್ತು ವೈಜ್ಞಾನಿಕ ಭಾವನೆಗಳನ್ನು ಕೊಡಬೇಕೆಂಬ ಭಾವನೆಯಿಂದ ಕುದಿ ಯುತ್ತಿತ್ತು ಅವರ ಮನಸ್ಸು. ಅನಾಸಕ್ತಿಯಿಂದ ಕೆಲಸಮಾಡಿದರೆ ಎಂತಹ ಸಹಿಷ್ಣುತಾ ಶಕ್ತಿ ಅವರಲ್ಲಿ ಪ್ರಾಪ್ತವಾಗುವುದು ಎಂಬುದನ್ನು

ನೋಡಿದವರೆ ಹೇಳಬಲ್ಲರು. ಅವರಿಗೆ ಇಪ್ಪತ್ತು ಕೋಟಿ ಪೌಂಡುಗಳು ದೊರತಿದ್ದರೆ ಭರತಖಂಡವನ್ನು ಸ್ವತಂತ್ರವನ್ನಾಗಿ ಮಾಡಬಲ್ಲೆ ಎನ್ನು ತ್ತಿದ್ದರು. ಇದು ದೊರಕದೆ ಇದ್ದುದರಿಂದ ಅವರು ಕೆಲವು ವೇಳೆ ಯೋಚಿ ಸುತ್ತಿದ್ದಂತೆ ಅವರ ಜೀವನ ನಿಷ್ಫಲವಾಯಿತೆ? ಅಥವಾ ಇದನ್ನು ಮೀರಿದ, ಒಬ್ಬ ತನ್ನ ಜೀವಮಾನದಲ್ಲಿ ಗಳಿಸಲು ಅಸಾಧ್ಯವಾದ ಜಯವನ್ನು ಕೊಡಬಲ್ಲಂತಹ ನಮಗೆ ಅರಿಯದ ಭಗವದಿಚ್ಛೆ ಕೆಲಸಮಾಡುತ್ತಿತ್ತೊ ಯಾರಿಗೆ ಗೊತ್ತು.

ಸ್ವಾಮಿಜಿ ದೃಷ್ಟಿ ವಿಶಾಲವಾಗಿದ್ದಂತೆ ಆಳವಾಗಿಯೂ ಇತ್ತು. ಬೆಳವಣಿಗೆ ಯಾವ ರೀತಿ ಇರಬೇಕೆಂಬುದನ್ನು ಅವರು ನಿಷ್ಕರ್ಷಿಸಿದ್ದರು. ಭರತಖಂಡ ಒಂದು ಹೊಸ ವಿಧೇಯತೆಯ ಶಿಸ್ತನ್ನು ಕಲಿಯಬೇಕಾಗಿತ್ತು. ಆದಕಾರಣ ಮಠವನ್ನು ಸಾಧಾರಣ ಆಧ್ಯಾತ್ಮಿಕ ಸಂಸ್ಥೆಯ ಸ್ವಾತಂತ್ರ್ಯಕ್ಕೆ ವಿರೋಧವಾಗಿರುವಂತಹ ಯೋಜನಾಬದ್ಧ ಸಂಸ್ಥೆಯನ್ನಾಗಿ ಮಾಡಿದರು. ದಿನ ನಿತ್ಯದ ಕೆಲಸಕ್ಕೆ ಉಪಯೋಗಿಸುವಂತಹ ನೂರಾರು ಸಾಮಗ್ರಿಗಳನ್ನು ಸಂಗ್ರಹಿಸಿದರು. ಅವರೇ ತುಂಬಾ ನಿರಾಡಂಬರ ಜೀವಿಗಳಾದರೂ ಅವರಿ ಗಾಗಿ ಎರಡು ಮೂರು ಕೋಣೆಯನ್ನು ಕುರ್ಚಿ ಮೇಜುಗಳಿಂದ ಅಣಿಗೊಳಿಸಿ ದರು. ಅಗೆಯುವುದು, ತೋಟದ ಕೆಲಸ, ದೋಣಿನಡೆಸುವುದು, ಅಂಗ ಸಾಧನೆ, ಪ್ರಾಣಿಗಳ ರಕ್ಷಣೆ ಇವುಗಳೆಲ್ಲ ಹೊಸದಾಗಿ ಸೇರಿದ ಬ್ರಹ್ಮಚಾರಿ ಗಳ ಮತ್ತು ಸ್ವಾಮಿಜಿ ಅವರ ಜೀವನದ ಅಂಗವಾಯಿತು. ಬಾವಿ ತೋಡುವುದು, ರೊಟ್ಟಿಮಾಡುವುದು, ಮುಂತಾದ ಪ್ರಯೋಗಗಳಲ್ಲಿ ಅದ್ಭುತ ಉತ್ಸಾಹ ತುಂಬುತ್ತಿದ್ದರು. ಅವರು ಜೀವನದ ಕೊನೆಯಲ್ಲಿ ಮಾಡಿದ ಚರೊಕ್ ಪೂಜಾದಿನದಲ್ಲಿ ಒಂದು ಗರಡಿಯ ಮನೆಯವರು ತಮ್ಮ ಆಟಗಳನ್ನು ತೋರಿ ಬಹುಮಾನ ಪಡೆಯುವುದಕ್ಕೆ ಬೇಲೂರು ಮಠಕ್ಕೆ ಬಂದರು. ಸ್ವಾಮಿಜಿ ಅಂದಿನ ದಿನವನ್ನು ಇನ್ನು ಮೇಲೆ ಅಂಗಸಾಧನಾದಿ ಕ್ರೀಡೆಯಿಂದ ವಿಜೃಂಭಣೆಯಿಂದ ನಡೆಸಬೇಕೆಂದು ಹೇಳಿದರು. ಇದು ವರೆಗೆ ದೇಹದಂಡನೆಯಲ್ಲಿ ವ್ರಯವಾಗುತ್ತಿದ್ದ ಶಕ್ತಿ ಇನ್ನು ಮೇಲೆ ಬಲಿಷ್ಠ ವಾದ ಮಾಂಸ ಖಂಡಗಳನ್ನು ವೃದ್ಧಿಪಡಿಸಲು ಉಪಯೋಗವಾಗಬೇಕು ಎಂದಿತ್ತು ಅವರ ಇಚ್ಛೆ.

ಪಾಶ್ಚಾತ್ಯರಿಗೆ ಸ್ವಾಮಿಜಿ ಜೀವನದಲ್ಲಿ ಇದು ತುಂಬಾ ಮೆಚ್ಚಿಗೆಗೆ ಕಾರಣವಾಗಿರಬೇಕು. ಬಹಳ ಹಿಂದೆಯೇ ರಾಮಕೃಷ್ಣ ಸಂಘದ ಉದ್ದೇಶ,

ಪೌರ ಮತ್ತು ಪಾಶ್ಚಾತ್ಯ ಶ್ರೇಷ್ಠ ಆರ್ದಶಗಳನ್ನು ಒಬ್ಬರು ಮತ್ತೊಬ್ಬರಿಗೆ ಕೊಟ್ಟು ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬುದನ್ನು ವಿವರಿಸಿದ್ದರು. ಇಂತಹ ಒಂದು ಸಾಹಸದಲ್ಲಿ ಭಾಗಿಯಾಗಲು ತಮಗಿದ್ದ ಸಾಮರ್ಥ್ಯವನ್ನು ಅವರು ನಿಸ್ಸಂದೇಹವಾಗಿ ತಮಗಿರುವ ಪಾಂಡಿತ್ಯದ ಮೂಲಕ ಬೋಧಿಸಿದರು. ಆದರೂ ತಾವೆ ದಂಗೆಯೆದ್ದು ಇದಕ್ಕಾಗಿ ವ್ಯಥೆಪಡಬೇಕಾಯಿತು. ಭಾರತೀಯರ ಆಧ್ಯಾತ್ಮಿಕ ಆದರ್ಶವೆ, ಅಚಲನಾದ, ಅಸ್ಪರ್ಶನಾದ, ಶುದ್ಧನಾದ, ಮುಕ್ತನಾದ, ನಿತ್ಯಸಾಕ್ಷಿಯಾದ ಆ ಪರಮಾತ್ಮನನ್ನು ಜೀವನದಲ್ಲಿ ನೋಡುವುದು. ಇದು ಅಷ್ಟು ಸ್ಪಷ್ಟವಾಗಿದೆ, ಭಾರತೀಯನ ಆಳಕ್ಕೆ ಹೋಗಿದೆ. ಇದನ್ನು ಬೇರೊಂದು ದಾರಿಗೆ ತಿರುಗಿಸಬೇಕಾದರೆ ಬಹಳ ಕಷ್ಟ. ಒಂದು ಹೊಸ ಭಾವನೆಯನ್ನು ಸೃಷ್ಟಿಸಲು ಯತ್ನಿಸುವ ಶಿಲ್ಪಿಯ ನೋವನ್ನು ಯಾರಾದರೂ ಅನುಭವಿಸಿರುವರೇನು? ಅವನ ಕಾರ್ಯಕ್ಕೆ ಬೇಕಾದ ಅತಿಸೂಕ್ಷ್ಮವಾದ ಗ್ರಹಣ ಮತ್ತು ಭಾವನಾಶಕ್ತಿ, ಉಳಿಯಂತೆ ಅವನ ಕೈಯಲ್ಲಿರುವ ಧಾರ್ಮಿಕ ಜೀವನ, ಇವುಗಳನ್ನು ಕೆಲವು ವೇಳೆ ಕೆಲಸಮಾಡದೆ ಸುಮ್ಮನಿದ್ದಾಗ ತನ್ನ ಮೇಲೆಯೇ ಪ್ರಯೋಗಿಸಿಕೊಂಡಂತೆ ಇರುವುದು. ಆಗಲೆ ಸಂದೇಹ, ಜವಾಬ್ದಾರಿಯ ಹೊರೆಯ ಭಾರದ ಅಂಜಿಕೆ ಇವು ಮೂಡುವುವು. ಇತರರ ಆದರ್ಶವನ್ನು ಅನುಸರಿಸುತ್ತಿರುವವರಲ್ಲಿ ದೊರಕುವ, ಬಹಳ ಶ್ರೇಷ್ಠ ವ್ಯಕ್ತಿಗಳೆಂದು ನಾವು ಪರಿಗಣಿಸುವವರನ್ನು, ಸ್ವಾಮಿಜಿಯವರಂತಹ ಪ್ರಚಂಡ ವ್ಯಕ್ತಿಗಳೊಂದಿಗೆ ಹೋಲಿಸಿ ನೋಡಿದಾಗ ಪ್ರಥಮ ವರ್ಗದವರು ಒಂದು ಅಪಾಯದೂರವಾದ ಸುರಕ್ಷಿತ ಸ್ಥಾನದಲ್ಲಿರುವಂತೆ ತೋರುವರು. ಇದನ್ನು ನಾನು ಅನೇಕ ವೇಳೆ ಅನುಭವದಲ್ಲಿ ನೋಡಿರುವೆನು. ಇವರ ಜೀವನದಲ್ಲಿ ಸ್ವಾಮಿಜಿ ಭಾವ ಸ್ರೋತಗಳು ಮಿಲನವಾಗಿದ್ದವು. ಒಂದು ಅವರೇ ಸ್ವೀಕರಿಸಿದ್ದು ಮತ್ತೊಂದು ವಿಧಿಯಿಲ್ಲದೆ ಅನುಭವಿಸಬೇಕಾದದ್ದು. ಇದು ಸಾಧಾರಣವಾದ ಎರಡು ಭಾವನೆ, ಎರಡು ಆದರ್ಶಗಳ ಲೀಲೆಯಂತೆ ಕಾಣುವುದು. ಒಂದನ್ನು ನಂಬಿದವರಿಗೆ ಇನ್ನೊಂದು ಆದರ್ಶ ಒಂದು ಮಹಾಪರಾಧವೇನೊ ಎಂದು ಕಾಣುವುದು.

ಅವರೊಡನೆ ಬಹಳ ಕಾಲವಿದ್ದವರೊಡನೆ ಇವರು ಕೆಲವುವೇಳೆ ಅಜಾಗರೂಕತೆಯಿಂದ ಆಡಿದ ಮಾತಿನಿಂದ ಮನದಲ್ಲಿದ್ದ ಘರ್ಷಣೆ ವ್ಯಕ್ತವಾಗುವುದು. ಒಂದು ದಿನ ಇವರು ಖೇತ್ರಿ ಮಹಾರಾಜರೊಂದಿಗೆ

ಕುದುರೆಯ ಮೇಲೆ ಹೋಗುತ್ತಿದ್ದರು. ಆಗ ರಾಜರ ತೋಳಿನಿಂದ ರಕ್ತ ಧಾರಾಕಾರವಾಗಿ ಸುರಿಯುತ್ತಿತ್ತು. ಇದೊಂದು ಮುಳ್ಳಿನ ಕೊಂಬೆ ತಗಲಿ ಆಗಿತ್ತು. ರಕ್ತಸುರಿಯುತ್ತಿದ್ದರೂ ಹಿಂದೆ ಬರುವ ಸ್ವಾಮಿಜಿ ಅವರಿಗೆ ತೊಂದರೆಯಾಗದಂತೆ ಆ ಕೊಂಬೆಯನ್ನು ಕೈಯಲ್ಲಿ ಹಿಡಿದು ಕೊಂಡಿದ್ದರು. ಸ್ವಾಮಿಜಿ ಅವರು, ಏತಕ್ಕೆ ಹೀಗೆ ಮಾಡಿದೆ ಎಂದು ಕೇಳಿ ದಾಗ ರಾಜ ಸುಮ್ಮನೆ ನಕ್ಕನು. "ನಾವು ಧರ್ಮವನ್ನು ರಕ್ಷಿಸುವವರಲ್ಲವೆ ಸ್ವಾಮಿಜಿ?" ಎಂದ ರಾಜ. ಈ ಘಟನೆಯನ್ನು ಸ್ವಾಮಿಜಿ ವಿವರಿಸು ತ್ತಿದಾಗ "ಸನ್ಯಾಸಿಗೆ ಇಷ್ಟೊಂದು ಗೌರವವನ್ನು ತೋರಬಾರದು ಎಂದು ಹೇಳುವುದರಲ್ಲಿದ್ದೆ. ಆದರೆ ತಕ್ಷಣ ಬಹುಶಃ ಆತನ ದೃಷ್ಟಿಯಲ್ಲಿ ಅದು ಸರಿ ಇರಬಹುದು ಎಂದು ಭಾವಿಸಿದೆ. ಯಾರಿಗೆ ಗೊತ್ತು? ನಾನೂ ಕೂಡ ತಾತ್ಕಾಲಿಕವಾಗಿ ಕೋರೈಸುತ್ತಿರುವ ನಿಮ್ಮ ನಾಗರಿಕತೆಗೆ ಮುಗ್ಧನಾಗಿ ಹೋಗಿರಬಹುದು" ಎಂದರು. "ಪ್ರಖ್ಯಾತನಾಗುವುದಕ್ಕಿಂತ ಮುಂಚೆ ಊರು ಊರು ಅಲೆಯುತ್ತ, ಹೆಸರುಗಳನ್ನು ಬದಲಾಯಿಸಿ ಕೊಳ್ಳುತ್ತಾ, ಜ್ಞಾನವನ್ನು ಪ್ರಚಾರ ಮಾಡುತ್ತಿದ್ದಾಗ ಹಲವು ಜವಾಬ್ದಾರಿಯನ್ನು ಹೊತ್ತ ಬೇಲೂರು ಮಠದ ಅಧ್ಯಕ್ಷನಿಗಿಂತ ಮೇಲಾಗಿದ್ದೆ. ನಾನೀಗ ಬಲೆಯಲ್ಲಿ ಸಿಕ್ಕಿ ಬಿದ್ದಿರುವೆನು" ಎಂದರು ಒಮ್ಮೆ ಒಬ್ಬ ಶಿಷ್ಯರಿಗೆ. ಒಬ್ಬ ಅಮೆರಿಕಾದೇಶದ ಹೆಂಗಸು ತನ್ನ ಗಂಡ ಇವರ ಉಪನ್ಯಾಸವನ್ನು ಕೇಳು ವುದಕ್ಕೆ ದುಡ್ಡು ಕೊಟ್ಟು ಹೋಗುವುದನ್ನು ನೋಡಿದಾಗ, ಸ್ವಾಮಿ ವಿವೇಕಾ ನಂದರ ಹೆಸರನ್ನು ನನಗೆ ಸಹಿಸುವುದಕ್ಕೆ ಆಗುತ್ತಿರಲಿಲ್ಲ ಎಂದ ಕಥೆ ನನಗೆ ಜ್ಞಾಪಕದಲ್ಲಿದೆ. ಆಕೆ, ಗಂಡ ಉಪನ್ಯಾಸ ಕೇಳಿ ಬಂದ ಮೇಲೆ ಏನೊ ಅವರ ಮನಸ್ಸಿನ ಮೇಲೆ ಪರಿಣಾಮವಾಗಿತ್ತು. ಪುನಃ ಹಿಂದೆ ಇದ್ದಂತೆ ಆಗಲು ಅವರಿಗೆ ಸಾಧ್ಯನೇ ಆಗಲಿಲ್ಲ ಎಂದಳು. ಒಂದುದಿನ ಅವರು ಚಿತ್ತೂರಿನ ರಾಣಿಯಾದ ಮೀರಾಬಾಯಿಯ ವಿಷಯವನ್ನು ಮಾತ ನಾಡುತ್ತಿದ್ದರು. ಆಕೆ ರಾಜನ ಅಂತಃಪುರದಲ್ಲಿ ಇರಬಯಿಸಿದರೆ ಅವಳು ಬೇಕಾದುದನ್ನೆಲ್ಲಾ ಕೊಡುವೆನು ಎಂದ ಆಕೆಯ ಪತಿ. ಆದರೆ ಅವಳನ್ನು ಬಂಧಿಸಲು ಆಗಲಿಲ್ಲ. ಅವಳೇಕೆ ಅದಕ್ಕೆ ಒಪ್ಪಬಾರದಾಗಿತ್ತು ಎಂದು ಯಾರೊ ಕೇಳಿದರು. ಆಗ ಸ್ವಾಮಿಜಿ, ಅವಳೇಕೆ ಅದಕ್ಕೆ ಒಪ್ಪಬೇಕು? ಈ ಸಂಸಾರದ ಕೆಸರಿನಲ್ಲಿ ಬೀಳಬೇಕೆ ಅವಳು ಎಂದರು. ಕೇಳುವವರಿಗೆ ಸಹಿಸಲಸದಳವಾದ ಸಂಸಾರದ ಬಂಧನ, ಅದರಿಂದ ಪಾರಾಗಬೇಕೆಂಬ

ಹಂಬಲ, ಅವರ ಜೀವನದಲ್ಲಿ ಕುದಿಯುತ್ತಿದ್ದುದು ತಕ್ಷಣ ಅರಿವಾಯಿತು.

ಧಾರ್ಮಿಕ ಆಚಾರ್ಯನಲ್ಲಿದ್ದ ಸ್ನಿಗ್ಧ ಗಾಂಭೀರ್ಯ ಶಿಶುಸಹಜ ಪ್ರಶಾಂತಿಯ ಹಿಂದೆ ಮಾನವ ಸಹಜವಾದ ಬೇರೊಂದು ಗುಣವನ್ನು ಸ್ವಾಮಿಜಿ ಭರತ ಖಂಡದಲ್ಲಿದ್ದಾಗ ಅವರಲ್ಲಿ ನಾನು ಕಂಡೆ. ಇಲ್ಲಿ ಅವರು ಮಾಡಿದ ಕಾರ್ಯಗಳು ನಮ್ಮ ಕಾರ್ಯಗಳಿಗಿಂತ ಹೆಚ್ಚು ಕಾಲ ಶಾಶ್ವತನಾಗಿದ್ದರೂ ಹಲವು ಕಾಲ ಅವರು ಸಂಶಯ ಅಜ್ಞಾನದಲ್ಲಿ ತೊಳಲಾಡಬೇಕಾಗಿತ್ತು. ಆಗೊಮ್ಮೆ ಈಗೊಮ್ಮೆ ಅವರಿಗೆ ಬೆಳಕು ಕಾಣುತ್ತಿತ್ತು. ಅನೇಕವೇಳೆ ಮಾಡಿದ ಕೆಲಸ ವ್ಯರ್ಥವಾಗುವುದು ಎಂಬ ಭಾವನೆಯಿಂದಲೋ, ವ್ಯಕ್ತಿ ಮತ್ತು ವಸ್ತುಗಳು ಸರಿಯಾಗಿ ಸಿಕ್ಕಲಿಲ್ಲ ಎಂಬ ದೃಷ್ಟಿಯಿಂದಲೊ ವರುಷಗಳು ಕಳೆದಂತೆ ಮಾಡುವ ಪ್ರಯತ್ನಗಳು ಕಡಿಮೆಯಾದವು. ನಮಗೆ ಅರಿಯದುದನ್ನು ಹೀಗೆಯೇ ಎಂದು ನಿರ್ಧರಿಸುವ ಯತ್ನಗಳು ಮಾಯವಾಗುತ್ತಾ ಬಂದವು. ಒಂದು ದಿನ ನನಗೆ, "ಇವತ್ತೆಲ್ಲ ನಿನಗೇನು ಗೊತ್ತಿವೆ. ಜಗನ್ಮಾತೆ ಎಲ್ಲವನ್ನೂ ಮಾಡುವಳು. ನಾವೇ ಅರಿಯದೆ ಎಡವಿ ಬೀಳುತ್ತಿರುವುದು" ಎಂದರು.

ಮಹಾಗುರುಗಳ ವಿಷಯವನ್ನು ಹೇಳುವಾಗ ಬಹುಪಾಲು ಜನ ಬಹುಶಃ ಇದನ್ನು ವಿವರಿಸದಿರಬಹುದು. ಆದರೂ ಶ್ರೀರಾಮಕೃಷ್ಣರಲ್ಲಿ ಒಂದು ದಿನ ಅವರು ದೇವರ ಮೇಲೆ ಸಿಟ್ಟಾದಾಗ ಇವನ್ನು ನೋಡುತ್ತೇವೆ: "ತಾಯಿ, ನೀನು ನನ್ನನ್ನು ಎಂತಹ ಸ್ಥಿತಿಗೆ ತಂದೆ. ನನ್ನ ಮನಸ್ಸೆಲ್ಲಾ ಈ ಮಕ್ಕಳಮೇಲೆ ನೆಲೆಸುವಂತೆ ಮಾಡಿದೆ!" ಎಂದರು. ಧರ್ಮಪದದ ಹನ್ನೊಂದನೆಯ ಅಧ್ಯಾಯದಲ್ಲಿ ಇಪ್ಪತ್ತುನಾಲ್ಕು ಶತಮಾನಗಳಾದ ಮೇಲೆಯೂ ಇಂತಹ ಭಾವನೆಯ ಪರಿಣಾಮುವನ್ನೇ ಆ ಮಹಾ ಗುರುವಾದ ಬುದ್ಧನಲ್ಲಿಯೂ ನೋಡುತ್ತೇವೆ: "ಈ ದೇಹಧಾರಿಯನ್ನು ಹುಡುಕಿ ಅದು ಕಾಣದೆ ಹಲವು ಜನ್ಮಗಳ ಮೂಲಕ ಒಂದಾಯಿತು. ಪುನಃಪುನಃ ಜನ್ಮವನ್ನು ಧರಿಸುವುದು ಬಹಳ ದುಃಖಕರ. ಈಗ ದೇಹಧಾರಿಯೇ ನಿನ್ನನ್ನು ಕಂಡಾಯಿತು. ನೀನು ಪುನಃ ಮತ್ತೊಮ್ಮೆ ದೇಹವನ್ನು ಸೃಷ್ಟಿಸಲಾರೆ. ನಿನ್ನ ಭಾವಣಿ ಬಿದ್ದಿದೆ. ಕಂಬ ಉರುಳಿದೆ. ಮನಸ್ಸು ಅನಂತವನ್ನು ಸಮಿಾಪಿಸಿ ತನ್ನಲ್ಲಿದ್ದ ಆಸೆಯನ್ನೆಲ್ಲಾ ಕಳೆದುಕೊಂಡಿದೆ."

ನನ್ನ ಗುರುದೇವನ ಹೃದಯದಾಳದಲ್ಲಿ ಮತ್ತೊಂದು ಭಾವನೆ ಇತ್ತು. ಅದನ್ನು ಹೇಗೆ ಸರಿಹೊಂದಿಸಿಕೊಳ್ಳುವುದು ಎಂಬುದು ಅವರಿಗೇ

ಗೊತ್ತಿರಲಿಲ್ಲ. ಇದೇ ಅವರಲ್ಲಿದ್ದ ದೇಶಪ್ರೀತಿ, ಅಲ್ಲಿಯ ಜನರ ದುರ್ದಶೆಗೆ ಪಡುತ್ತಿದ್ದ ವ್ಯಥೆ. ಆ ದಿನಗಳಲ್ಲಿ ನಾನು ಅವರನ್ನು ಪ್ರತಿದಿನವೂ ನೋಡು ತ್ತಿದ್ದೆ. ಭರತಖಂಡಕ್ಕೆ ಸಂಬಂಧಿಸಿದ ಭಾವನೆ ಅವರು ಸೆಳೆದುಕೊಳ್ಳು ತ್ತಿದ್ದ ಉಸಿರಿನಂತೆ ಇತ್ತು. ನಿಜ, ಅವರು ಕೆಲಸಮಾಡುತ್ತಿದ್ದುದು ಮೂಲ ದಲ್ಲಿ. ಅವರು "ಜನಾಂಗ", "ಜನಾಂಗ ನಿರ್ಮಾಣ" ಎಂಬ ಪದ ವನ್ನು ಆಡುತ್ತಿರಲಿಲ್ಲ. ಪುರುಷಸಿಂಹರನ್ನು ಮಾಡುವುದೇ ತಮ್ಮ ಕರ್ತವ್ಯ ವೆಂದು ಭಾವಿಸಿದ್ದರು.

ಸ್ವಾಮಿಜಿ ಅವರು ಹುಟ್ಟು ಪ್ರೇಮಿಗಳು. ಅವರ ಪ್ರೇಮದ ಹೃದ ಯೇಶ್ವರಿಯೇ ಭರತಖಂಡ. ಅವರ ಹೃದಯ ಅತಿಸೂಕ್ಷ್ಮವಾದ ತಂತುವಿ ನಿಂದ ನೇತುಹಾಕಿರುವ ಒಂದು ಗಂಟೆಯಂತೆ ಇತ್ತು. ಹೇಗೆ ಅದನ್ನು ಸ್ಪರ್ಶಮಾಡುವ ಯಾವ ಅತಿಸೂಕ್ಷ್ಮವಾದ ಶಬ್ದಸ್ಪಂದನವೂ ಅದರ ಮೇಲೆ ತನ್ನ ಪ್ರಭಾವವನ್ನು ಬೀರಿ ಮರುಧ್ವನಿಯ ಕಿರಿ ಅಲೆಯನ್ನು ಎಬ್ಬಿಸಬಲ್ಲದೊ ಹಾಗೆಯೇ ಭರತಖಂಡಕ್ಕೆ ಸಂಬಂಧಪಟ್ಟ ಪ್ರಶ್ನೆಗೆಲ್ಲಾ ಅವರ ಹೃದಯ ಪ್ರತಿಕ್ರಿಯೆಯಿಂದ ಅನುರಣಿತವಾಗುತ್ತಿತ್ತು. ಭರತಖಂಡದಲ್ಲಿ ಯಾರ ಸಂಕಟವಾದರೂ ಆಗಲೀ ಅವರ ಹೃದಯದಲ್ಲಿ ಅದು ಮರುಧ್ವನಿ ಗೈಯುತ್ತಿತ್ತು. ಇವರು ಅರಿಯಲಾರದ, ಅನುಭವಿಸಲಾರದ, ಯಾವ ಅಂಜಿ ಕೆಯೂ ಇರಲಿಲ್ಲ, ದೌರ್ಬಲ್ಯವಿರಲಿಲ್ಲ, ಅನುಮಾನವಿರಲಿಲ್ಲ. ತಾಯ್ನಾಡಿನ ಲೋಪದೋಷಗಳನ್ನು ದಯಾದಾಕ್ಷಿಣ್ಯವಿಲ್ಲದೆ ಖಂಡಿಸುತ್ತಿದ್ದರು. ಇಲ್ಲಿರುವ ವ್ಯಾವಹಾರಿಕಜ್ಞಾನದ ಅಭಾವವನ್ನು ಸಹಿಸುತ್ತಿರಲಿಲ್ಲ. ಆದರೆ ಈ ದೌರ್ಬಲ್ಯಗಳೆಲ್ಲ ಯಾರದೊ ಹೊರಗಿನ ವ್ಯಕ್ತಿಯದು ಎಂದು ಭಾವಿಸ ಲಿಲ್ಲ. ಇವೆಲ್ಲ ತಮ್ಮ ದೌರ್ಬಲ್ಯವೆಂತಲೇ ಪರಿಗಣಿಸುತ್ತಿದ್ದರು. ಆದರೆ ಭರತಖಂಡದ ಭವಿಷ್ಯ ಎಂದಿಗಿಂತಲೂ ಮಹಿಮಾನ್ವಿತವಾಗುವುದು ಎಂಬ ಹಿರಿಯಾಸೆ ಇವರಲ್ಲಿದ್ದಂತೆ ಮತ್ತಾರಲ್ಲಿಯೂ ಇರಲಿಲ್ಲ. ಅವರ ದೃಷ್ಟಿಯಲ್ಲಿ ಭರತಖಂಡ ಆಂಗ್ಲೇಯರಿಗೆ ಸಂಸ್ಕೃತಿ ಕೊಟ್ಟಿತು. ಅಕ್ಬರನ ಭರತಖಂಡವನ್ನು ಎಲಿಜಬತಳ ಇಂಗ್ಲೆಂಡಿನೊಂದಿಗೆ ಹೋಲಿಸಿ ನೋಡಿ ಎನ್ನುತ್ತಿದ್ದರು. ವಿಕ್ಟೋರಿಯಾ ಕಾಲದ ಇಂಗ್ಲೆಂಡಿನ ಹಿಂದೆ ಭರತ ಖಂಡದ ಐಶ್ವರ್ಯ ಇಲ್ಲದೆ ಇದ್ದರೆ ಏನಾಗುತ್ತಿತ್ತು ಊಹಿಸಿ. ಇಂಗ್ಲೆಂಡಿನ ನಾಗರಿಕತೆ ಎಲ್ಲಿ ಇರುತ್ತಿತ್ತು? ಇಂಗ್ಲೆಂಡಿಗೆ ಅನುಭವ ಎಲ್ಲಿ ಇರುತ್ತಿತ್ತು? ಭರತಖಂಡದ ಧರ್ಮ ಚರಿತ್ರೆ, ಭೂಗೋಳ, ಮಾನವಕುಲಶಾಸ್ತ್ರ, ಎಲ್ಲವೂ

ಬತ್ತದ ಒಂದು ಮಹಾ ಪ್ರವಾಹದಂತೆ ಅವರ ಬಾಯಿಂದ ಬೀಳುತ್ತಿತ್ತು. ಇದನ್ನು ಕೇಳಿದವರಿಗೆ ಮೇಲ್ಪಟ್ಟ ವಿಷಯಗಳನ್ನು ವಿವರವಾಗಿ ಆಗಲಿ, ಒಟ್ಟನಲ್ಲಿ ಆಗಲಿ ಸಂತೋಷದಿಂದ ವಿವರಿಸುತ್ತಿದಂತೆ ಅಲ್ಲಿ ಕೇಳುವವರಿಗೆ ಭಾಸವಾಗುತ್ತಿತ್ತು. ಕೆಲವುವೇಳೆ ಹಿಂದೆ ಕೇಳಿದ ವಿಷಯಗಳನ್ನೇ ಪುನಃ ಕೇಳಲು ಮನಸ್ಸಾಗದ ಸಮಯವಿರುತ್ತಿತ್ತು. ಆದರೂ ಸುಮ್ಮನೇ ಕೇಳು ತ್ತಿದ್ದಾಗ ಹಿಂದೂ ಸಮಾಜದಲ್ಲಿ ಸ್ತ್ರೀಯರ ಆಸ್ತಿಗೆ ಸಂಬಂಧಪಟ್ಟ ಕಾನೂನು, ಬೇರೆಬೇರೆ ಕಡೆ ಇರುವ ವರ್ಣಪದ್ಧತಿ, ಯಾವುದಾದರೊಂದು ಸೂಕ್ಷ್ಮ ತಾರ್ತಿಕ ವಿಷಯವನ್ನೊ ಆಚಾರವನ್ನೊ ತೆಗೆದುಕೊಂಡು ಹಲವು ಗಂಟೆಗಳು ಅವಿಶ್ರಾಂತರಾಗಿ ಮಾತನಾಡುತ್ತಿದ್ದರು.

ಅವರ ಮಾತಿನಲ್ಲಿ ರಜಪೂತರ ಶೌರ್ಯ, ಸಿಕ್ಕರ ಶ್ರದ್ಧೆ, ಮಹಾರಾಷ್ಟ್ರರ ಧೈರ್ಯ, ಸಾಧುಸಂತರ ಭಕ್ತಿ, ಪ್ರಖ್ಯಾತನಾರಿಯರ ಪಾತಿವ್ರತ್ಯ ಮತ್ತು ಸ್ಥಿರತೆ ಪುನಃ ಜೀವಂತವಾಗಿ ನಮ್ಮ ಮುಂದೆ ಚಲಿಸುತ್ತಿದ್ದುವು. ಅವರು ಮಹಮ್ಮದೀಯರನ್ನು ಕೂಡ ಮರೆಯಲು ಅವಕಾಶಕೊಡಲಿಲ್ಲ. ಹುಮಾ ಯೂನ್, ಷೇರ್‌ಷಾ, ಅಕ್ಬರ್, ಶಾಜಹಾನ್, ಇನ್ನೂ ನೂರಾರು ಹೆಸರು ಗಳು ಪ್ರಖ್ಯಾತನಾಮರ ಶ್ರೇಣಿಯಲ್ಲಿ ಯಾವುದೊ ಒಂದು ಸ್ಥಳವನ್ನು ಕಾಲ ವನ್ನು ಆಕ್ರಮಿಸಿದ್ದುವು. ಕೆಲವು ವೇಳೆ ಅದು ಈಗಲೂ ಡೆಲ್ಲಿಯ ಬೀದಿ ಗಳಲ್ಲಿ ಹಾಡುತ್ತಿದ್ದ ಅಕ್ಬರನ ಪಟ್ಟಾಭಿಷೇಕದ ಹಾಡಾಗಿರಬಹುದು. ತಾನ್‌ಸೇನ್ ಹಿಂದೆ ಯಾವ ರಾಗದಲ್ಲಿ ಹಾಡಿದ್ದನೋ ಅದೇ ರಾಗ ಅದೇ ತಾಳದಲ್ಲಿ ಹಾಡುತ್ತಿದ್ದರು. ಮೊಗಲರ ವಿಧವೆಯರು ಪುನಃ ವಿವಾಹ ಆಗುತ್ತಿರಲಿಲ್ಲ. ಬದುಕಿರುವತನಕ ಪ್ರಾರ್ಥನೆ ಮತ್ತು ಅಧ್ಯಯನದಲ್ಲಿ ಕಳೆಯುತ್ತಿದ್ದರು. ಕೆಲವು ವೇಳೆ ಭರತಖಂಡದ ರಾಜರು ಮುಸ್ಲಿಂ ತಂದೆ ಹಿಂದೂ ತಾಯಿಗೆ ಹುಟ್ಟುವಂತೆ ಮಾಡಿದ ಭಾರತ ಜನಾಂಗದ ಪ್ರತಿಭೆ ಯನ್ನು ಕುರಿತು ಮಾತನಾಡುತ್ತಿದ್ದರು. ಕೆಲವು ವೇಳೆ ಆಕರ್ಷಣವಾದ ಆದರೆ ಬೇಗಲೇ ಪರ್ಯವಸಾನವಾದ ಸಿರಾಜುದ್ದೌಲನ ಆಳ್ವಿಕೆಯನ್ನು ಕುರಿತು ಹೇಳುವಾಗ ರೋಮಾಂಚನಕಾರಿಯಾದ ಉತ್ಸಾಹದಿಂದ ಕೇಳುವಂತೆ ಮಾಡುತ್ತಿದ್ದರು. ಮೋಸದಿಂದ ಯಾರೋ ತಾವು ಸೋತೆವೆಂಬ ಸುಳ್ಳು ಸುದ್ದಿಯನ್ನು ಸಿರಾಜುದ್ದೌಲನಿಗೆ ತಿಳಿಸಿದಾಗ "ಹಾಗಾದರೆ ನಾವು ಸೋತೆವೆ ?" ಎಂದು ಹಾಗೆಯೇ ಕುದುರೆಯ ಸಮೇತ ಗಂಗಾನದಿಗೆ ಧುಮುಕುವನು. ಕೊನೆಗೆ ಅವನ ಪತಿವ್ರತಳಾದ ಸತಿ ಬಿಳೀ ಸೀರೆಯನ್ನುಟ್ಟು

ತಮ್ಮ ನೆಂಟರೊಡನೆ ವಾಸಿಸುತ್ತಾ ಕಾಲವಾದ ತನ್ನ ಪತಿಯ ಕಳೇಬರದ ಮೇಲೆ ಕಟ್ಟಿದ ಸಮಾಧಿ ಮಂದಿರದಲ್ಲಿ ಉರಿಯುತ್ತಿದ್ದ ದೀವಿಗೆಯನ್ನು ನೋಡಿಕೊಳ್ಳುತ್ತಾ ತನ್ನ ಜೀವನ ಕಳೆಯುತ್ತಿದ್ದುದನ್ನು ಹೇಳುವರು.

ಕೆಲವು ವೇಳೆ ಮಾತು ಬರೀ ಹುಡುಗಾಟಿಕೆಯದಾಗಿತ್ತು. ಯಾವುದೋ ಒಂದು ಸಾಧಾರಣ ಘಟನೆಯಿಂದ ಶುರುವಾಗುತ್ತಿತ್ತು. ಕೆಲವು ವೇಳೆ ದೇವರ ನೈವೇದ್ಯವಾಗಿಯೊ, ಕೇಸರಿ ಅಥವಾ ಕಸ್ತೂರಿ ಯಂತಹ ಅಪೂರ್ವವಸ್ತುವನ್ನು ಕುರಿತೊ ಅಥವಾ ಕೆಲವುವೇಳೆ ಇದ ಕ್ಕಿಂತಲೂ ಸಾಧಾರಣ ಘಟನೆಯಿಂದಲೋ ಪ್ರಾರಂಭವಾಗುತ್ತಿತ್ತು. ಪಾಶ್ಚಾತ್ಯದೇಶದಲ್ಲಿದ್ದಾಗ ಅವರು ಹೇಗೆ ಇಂಡಿಯಾದೇಶದ ಯಾವು ದಾದರೂ ಗ್ರಾಮದ ಹೊರಗೆ ನಿಂತುಕೊಂಡು ಸಂಜೆ ನಿದ್ದೆಗಣ್ಣಿನಿಂದ ಮಕ್ಕಳ ಆಡುತ್ತಿರುವ ಗದ್ದಲ, ಸಂಜೆ ದೇವಾಲಯದಲ್ಲಿ ಹೊಡೆಯುತ್ತಿರುವ ಗಂಟೆ, ಮನೆಗೆ ಹಿಂತಿರುಗುತ್ತಿರುವ ರೈತರ ಮಾತುಕತೆ, ಸಂಜೆ ಇನ್ನೇನು ಕಳೆದು ರಾತ್ರಿಯಾಗಬೇಕು ಅಂತಹ ಸಮಯದಲ್ಲಿ ಮುಸುಕುಹಾಕಿ ಕೊಂಡು ಮಾತನಾಡುತ್ತಿರುವ ಸ್ತ್ರೀಯರು ಇವುಗಳನ್ನು ನೋಡಬೇಕೆಂದು ಕಾತರಪಡುತ್ತಿದ್ದರು. ಬಾಲ್ಯದಲ್ಲಿ ಬಂಗಾಳದೇಶದಲ್ಲಿ ಕೇಳಿದ ಜುಲೈ ತಿಂಗಳಲ್ಲಿ ಬೀಳುವ ಮಳೆಯ ಧ್ವನಿಯನ್ನು ಕೇಳಲು ಎಷ್ಟು ಆಶಿಸುತ್ತಿದ್ದರು. ಮಳೆ, ಸಮುದ್ರ, ಪ್ರಪಾತಗಳಲ್ಲಿ ಬೀಳುವ ನೀರಿನ ಧ್ವನಿ ಎಷ್ಟು ಮೋಹಕ ವಾದುದು! ತಾವು ಸ್ಮರಿಸಿಕೊಳ್ಳುವಂತಹ ಚಿತ್ತಾಕರ್ಷಕ ಚಿತ್ರ, ಬಂಡೆ ಯಿಂದ ಬಂಡೆಗೆ ಒಂದು ಗಿರಿ ಝರಿಯನ್ನು ದಾಟುತ್ತಿರುವಾಗ ತಾಯೊಬ್ಬಳು ತಾನು ಎತ್ತಿಕೊಂಡಿರುವ ಮಗುವಿನೊಂದಿಗೆ ಆಡುತ್ತ ಅದರ ಮೈ ತಡವು ತ್ತಿರುವುದು. ಅವರು ಇಚ್ಛಿಸುತ್ತಿದ್ದ ಆದರ್ಶ ಮರಣವೆ ಹಿಮಾಲಯದ ಅರಣ್ಯದಲ್ಲಿರುವ ಬಂಡೆಯೊಂದರ ಮೇಲೆ ಮಲಗಿ ಹರಹರ ಎಂದು ಧ್ವನಿ ಮಾಡಿಕೊಂಡು ಹರಿದುಹೋಗುತ್ತಿರುವ ನದಿಯ ಮೊರೆಯನ್ನು ಕೇಳುತ್ತ ದೇಹವನ್ನು ವಿಸರ್ಜಿಸುವುದು.

ಅವರ ಭಾವ ಒಂದು ಮಹಾ ಆವೃತ್ತದಂತೆ (Spiral) ಇತ್ತು. ಅದರ ಕೆಳಭಾಗ ದೇಶಭಕ್ತಿ ಮತ್ತು ನೈಸರ್ಗಿಕ ಪ್ರೀತಿಯಲ್ಲಿತ್ತು. ಮಧ್ಯಭಾಗ ಜನಾಂಗ, ಅನುಭವ, ಚರಿತ್ರೆ, ಆಲೋಚನೆಗೆ ಸಂಬಂಧಪಟ್ಟ ಎಲ್ಲವನ್ನೂ ಒಳಗೊಂಡಿತ್ತು. ಎಲ್ಲವೂ ದೇಶದ ಆರಾಧನೆಯಲ್ಲಿ ಶಿಖರವನ್ನು ಮುಟ್ಟಿತ್ತು. ಕೆಲವು ವಿಮರ್ಶಕರು ಭಾವಿಸುವಂತೆ ಭರತಖಂಡ ವೃದ್ಧಳಂತೆ ಕೆಲಸಕ್ಕೆ

ಬಾರದವಳಲ್ಲ; ತಾರುಣ್ಯವಿದೆ, ಏನನ್ನುಬೇಕಾದರೂ ಸಾಧಿಸಬಲ್ಲ ಧೈರ್ಯ ವಿದೆ ಅವಳಲ್ಲಿ; ಇಪ್ಪತ್ತನೆ ಶತಮಾನದ ಪ್ರಾರಂಭದಲ್ಲಿ ನಿಂತಿದ್ದರೂ ಹಿಂದಿ ಗಿಂತ ಭವ್ಯವಾದ ಭವಿಷ್ಯವನ್ನು ಸಾಧಿಸಬಲ್ಲದು ಎಂಬ ಭಾವನೆ ಎಲ್ಲ ಕ್ಕಿಂತಲೂ ಮೇಲೆದ್ದು ಕಾಣುತ್ತಿತ್ತು. ಈ ಭಾವನೆಯನ್ನು ವ್ಯಕ್ತಪಡಿಸಿದ ಒಂದು ವೇಳೆ ಮಾತ್ರ ನನಗೆ ಚೆನ್ನಾಗಿ ಗೊತ್ತಾಗಿದೆ. ಒಂದು ದಿನ ಇವರು ಗಂಭೀರಭಾವದಲ್ಲಿದ್ದಾಗ, "ಹಲವು ಶತಮಾನಗಳಾದ ಮೇಲೆ ಪುನಃ ನಾನು ಜನ್ಮ ತಾಳಿರುವಂತೆ ಭಾವಿಸುತ್ತೇನೆ. ಭರತಖಂಡ ಇನ್ನೂ ತಾರುಣ್ಯ ದಲ್ಲಿದೆ" ಎಂದರು. ನಿಜವಾಗಿ ಇವರು ಆಡಿದ ಪ್ರತಿಯೊಂದು ಮಾತಿನ ಹಿಂದೆಯೂ ಹೇಳುತ್ತಿದ್ದ ಪ್ರತಿಯೊಂದು ಕಥೆಯ ಹಿಂದೆಯೂ ಈ ಸ್ಫೂರ್ತಿ ಅನುರಣಿತವಾಗುತ್ತಿತ್ತು. ಭರತಖಂಡಕ್ಕೆ ಸೇರಿದ ಯಾವುದಾದರೂ ಆಗಲಿ ಕ್ಷಮೆ ಕೇಳಿಕೊಳ್ಳುವುದನ್ನು ನಿಕೃಷ್ಟದೃಷ್ಟಿಯಿಂದ ನೋಡುವುದರಲ್ಲಿ, ಅನಾದರಣೆಯಿಂದ ಭರತಖಂಡದ ಮೇಲೆ ಮಾಡಿದ ಆರೋಪವನ್ನು ಖಂಡಿ ಸುವುದರಲ್ಲಿ, ಇತರರಿಗೆ ಶ್ರದ್ಧೆ ಭಕ್ತಿಗಳನ್ನು ಹೇಳುವಾಗಲಾಗಲಿ (ಅದು ತಮಗೆ ದೇಶದ ಮೇಲೆ ಇದ್ದ ಶ್ರದ್ಧೆ ಭಕ್ತಿಯ ಒಂದು ಪ್ರತಿಬಿಂಬದಂತೆ ಮಾತ್ರ ಇತ್ತು) ಆ ಸಮಯಗಳಲ್ಲಿ ಯತಿಯ ಗೈರಿಕವಸನ ಜಾರಿ ಹಿಂದೆ ಇದ್ದ ವೀರಯೋಧನ ಕತ್ತಿ ಗುರಾಣಿ ಕವಚಗಳು ಕಾಣಿಸಿಕೊಳ್ಳುವಂತೆ ಇದ್ದುವು.

ಇದರ ಹಿಂದೆಲ್ಲಾ ಇದ್ದ ಒಂದು ಪ್ರಲೋಭನೆ ಇವರಿಗೆ ಗೊತ್ತಿರದೆ ಇರಲಿಲ್ಲ. ಇವರು ಶಿಷ್ಯರಂತೆ ಗುರುಗಳ ಹತ್ತಿರ ಬರುತ್ತಿದ್ದಾಗ ಅವರೊಮ್ಮೆ ಸ್ವಾಮಿಜಿ ವಿಷಯದಲ್ಲಿ ಹೀಗೆ ಹೇಳಿದರು. "ಅವನ ಮನಸ್ಸಿನಲ್ಲಿ ಒಂದು ಅಜ್ಞಾನದ ತೆರೆ ಇದೆ ನಿಜ. ನನ್ನ ತಾಯಿಯೆ ಅವಳ ಕೆಲಸಕ್ಕಾಗಿ ಅದನ್ನು ಅಲ್ಲಿ ಇಟ್ಟಿರುವಳು. ಆ ತೆರೆ ತೆಳ್ಳನೆಯ ಕಾಗದದಂತೆ ಇದೆ. ಯಾವ ಸಮಯದಲ್ಲಿ ಬೇಕಾದರೆ ಅದನ್ನು ಅತ್ತ ಸರಿಸಬಹುದು." ಹೇಗೆ ತ್ಯಾಗಿ ಯಾದವನು ತನ್ನ ಮನೆ ಬಂಧುಗಳ ವಿಷಯ ಮನದಲ್ಲಿ ಏಳದಂತೆ ಪದೇ ಪದೇ ನೋಡಿಕೊಳ್ಳುತ್ತಾನೆಯೋ ಹಾಗೆಯೇ ಸ್ವಾಮಿಜಿ ತಮ್ಮ ಮನಸ್ಸಿನಲ್ಲಿ ಏಳುತ್ತಿದ್ದ ಅವರ ದೇಶಕ್ಕೆ ಸಂಬಂಧಪಟ್ಟ ಚರಿತ್ರೆ ಮುಂತಾದ ಭಾವನೆ ಗಳನ್ನು ನಿಗ್ರಹಿಸಿ ಎಲ್ಲಾ ಜನಾಂಗ ದೇಶಗಳನ್ನೂ ಒಂದೇ ದೃಷ್ಟಿಯಿಂದ ನೋಡಬಲ್ಲಂತಹ ಪರಿವ್ರಾಜಕ ಸನ್ಯಾಸಿಗಳಾಗಬೇಕೆಂದು ಇಚ್ಛಿಸುತ್ತಿದ್ದರು. ಒಂದು ದಿನ ಕಾಶ್ಮೀರದಲ್ಲಿದ್ದಾಗ ದೊಡ್ಡದೊಂದು ಅನುಭವವಾಗಿ ಮಗುವಿ

ನಂತಹ ಸರಳ ಮನಸ್ಸಿನಿಂದ ಹೀಗೆ ಹೇಳಿದರು: "ಇನ್ನು ಮೇಲೆ ಈ ಕೋಪವಿರಕೂಡದು. ತಾಯಿ ನನಗೆ ಹೇಳಿದಳು, 'ಒಬ್ಬ ನಾಸ್ತಿಕ ನನ್ನ ದೇವಸ್ಥಾನಕ್ಕೆ ಪ್ರವೇಶಿಸಿ ನನ್ನ ವಿಗ್ರಹವನ್ನು ಅಪಮಾನಗೊಳಿಸಿದರೆ ನಿನಗೇನು? ನೀನು ನನ್ನನ್ನು ರಕ್ಷಿಸುವೆಯೋ ಅಥವಾ ನಾನು ನಿನ್ನನ್ನು ರಕ್ಷಿಸುವೆನೊ' ಎಂದು ಕೇಳಿದಳು" ಎಂದರು.

ಇವರ ಆದರ್ಶವ್ಯಕ್ತಿಯೆ ಸಿಪಾಯಿದಂಗೆಯ ಕಾಲದ ಒಬ್ಬ ಸಾಧು. ಆತನನ್ನು ಆಂಗ್ಲ ಸಿಪಾಯಿಯೊಬ್ಬ ಇರಿದಾಗ ಹದಿನೈದು ವರುಷಗಳ ಮೌನವನ್ನು ನಿಲ್ಲಿಸಿ ಕೊಲೆಪಾತನಿಗೆ "ನೀನು ಕೂಡ ಅವನೆ" ಎಂದನು.

ಯಾವಾಗಲೂ ಶ್ರೀರಾಮಕೃಷ್ಣರ ಆದರ್ಶಕ್ಕೆ ತಕ್ಕಂತೆ ನಡೆದು ಕೊಳ್ಳಲು ಅವರು ಯತ್ನಿಸುತ್ತಿದ್ದರು. ಕೆಲವುವೇಳೆ ತಾವು ಕೂಡ ಅವರಿಗೆ ಸರಿಯಾಗಿ ವಿಧೇಯರಾಗಿಲ್ಲವೇನೊ ಎಂಬ ಭಾವನೆ ಬರುತ್ತಿತ್ತು. ಸುಮ್ಮನೆ ಉದ್ವೇಗದಲ್ಲಿ ಖರ್ಚುಮಾಡಿದ ಶಕ್ತಿ ವೃಥಾ ವ್ಯರ್ಥವಾಗುವುದೆಂದು ಅದನ್ನು ನಿಗ್ರಹಿಸಿದಾಗ ಮಾತ್ರ ಅದು ಕಾರ್ಯದಲ್ಲಿ ಪ್ರದರ್ಶಿತವಾಗುವುದೆಂಬ ಭಾವನೆ ಇವರನ್ನು ಪರವಶರನ್ನಾಗಿ ಮಾಡುತ್ತಿತ್ತು. ತಮಗೆ ಅರಿಯದೆ ತಮ್ಮ ಜನಾಂಗ ಮತ್ತು ದೇಶದ ಹಿತಕ್ಕಾಗಿ ಭರವಸೆ ಮತ್ತು ಪ್ರೀತಿಯ ಸಂದೇಶ ವನ್ನು ಹರಡುತ್ತಿದ್ದರು. ಅವು ಆಗಲೆ ಅಣಿಮಾಡಿ ಹದಮಾಡಿದ ಹೊಲಕ್ಕೆ ಬೀಜವನ್ನು ಬಿತ್ತಂತೆ ಇದ್ದವು. ಈಗ ಆಗಲೆ ಭರತಖಂಡದಲ್ಲೆಲ್ಲಾ ಹಲವರ ಹೃದಯದಲ್ಲಿ ಮಾತೃಭೂಮಿಯ ಮೇಲೆ ಭಕ್ತಿ, ಮತ್ತು ಪ್ರೀತಿ ಯನ್ನು ಉದಿಸುವಂತೆ ಮಾಡಿವೆ. ಶ್ರೀರಾಮಕೃಷ್ಣರು ಹೇಗೆ ಯಾವ ಗ್ರಂಥದ ಪರಿಚಯವಿಲ್ಲದೇ ಇದ್ದರೂ ಅವರ ಬಾಳೇ ವೇದಾಂತದ ಸಾರದಂತೆ ಇತ್ತೊ ಹಾಗೆಯೇ ರಾಷ್ಟ್ರಜೀವನದಲ್ಲಿ ಸ್ವಾಮಿ ವಿವೇಕಾನಂದರು. ಇದರ ಸಿದ್ಧಾಂತಗಳಾವುವೂ ಇವರಿಗೆ ಪರಿಚಯವಿರಲಿಲ್ಲ. ಸ್ವಾಮಿಜಿ ಶ್ರೀರಾಮ ಕೃಷ್ಣರ ವಿಷಯದಲ್ಲಿ ಹೇಳಿದ "ಅವರು ಭವ್ಯಜೀವನವನ್ನು ಬಾಳುವುದರಲ್ಲಿ ತೃಪ್ತರಾಗಿದ್ದರು. ಇತರರು ಬೇಕಾದರೆ ಅದಕ್ಕೆ ವಿವರಣೆ ಕೊಡಲಿ" ಎಂಬ ವಾಕ್ಯವೇ ಇವರಿಗೂ ಅನ್ವಯಿಸುವುದು.



೪

## ಸ್ವಾಮಿ ವಿವೇಕಾನಂದರು ಮತ್ತು ಶ್ರೀರಾಮಕೃಷ್ಣ ಸಂಘ

ನಾನಾಗಲೆ ಯಾವ ಮಹಾನಾಯಕನಿಗೆ ನನ್ನ ಸೇವೆಯನ್ನು ಅರ್ಪಿಸಿದ್ದೆನೊ ಅವರ ನಿಕಟ ಪರಿಚಯವಾಗಿದ್ದು ಗಂಗಾನದಿಯ ತೀರದಲ್ಲಿದ್ದ ಹಸುರು ಹುಲ್ಲುಗಾವಲು ಮತ್ತು ಗಿಡಗಳ ಮಧ್ಯದಲ್ಲಿ. ಭರತಖಂಡಕ್ಕೆ ನಾನು ಕಾಲಿಟ್ಟಾಗ, ಎಂದರೆ ಜನವರಿ ೨೮, ೧೮೯೮ ರಲ್ಲಿ ಬೇಲೂರು ಮತದಲ್ಲಿ ಆಗತಾನೆ ಒಂದು ಮನೆ ಮತ್ತು ನಿವೇಶನವನ್ನು ಕೊಂಡಿದ್ದರು. ಅನಂತರವೇ ಅದು ರಾಮಕೃಷ್ಣ ಸಂಘದ ಕೇಂದ್ರವಾಗಿದ್ದು. ಕೆಲವು ವಾರಗಳಾದ ಮೇಲೆ ಅಮೆರಿಕಾದೇಶದಿಂದ ಸ್ನೇಹಿತರ ತಂಡವೊಂದು ಬಂದು ಅವಸರದಿಂದ ಅರ್ಧ ಹಾಳಾದ ಮನೆಯನ್ನೆ ತಮ್ಮ ವಶಕ್ಕೆ ತೆಗೆದುಕೊಂಡರು. ನಿರಾಡಂಬರವಾಗಿ ಸಂತೋಷದಿಂದ ವಾಸಮಾಡಲು ಅದನ್ನು ಅಣಿಮಾಡಿಕೊಂಡರು. ಬೇಲೂರಿನಲ್ಲಿ ಸ್ನೇಹಿತರ ಅಭ್ಯಾಗತಳಾಗಿ ಅನಂತರ ಕುಮಾಯುನ್ ಮತ್ತು ಕಾಶ್ಮೀರದಲ್ಲಿ ಸ್ವಾಮಿಜಿ ಅವರೊಂದಿಗೆ ಸಂಚರಿಸುತ್ತಿರುವಾಗ ಅವರ ಪೂರ್ವಾಶ್ರಮದ ವಿಷಯ ಮತ್ತು ಭರತಖಂಡಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಅರಿಯತೊಡಗಿದೆ.

ಕಲ್ಕತ್ತೆಗೆ ಸ್ವಲ್ಪ ಮೇಲೆ ನದಿಗೆ ಪಶ್ಚಿಮದಿಕ್ಕಿನಲ್ಲಿ ಇಳಿಜಾರಾದ ಪ್ರದೇಶದಲ್ಲಿ ನಮ್ಮ ಮನೆ ಇತ್ತು. ಇಳಿತದಸಮಯದಲ್ಲಿ ನದೀ ತೀರದಲ್ಲಿರುವವರ ಪ್ರಯಾಣಕ್ಕೆ ಸೌಕರ್ಯವಾದ ಮನೆಯಂತಿರುವ ದೋಣಿಗನು ನಮ್ಮ ಮನೆ ಹತ್ತಿರವಿರುವ ಮೆಟ್ಟಲಿನವರೆಗೆ ಬರುವಂತೆ ಇತ್ತು. ನಾವಿದ್ದ ಮನೆ ತೀರದಲ್ಲಿ ನದಿಯ ಅಗಲ ಸುಮಾರು ಅರ್ಧ ಮುಕ್ಕಾಲು ಮೈಲಿಯವರೆಗೆ ಇತ್ತು. ಒಂದು ಮೈಲಿ ಮೇಲೆ ಪೂರ್ವ ದಿಕ್ಕಿನ ತೀರದಲ್ಲಿ ದಕ್ಷಿಣೇಶ್ವರದ ದೇವಾಲಯದ ಶಿಖರಗಳು ಮತ್ತು ಅಲ್ಲಿಯ ತೋಪಿನ ಮರಗಳು ಕಾಣುತ್ತಿದ್ದವು. ಅಲ್ಲೆ ವಿವೇಕಾನಂದರು ಮತ್ತು ಅವರ ಗುರುಭಾಯಿಗಳು ಶ್ರೀರಾಮಕೃಷ್ಣ ಪರಮಹಂಸರೆಡೆಗೆ ಹುಡುಗರಾದಾಗ ಬಂದು ಹೋಗುತ್ತಿದ್ದರು. ಆಗ ನಿಜವಾಗಿ ಮಠದಂತೆ ಉಪಯೋಗಿಸಲ್ಪಡುತ್ತಿದ್ದ ಮನೆ ನಮ್ಮ ಮನೆಗೆ ದಕ್ಷಿಣದಲ್ಲಿ ಅರ್ಧಮೈಲಿ ದೂರದಲ್ಲಿತ್ತು. ನಮಗೂ ಅವರಿಗೂ ಮಧ್ಯೆ ಹಲವು ತೋಟದ ಮನೆಗಳಿದ್ದವು. ಅದರ ಮಧ್ಯೆ ಒಂದಾದರೂ ಸಣ್ಣ ಕಾಲುವೆಯಿತ್ತು. ಅದನ್ನು ದಾಟಲು ತೆಂಗಿನಮರದ ದಿಮ್ಮಿ

ಯನ್ನು ಮೇಲೆ ಹಾಕಿದ್ದರು. ನಮ್ಮ ಮನೆಗೆ ಪ್ರತಿದಿನ ಸ್ವಾಮಿಜಿ ಬೆಳಿಗ್ಗೆ ಅಷ್ಟುಹೊತ್ತಿಗೇ ಒಬ್ಬರೇ ಅಥವಾ ತಮ್ಮ ಯಾರಾದರೂ ಗುರುಭಾಯಿ ಗಳನ್ನು ಕರೆದುಕೊಂಡು ಬರುತ್ತಿದ್ದರು. ಇಲ್ಲಿ ಬೆಳಿಗ್ಗೆ ನಮ್ಮ ತಿಂಡಿ ತೀರ್ಥ ಗಳಾದಮೇಲೆ ಮರದ ಕೆಳಗೆ ಕುಳಿತುಕೊಳ್ಳುತ್ತಿದ್ದೆವು. ಇಲ್ಲೇ ಎಂದಿಗೂ ಬತ್ತದ ಮಹಾ ಪ್ರವಾಹದಂತೆ ಬರುತ್ತಿದ್ದ ಸ್ವಾಮಿಜಿಯ ವಾಗ್ಧಾರೆಯನ್ನು ಕೇಳುತ್ತಿದ್ದೆವು. ಅವರಿಗೆ ಆ ಸಮಯದಲ್ಲಿ ಪ್ರಶ್ನೆಗಳನ್ನು ಹಾಕುತ್ತಿದ್ದುದು ಅಪರೂಪ. ಆ ಸಮಯದಲ್ಲಿ ಭರತಖಂಡಕ್ಕೆ ಸಂಬಂಧಪಟ್ಟ ರಹಸ್ಯತಮ ಸತ್ಯಗಳನ್ನು ವಿವರಿಸುತ್ತಿದ್ದರು. ನಾನು ಅಂದಿನ ಸ್ಮೃತಿಯನ್ನು ನೆನೆಸಿ ಕೊಂಡಾಗಲೆಲ್ಲ ಸ್ವಾಮಿಜಿ ಅವರು ಅಷ್ಟೊಂದು ಅನುಭವ ಮತ್ತು ಆಲೋಚನೆಗಳನ್ನು ಹೇಗೆ ಸಂಗ್ರಹಿಸಿದರು, ಅದನ್ನು ಸಂಗ್ರಹಿಸಿ ಆದಮೇಲೆ ಅದನ್ನು ವ್ಯಕ್ತಪಡಿಸುವುದಕ್ಕೆ ಇಷ್ಟೊಂದು ಶಕ್ತಿ ಮತ್ತು ಸ್ಫೂರ್ತಿ ಹೇಗೆ ಸಾಧ್ಯವಾಯಿತು ಎಂದು ಆಶ್ಚರ್ಯವಾಗುವುದು. ಅದ್ಭುತ ಭಾಷಣಕಾರರಲ್ಲಿ ಸ್ವಾಮಿಜಿ ಅವರು ಒಬ್ಬರಾಗಿದ್ದರೂ ಅವರಲ್ಲಿ ಒಂದು ವೈಶಿಷ್ಟ್ಯವಿತ್ತು. ಯಾರಾದರೂ ಪ್ರಶ್ನೆಹಾಕಿದರೆ ಅವರು ಎಂದಿಗೂ ಕೋಪಗೊಳ್ಳುತ್ತಿರಲಿಲ್ಲ. ಯಾರೊಂದಿಗೆ ಮಾತನಾಡುತ್ತಿದ್ದರೊ ಅವರ ಸ್ವಭಾವವನ್ನು ಗಮನಿಸದೆ ಇರಲಿಲ್ಲ. ಯಾರು ಅವರು ಹೇಳುತ್ತಿದ್ದುದನ್ನು ಅತಿ ಭಕ್ತಿ ವಿಶ್ವಾಸದಿಂದ ಕೇಳುತ್ತಿದ್ದರೊ ಅಂತಹ ಸಮಯದಲ್ಲೆ ಅವರ ಅಮೋಘಭಾವನೆಗಳು ವ್ಯಕ್ತವಾಗುತ್ತಿದ್ದವು. ಆದರೆ ಈ ವಿಷಯ ಸ್ವಾಮಿಜಿಗೆ ಗೊತ್ತಿತ್ತು ಎಂದು ನಾನು ಭಾವಿಸಲಾರೆ. ಬಾಹ್ಯ ಯಾವ ಘಟನೆಯೂ ಅವರನ್ನು ಉದ್ವಿಗ್ನ ರನ್ನಾಗಿ ಮಾಡಲಾರದಾಗಿತ್ತು. ಎಷ್ಟೋ ವೇಳೆ ಅವರ ಭಾವದಲ್ಲಿ ಏಳು ಬೀಳುಗಳಿರುತ್ತಿದ್ದುವು. ಆದರೆ ಅವು ಸರ್ವಸಾಮಾನ್ಯವಾದುವು, ಗುಪ್ತ ಪ್ರದೇಶದಿಂದ ವ್ಯಕ್ತವಾಗುತ್ತಿದ್ದ ಸೌರಭದಂತೆ ಇತ್ತು.

ಇಲ್ಲಿಯೇ ಭಾರತೀಯರ ಸಾಧನೆ ಅವರ ಆದರ್ಶ ಇವುಗಳನ್ನು ನಾವು ತಿಳಿದುಕೊಂಡಿದ್ದು. ಮಾತೆಲ್ಲ ಯಾವುದಾದರೂ ಆದರ್ಶಗಳನ್ನು ವಿವರಿಸು ವುದಾಗಿತ್ತು. ಅದನ್ನು ವಿವರಿಸುವುದಕ್ಕೆ ಸಾಮಗ್ರಿಗಳನ್ನು ಉದಾಹರಣೆ ಗಳನ್ನು ಇತಿಹಾಸ ಸಾಹಿತ್ಯ ಮತ್ತು ಇನ್ನೂ ಸಾವಿರಾರು ಕಡೆಯಿಂದ ತರು ತ್ತಿದ್ದರು. ಆದರೆ ಗುರಿ ಮಾತ್ರ ಯಾವುದಾದರೊಂದು ಹಿಂದೂ ಆದರ್ಶ ವನ್ನು ಸ್ಪಷ್ಟವಾಗಿ ವಿವರಿಸುವುದಾಗಿತ್ತು. ಯಾವಾಗಲೂ ಅವರು ಹೇಳುವು ದೆಲ್ಲ ನಮಗೆ ತಿಳಿದ ವಿಷಯವೇ ಆಗಿರಲಿಲ್ಲ. ಇಲ್ಲಿ ಮಾನಸಿಕ ಏಕಾಗ್ರತೆ

ಹೃದಯದ ಧಾರಾಳತನಕ್ಕಿಂತ ಹೆಚ್ಚು ಬೇಕಾಗಿತ್ತು. ಆದರೆ ಇದರಿಂದ ಭರತಖಂಡದ ಹಿತಕ್ಕೆ ಒಳ್ಳೆಯದೆ ಕೆಟ್ಟದ್ದೆ ಎಂಬ ಪ್ರಶ್ನೆ ಇನ್ನೂ ಬಂದಿರಲಿಲ್ಲ. ವ್ಯಕ್ತಿಗೆ ಸಂಬಂಧಪಟ್ಟ ವಿಷಯದಲ್ಲಿ ಸಾಕ್ಷಿಯ ಭಾವವನ್ನು ರೂಢಿಸಿ ಎನ್ನುತ್ತಿದ್ದರು. ನಮ್ಮ ಶತ್ರುಗಳಿಗೂ ಪ್ರಾರ್ಥಿಸಿ ಎಂದು ಹೇಳುವುದಕ್ಕಿಂತ ಹೆಚ್ಚಾಗಿ ಸಾಕ್ಷಿಯಂತೆ ನಿಲ್ಲು ಎಂಬುದನ್ನು ಕೇಳುತ್ತಿದ್ದೆವು. ಒಬ್ಬನನ್ನು ವೈರಿ ಎಂದು ಪರಿಗಣಿಸಿದಾಗಲೆ ಅವನಲ್ಲಿ ದ್ವೇಷಭಾವ ಇದೆ ಎಂದು ಹೇಳಿದಂತೆ ಆಗಿತ್ತು ಇಂತಹ ಮನಸ್ಸಿಗೆ. "ಯಾವ ಕಾರಣವೂ ಇಲ್ಲದೆ" ಪ್ರೀತಿಸುವುದು, "ಯಾವ ಉದ್ದೇಶವೂ ಇಲ್ಲದೆ ಪ್ರೀತಿಸುವುದು" ಇಲ್ಲದೇ ಇದ್ದರೆ ಇದು ಪ್ರೀತಿಯೇ ಆಗುತ್ತಿರಲಿಲ್ಲ. ಪಾಶ್ಚಾತ್ಯ ಉಪನ್ಯಾಸಕನೊಬ್ಬ ಇದನ್ನು ವ್ಯಕ್ತಪಡಿಸಲು ಯತ್ನಿಸಿದ್ದಿರಬಹುದು. ಆದರೆ ಅದರಲ್ಲಿ ಎಲ್ಲೋ ಸ್ವಲ್ಪ ಜಯಶಾಲಿಯಾಗಿರಬಹುದು. ತ್ಯಾಗ ಮತ್ತು ಪವಿತ್ರತೆಯನ್ನು ಸತತ ವಿಭಜನೆ ಮಾಡುತ್ತಿದ್ದರು. ಮಹದೇವನಿಗೆ ತಾನು ಸೃಷ್ಟಿಸಿದ ಪ್ರಪಂಚದಲ್ಲಿರುವ ಯಾವ ವಸ್ತುವಿನ ಮೇಲೆಯೂ ಆಸಕ್ತಿ ಇರಲಿಲ್ಲ. ರಾಜ್ಯವೇ ಬೇಕಾಗಿರಲಿಲ್ಲ. ತಂದೆಯಾಗ ಬೇಕೆಂಬ ಹಂಬಲವಿಲ್ಲ; ಸುಖ ಬೇಕಿಲ್ಲ, ವ್ಯವಹಾರಜ್ಞಾನದ ಅಭಾವವೆ ಇವನಲ್ಲಿ ಇತ್ತು ಎಂಬಂತೆ ತೋರುತ್ತಿತ್ತು. ಒಬ್ಬ ಏನೂ ಅರಿಯದ ಪೆದ್ದನಂತೆ ಇದ್ದನು. ಯಾರು ಬೇಕಾದರೂ ಇವನನ್ನು ಸುಲಭವಾಗಿ ಮೋಸಗೊಳಿಸಬಹುದಾಗಿತ್ತು. ತನ್ನ ಹೊಟ್ಟೆ ಹೊರೆದುಕೊಳ್ಳುವುದಕ್ಕೆ ಮನೆಯಿಂದ ಮನೆಗೆ ಭಿಕ್ಷೆ ಎತ್ತುತ್ತಿದ್ದ ಕಪಾಲಿಯ ಚಿತ್ರ ನಮ್ಮ ಕನಸಿನಲ್ಲೆಲ್ಲ ಸಂಚರಿಸುತ್ತಿತ್ತು. ತಿತಿಕ್ಷೆ, ದೋಷವನ್ನು ನಿರ್ಮೂಲಮಾಡಲು ಯತ್ನಿಸದೆ ಇರುವುದೇ ಆಧ್ಯಾತ್ಮಿಕತೆಯ ಚಿಹ್ನೆ. ಪಾಶ್ಚಾತ್ಯರಲ್ಲಿ ನಮಗೆ ಒಬ್ಬ ಸಾಧುವಿನ ಉದಾಹರಣೆ ಸಿಕ್ಕುವುದು. ಆತನ ಕೈಯಲ್ಲಿ ಕುಷ್ಠರೋಗ ಇದ್ದವನು. ಆ ವ್ರಣದಿಂದ ಕೆಲವು ವೇಳೆ ಹುಳುಗಳು ಕೆಳಗೆ ಬಿದ್ದಾಗ "ಸಹೋದರರೆ ತಿನ್ನಿ" ಎಂದು ಪುನಃ ಅವುಗಳನ್ನು ಬೆರಳಿನಮೇಲೆ ಇಡುತ್ತಿದ್ದನು. ಸ್ವಾಮಿಜಿ ಉದಹರಿಸಿದ ರಘುನಾಥನ ಅನುಭವದಲ್ಲಿ ಮುಕ್ತಾತ್ಮನ ಲಕ್ಷಣಗಳಿದ್ದುವು. ಅವನ ಎದುರಿಗೆ ಎತ್ತುಗಳನ್ನು ಹೊಡೆದಾಗ ಇವನು ಜ್ಞಾನತಪ್ಪಿ ನೆಲದ ಮೇಲೆ ಬಿದ್ದನು. ಇವನ ಬೆನ್ನಿನಮೇಲೆ ಎತ್ತಿಗೆ ಹೊಡೆದ ಗಾಯದ ಬರೆ ಬಂದಿತ್ತು. ನಮ್ಮ ಧರ್ಮಕ್ಕೆ ಪರಿಚಯವೇ ಇಲ್ಲದ ಕೆಲವು ಆಧ್ಯಾತ್ಮಿಕ ಭಾವನೆಗಳನ್ನು ಅರಿತುಕೊಳ್ಳುವಂತೆ

ಅವರು ಹೇಳುತ್ತಿದ್ದರು. ದೇಹಾಭಿಮಾನವೇ ಇಲ್ಲದ ಸಾಧು ದಿಗಂಬರನಾಗಿ ಹೋಗುವುದರಲ್ಲಿಯೂ ಆಧ್ಯಾತ್ಮಿಕ ಜೀವನದ ಲಕ್ಷಣಗಳನ್ನು ನಮಗೆ ತೋರುತ್ತಿದ್ದರು. ಅತಿಸೂಕ್ಷ್ಮವಾಗಿ ಚಿತ್ರಿಸಿರುವ ಕೆಲವು ನಗ್ನ ದೃಶ್ಯಗಳು ಪಾಶ್ಚಾತ್ಯದೇಶದಲ್ಲಿ ಕಲಾ ಪ್ರಪಂಚದಲ್ಲಿವೆ. ಆದರೆ ಇಂಡಿಯಾದೇಶದಲ್ಲಿ ಅದು ಧಾರ್ಮಿಕ ಪ್ರಪಂಚದಲ್ಲಿದೆ. ನಾವೊಂದು ಗ್ರೀಕರ ನಗ್ನ ಶಿಲ್ಪದ ಎದುರಿಗೆ ನಿಂತಾಗ ಅದರಲ್ಲಿರುವ ಸೌಂದರ್ಯಕ್ಕೆ ಮಾರು ಹೋಗುವಂತೆ, ಹಿಂದೂ ಬೆತ್ತಲೆ ಇರುವ ಬೈರಾಗಿಯಲ್ಲಿ ಶಿಶುಸಹಜ ಪವಿತ್ರತೆಯನ್ನು ಕಾಣುವನು.

ಈ ಹೊಸ ಪ್ರಪಂಚದಲ್ಲಿ ಆಧ್ಯಾತ್ಮಿಕ ಜೀವನದಲ್ಲಿ ಮನಸ್ಸಿನ ಏಕಾಗ್ರತೆಗೆ ಹೇಗೆ ಪ್ರಾಮುಖ್ಯತೆ ಇದೆಯೊ ಅದರಂತೆಯೇ ಮತ್ತೊಂದು ಭಾವನೆಗೆ ಪ್ರಾಮುಖ್ಯತೆ ಇದ್ದುದನ್ನು ನಾನು ಗಮನಿಸಿದೆ. ಅದೇ ಅಭಿಪ್ರಾಯ, ಆಲೋಚನೆ, ಕರ್ಮಗಳಲ್ಲಿ, ವ್ಯಕ್ತಿಗೆ ಇರುವ ಸ್ವಾತಂತ್ರ್ಯ. ಇದೊಂದನ್ನು ತನ್ನ ಶ್ರೇಷ್ಠ ಆಸ್ತಿಯಂತೆ ರಕ್ಷಿಸುತ್ತಿದ್ದ. ಇದನ್ನು ಅಪಹರಿಸಲು ಯಾರಿಗೂ ಸನ್ಯಾಸಿ ಅಧಿಕಾರ ಕೊಡುತ್ತಿರಲಿಲ್ಲ. ನಿತ್ಯಜೀವನದಲ್ಲಿ ಇದು ವ್ಯಕ್ತವಾಗುತ್ತಿದ್ದುದನ್ನು ನೋಡಿದಾಗ ಇದೊಂದು ಬಗೆಯ ತ್ಯಾಗದಂತೆಯೇ ಕಂಡಿತು. ಒಂದು ವಸ್ತು ಎಷ್ಟೇ ಹಿತಕರವಾಗಿರಲಿ ಅದು ನಮ್ಮನ್ನು ಬಂಧನಕ್ಕೆ ಗುರಿಮಾಡುವಂತೆ ಇದ್ದರೆ ಅದನ್ನು ಸ್ವೀಕರಿಸದೆ ಇರುವುದು. ಬಂಧನಕ್ಕೆ ಒಳಗುಮಾಡುವ ಯಾವುದನ್ನಾದರೂ ಮರುಕ್ಷಣದಲ್ಲಿಯೇ ತ್ಯಜಿಸುವುದಕ್ಕೆ ಸಿದ್ಧರಾಗಿರುವುದು. ಇದನ್ನು ಮಾಡಬೇಕಾದರೆ ಮನಸ್ಸು ಎಷ್ಟು ಸೂಕ್ಷ್ಮವಾಗಿರಬೇಕು? ನಮ್ಮ ಇಚ್ಛೆ ಎಷ್ಟು ಸಿದ್ಧವಾಗಿರಬೇಕು? ಆದರೂ ಈ ಆದರ್ಶವೂ ಕೂಡ ಅವರಲ್ಲಿ ಸ್ಪಷ್ಟವಾಗಿ ಕಾಣುತ್ತಿತ್ತು. ಆದಕಾರಣವೆ ಒಂದು ಸಮುದಾಯ ಸನ್ಯಾಸ ಪಂಗಡ ಬೆಳೆಯಲು ಅವಕಾಶವಾಗಲಿಲ್ಲ. ಹಿಂದೆ ಆಧ್ಯಾತ್ಮಿಕ ಶ್ರೇಷ್ಠ ನಿದರ್ಶನಗಳೆಲ್ಲಾ ಏಕಾಂಗಿಗಳಾದ ಅಥವಾ ಪರಿವ್ರಾಜಕರಾದ ಸಾಧುಗಳಾಗಿದ್ದರು. ಮಠದಲ್ಲಿ ಇದ್ದ ಕೆಲವರು ಅವರ ನಾಯಕರಾದ ಸ್ವಾಮಿ ವಿವೇಕಾನಂದರು ಸ್ತ್ರೀಯರೊಡನೆ ಮಾತನಾಡುವುದನ್ನು ಒಪ್ಪುತ್ತಿರಲಿಲ್ಲ. ಮತ್ತೆ ಕೆಲವರು ಬಾಹ್ಯ ಆಚಾರಗಳನ್ನು ಒಪ್ಪುತ್ತಿರಲಿಲ್ಲ. ಕೆಲವರ ಧರ್ಮವಾದರೊ ಮಾನವ ನಾಯಕನನ್ನು ಆರಾಧಿಸುವ ನಿರೀಶ್ವರವಾದವಾಗಿತ್ತು. ಮತ್ತೆ ಕೆಲವರು ಬೆಳಗ್ಗಿನಿಂದ ಸಾಯಂಕಾಲದವರೆಗೆ ಯಾವುದಾದರೂ ಪೂಜೆಗೆ ಸಂಬಂಧಪಟ್ಟ ಆಚಾರಗಳಲ್ಲಿ ನಿರತರಾಗಿದ್ದರು. ಇದು ನಮಗೆ ಸಹಿಸಲಸದಳ

ವಾದಂತೆ ಇತ್ತು. ಕೆಲವರು, ಮಹಾತ್ಮರು ಸಾಧುಸಂತರು ಇವರ ದರ್ಶನ ಪವಾಡಗಳು ಮುಂತಾದ ಅದ್ಭುತಗಳಿಂದ ಕೂಡಿದ ಪ್ರಪಂಚದಲ್ಲಿ ತನ್ಮಯರಾಗಿದ್ದರು. ಇನ್ನು ಕೆಲವರಾದರೊ, ಇದೆಲ್ಲ ಕೆಲಸಕ್ಕೆಬಾರದು ದೆಂದು ಬರೀ ಶುಷ್ಕಯುಕ್ತಿಯಿಂದಲೇ ಮುಂದುವರಿಯಲು ಯತ್ನಿಸುತ್ತಿದ್ದರು. ಹೀಗೆ ಭಿನ್ನ ಭಿನ್ನ ಸ್ವಭಾವದವರೆಲ್ಲ ಒಂದುಗೂಡಿರುವುದನ್ನು ನೋಡಿದಾಗ, ಪ್ರತಿಯೊಬ್ಬನಿಗೂ ತನ್ನ ಸ್ವಭಾವಕ್ಕೆ ತಕ್ಕ ಮಾರ್ಗವನ್ನು ಆರಿಸಿಕೊಳ್ಳಲು ಸ್ವಾತಂತ್ರ್ಯವಿದೆ ಎಂಬುದಕ್ಕೆ ಒಂದು ಉದಾಹರಣೆ ಕಂಡಿತು. ಇದರಿಂದ ನಾನು ಆಗ ಮತ್ತು ಅನಂತರವೂ ಆಲೋಚಿಸುತ್ತಿದ್ದಂತೆ ಹಿಂದಿನಕಾಲದ ಅಧಿಕಾರವಾಣಿಗೆ ಸ್ವಲ್ಪ ಕುಂದು ತಂದಿತೆಂದು ಭಾವಿಸದೆ ಇರಲಾರೆ. ಶ್ರೇಷ್ಠ ಅನಾಸಕ್ತರಾದ ವ್ಯಕ್ತಿಗಳು ಊರಿನ ಮತ್ತು ದೇಶದ ಹಿತಕ್ಕಾಗಿ ಕಾರ್ಯೋನ್ಮುಖರಾಗಬೇಕಾದರೆ ಸಂಘದ ಕಾರ್ಯವನ್ನು ಮಾಡುವುದೇ ಶ್ರೇಷ್ಠಕರ್ಮ, ಯೋಗ್ಯಸೇವೆ ಎಂಬ ಭಾವದಿಂದ ಅವರು ಪ್ರೇರಿತರಾಗಿರಬೇಕಾಗುವುದು. ಹಿಂದಿನ ಕಾಲದ ಭರತಖಂಡದಲ್ಲಿ ಶ್ರೇಷ್ಠಧಾರ್ಮಿಕ ವ್ಯಕ್ತಿಗಳು ಕೂಡ ಆ ದೂರದ ಆಧ್ಯಾತ್ಮಿಕ ಆದರ್ಶಗಳನ್ನು ಮಾತ್ರ ಗಮನಿಸುತ್ತಿದ್ದರು. ಅಂತಹವರ ಸಂಗಡಕ್ಕೆ ಸೇರಿದವರಲ್ಲಿಯೂ ದೇಶದ ಹಿತಕ್ಕೆ ದುಡಿಯುವಂತಹ ಸ್ವಾತಂತ್ರ್ಯ ಮತ್ತು ಸ್ಫೂರ್ತಿ ಇತ್ತು. ಅವರಲ್ಲಿ ಈ ಸಾಮರ್ಥ್ಯವಿದ್ದರೂ ಬೇಕಾದ ಶೀಲಸಂಪತ್ತಿದ್ದರೂ, ಆಧುನಿಕ ಅನುಕೂಲ್ಯಗಳು ಇರಲಿಲ್ಲ. ಈಗಿನವರಿಗೆ ಅದು ಇರುವುದರಿಂದ ಆದರ್ಶವನ್ನು ಕಾರ್ಯಗತ ಮಾಡಲು ಸಾಧ್ಯವಾಗಿದೆ. ಹಿಂದೂ ಧರ್ಮ ತನ್ನ ಅನುಭವದ ಕ್ಷೇತ್ರವನ್ನು ವಿಸ್ತರಿಸಿಕೊಳ್ಳುವುದಕ್ಕೆ ಸದಾ ಸಿದ್ಧವಿರುವುದು ಎಂಬುದಕ್ಕೆ ಶ್ರೀರಾಮಕೃಷ್ಣರು ಸ್ವಾಮಿ ವಿವೇಕಾನಂದರಂತಹ ವ್ಯಕ್ತಿಗಳು ಜನ್ಮವೆತ್ತಿ ಒಂದು ಸಂಘಕ್ಕೆ ಸ್ಫೂರ್ತಿ ಇತ್ತು, ಅದರ ಮೂಲಕ ಕಾರ್ಯ ನಡೆಸುತ್ತಿರುವುದು, ಇದರ ಮೂಲಕ ದೇಶದ ಜ್ಞಾನ ಭಂಡಾರಕ್ಕೆ ತಮ್ಮ ಪಾಲಿನದನ್ನು ಅರ್ಪಿಸಿರುವುದೇ ಸಾಕ್ಷಿ.

ಸ್ವಾಮಿಜಿ ಅವರಲ್ಲಿ ಭಾವನೆಗಳನ್ನು ಕೊಟ್ಟು ತೆಗೆದುಕೊಳ್ಳಬೇಕು ಎಂಬ ಆದರ್ಶ ಮನಸ್ಸಿನಲ್ಲಿತ್ತು. ಆದಕಾರಣವೇ ಅವರು ನಮಗೆ ಪದೇ ಪದೇ ಪಾಶ್ಚಾತ್ಯರ ಗುಣದಲ್ಲಿ ಒಂದು ದೋಷವಿದೆ. ಅದೇ ತಮಗೆ ಯಾವುದು ಸರಿ ಎಂದು ತೋರುವುದೋ ಅದೇ ಎಲ್ಲರಿಗೂ ಸರಿ ಎಂದು ಹೇಳುವುದು. ಇದರಿಂದ ನೀವು ಜಾಗ್ರತರಾಗಿರಬೇಕು ಎಂದು ಎಚ್ಚರಿಸುತ್ತಿದ್ದರು. ಆದರೂ

ಅವರಿಗೆ ಪಾಶ್ಚಾತ್ಯರ ಒಳ್ಳೆಯಗುಣ ಪರಿಚಯವಿಲ್ಲದೆ ಇರಲಿಲ್ಲ. ಯಾರೊ ಅವರನ್ನು ಒಮ್ಮೆ ಆಂಗ್ಲೇಯರಲ್ಲಿ ಯಾವುದು ಶ್ರೇಷ್ಠಗುಣ ಎಂದು ಪ್ರಶ್ನಿಸಿದಾಗ "ವಿಧೇಯತೆ ಮತ್ತು ಆತ್ಮಗೌರವ ಎರಡನ್ನು ಹೊಂದಿಸಿಕೊಂಡು ಹೋಗುವುದು ಅವರಿಗೆ ಗೊತ್ತಿದೆ" ಎಂದು ಹೇಳಿದರು.

ನಾವು ಬೇಲೂರು ಮಠದಲ್ಲಿ ನೋಡಿದ್ದು ಕೇವಲ ಸ್ವಾಮಿ ವಿವೇಕಾನಂದರನ್ನು ಮಾತ್ರ ಅಲ್ಲ. ಮಠದವರೆಲ್ಲ ನಮ್ಮನ್ನು ಅತಿಥಿಗಳೆಂದು ಭಾವಿಸಿದ್ದರು. ಅನೇಕ ಜನ ಸನ್ಯಾಸಿಗಳು ನಮಗೆ ಯಾವುದಾದರೂ ಕೆಲಸಮಾಡಲು, ವಿಶ್ವಾಸ ತೋರಲು ಬಂದುಹೋಗುತ್ತಿದ್ದರು. ನಮಗೆ ಬರುತ್ತಿದ್ದ ಹಾಲನ್ನು ಅವರು ಕರೆಯುತ್ತಿದ್ದರು. ರಾತ್ರಿಹೊತ್ತು ನಮಗೆ ಹಾಲನ್ನು ಒಬ್ಬ ಸೇವಕ ತಂದುಕೊಡುತ್ತಿದ್ದ. ಒಂದು ದಿನ ರಾತ್ರಿ ಅವನಿಗೆ ದಾರಿಯಲ್ಲಿ ಒಂದು ನಾಗರಹಾವು ಕಂಡು ಅಂಜಿ ತಾನು ಹೋಗಲಾರೆ ಎಂದಾಗ ಈ ಸಣ್ಣ ಕೆಲಸವನ್ನು ಒಬ್ಬ ಸ್ವಾಮಿಗಳು ಮಾಡಲು ಅಣಿಯಾದರು. ಪ್ರತಿದಿನ ನಮ್ಮ ಮನೆಗೆ ಸಂಬಂಧಪಟ್ಟ ವಿಷಯವನ್ನು ವಿಚಾರಿಸಲು ಹೊಸದಾಗಿ ಸೇರಿದ ಆಶ್ರಮವಾಸಿಯನ್ನು ಕಳುಹಿಸುತ್ತಿದ್ದರು. ನಮಗೆ ಬಂಗಾಳಿ ಕಲಿಸಲು ಮತ್ತೊಬ್ಬರನ್ನು ನೇಮಕಮಾಡಿದರು. ಸಂಘದ ಹಲವು ಹಿರಿಯ ಸ್ವಾಮಿಗಳು ಅನೇಕವೇಳೆ ವಿಶ್ವಾಸದಿಂದ ನಮ್ಮ ಮನೆಗೆ ಬಂದು ವಿಚಾರಿಸಿಕೊಂಡು ಹೋಗುತ್ತಿದ್ದರು. ಒಂದು ಸಲಿ ವಿವೇಕಾನಂದರೆ ಹಲವು ವಾರಗಳು ಎಲ್ಲಿಯೊ ಹೋಗಿದ್ದಾಗ ಅತಿಥಿಗಳ ಯೋಗಕ್ಷೇಮವನ್ನು ವಿಚಾರಿಸುವುದು ತಮ್ಮ ಕರ್ತವ್ಯವೆಂದು ಭಾವಿಸಿದ ಹಿರಿಯ ಸ್ವಾಮಿಗಳು ಯಾರಾದರೊಬ್ಬರು ಪ್ರತಿದಿನ ಬೆಳಗ್ಗೆ ಟೀ ಸಮಯದಲ್ಲಿ ನಮ್ಮ ಮನೆಗೆ ಬರುತ್ತಿದ್ದರು. ಹೀಗೆ ನೂರಾರು ಘಟನೆಗಳ ಮೂಲಕ ತ್ಯಾಗಿಗಳ ಸಂಪರ್ಕವಾಯಿತು. ಇವರ ಮೂಲಕ ಇವರ ಬಾಳಿನಲ್ಲಿ ಹಾಸುಹೊಕ್ಕಾಗಿ ನಿಂತ ಹಲವು ಸ್ಮೃತಿ ಚಿತ್ರಗಳು ನಮಗೆ ಅರಿವಾದವು.

ನಮ್ಮನ್ನು ನೋಡಲು ಬಂದ ಸನ್ಯಾಸಿಗಳೆಲ್ಲ ಒಂದು ವಿಷಯವನ್ನು ಮಾತ್ರ ಕುರಿತು ಮಾತನಾಡುತ್ತಿದ್ದರು. ಅದೇ ಅವರ ಗುರು ಶ್ರೀರಾಮಕೃಷ್ಣ ಮತ್ತು ಅವರ ಪ್ರಖ್ಯಾತ ಶಿಷ್ಯ ಸ್ವಾಮಿ ವಿವೇಕಾನಂದ. ಈಗ ಸ್ವಾಮಿ ವಿವೇಕಾನಂದರು ಅವರೊಡನೆ ಹದಿಮೂರು ಹದಿನಾಲ್ಕು ತಿಂಗಳಿಂದ ಮಾತ್ರ ಇರುವವರು. ಸ್ವಾಮಿಜಿ ಅವರನ್ನು ಕಂಡ ಕುತೂಹಲ ಮತ್ತು ಸಂತೋಷದಿಂದ ಅವರಿನ್ನೂ ಪಾರಾಗಿಯೇ ಇರಲಿಲ್ಲ. ಈಗ ಸ್ವಾಮಿಜಿ

ಯವರನ್ನು ನೋಡುವುದಕ್ಕೆ ಮುಂಚೆ ಆರು ವರುಷಗಳು ಅವರ ಪಾಲಿಗೆ ಸ್ವಾಮಿಜಿ ಅವರು ಇರಲೇ ಇಲ್ಲ. ಇತ್ತೀಚಿಗೆ ಅವರು ಪತ್ರವ್ಯವಹಾರ ವನ್ನೇನೊ ಯಥೇಚ್ಛವಾಗಿ ಮಾಡುತ್ತಿದ್ದರು, ನಿಜ. ದೀರ್ಘಕಾಲ ಎಂದಿಗೂ ಅವರ ಪತ್ರ ಇಲ್ಲದೆ ಇರಲಿಲ್ಲ. ಪ್ರಥಮದಲ್ಲಿ ಅಮೆರಿಕಾದೇಶದಲ್ಲಿ ಸ್ವಾಮಿ ಗಳ ಜಯವನ್ನು ಕೇಳಿದಾಗ, ತಮ್ಮ ಗುರುದೇವರು ವಿವೇಕಾನಂದರ ವಿಷಯದಲ್ಲಿ ನುಡಿದ ಭವಿಷ್ಯವಾಣಿ ಜ್ಞಾಪಕಕ್ಕೆ ಬಂದು ಅವರು ವಿವೇಕಾ ನಂದರೇ ಇರಬೇಕು ಎಂದು ನಿರ್ಧರಿಸಿಕೊಂಡರು.

ಯಾರಾದರೂ ಮಹಾತ್ಯಾಗಿಯನ್ನು ಎಲ್ಲಿಯಾದರೂ ನೋಡಿದ್ದರೆ ಅವರಲ್ಲಿ ಕೆಲವು ವೇಳೆ ತಮ್ಮ ಹಿಂದಿನದನ್ನೆಲ್ಲಾ ಸಂಪೂರ್ಣವಾಗಿ ಮರೆಯ ಲೆತ್ನಿಸುವುದು, ಯಾರು ತುಂಬಾ ಕೆಳಗಿನವರೊ ಅವರೊಂದಿಗೆ ಬೆರೆಯ ಲೆತ್ನಿಸುವುದು, ರಹಸ್ಯತನು ಸತ್ಯದೊಂದಿಗೆ ಒಂದಾಗಲೆತ್ನಿಸುವುದು, ಜನ ರಿಂದ ದೂರವಾಗಿ ಅವರು ತಮ್ಮನ್ನು ಮರಿತುಬಿಡಲಿ ಎಂದು ಪ್ರಯತ್ನಿಸು ವುದು, ಮುಂತಾದ ಭಾವನೆಗಳನ್ನು ನೋಡುತ್ತೇವೆ. ಇದೇ ಭಾವನೆಯಿಂದ ಪ್ರೇರಿತರಾಗಿಯೆ ಅವರು ಗಿರಿಗುಹೆಗಳಲ್ಲಿ ಏಕಾಂತವಾಗಿ ಮೌನದಿಂದ ಇರುವುದು, ಕಾಡಿನಿಂದ ಕಾಡಿಗೆ, ಊರಿಂದ ಊರಿಗೆ ಅಲೆಯುತ್ತಿರುವಾಗ ಧೂಳು ಬೂದಿಯನ್ನು ಬಳಿದುಕೊಳ್ಳುವುದು, ಮುಂತಾದುವುಗಳೆಲ್ಲ ಎಂದು ಕಾಣುವುದು. ಪಾಶ್ಚಾತ್ಯರಿಗೆ ಇದನ್ನು ವಿವರಿಸಲು ಸಾಧ್ಯವಿಲ್ಲ. ಗುರು ನಿರ್ಯಾಣಾನಂತರ ಸ್ವಾಮಿಜಿ ಅವರು ಈ ಭಾವದಲ್ಲಿ ತಲ್ಲೀನರಾಗಿದ್ದಂತೆ ಕಾಣುವುದು. ಪುನಃ ಪುನಃ ಗುರುಭಾಯಿಗಳ ಮತ್ತು ಕಿರಿಯರ ಸಂಗದಿಂದ ಎಂದೆಂದಿಗೂ ಅಗಲಬೇಕೆಂದು ಅವರು ಹೋಗುತ್ತಿದ್ದರು ಎಂದು ಕಾಣು ವುದು. ಒಂದುಸಲಿ ಅವರು ಹಾಗೆ ಹೋದಾಗಲೆ ಹತ್ರಾಸ್ ಎಂಬಲ್ಲಿ ರೋಗ ದಿಂದ ನರಳುತ್ತಿದ್ದಾಗ ಇದು ಗುರುಭಾಯಿಗಳಿಗೆ ಗೊತ್ತಾಗಿ ಅವರನ್ನು ಪುನಃ ಮಠಕ್ಕೆ ಕರೆದುಕೊಂಡು ಬರುವುದಕ್ಕೆ ಯಾರನ್ನೊ ಕಳುಹಿಸುತ್ತಾರೆ. ಅಧ್ಭುತವಾದ ಒಂದು ಪ್ರೀತಿ ಇವರನ್ನು ಪರಸ್ಪರ ಬಂಧಿಸಿತ್ತು. ಅದ ರಲ್ಲಿಯೂ ವಿವೇಕಾನಂದರ ಮೇಲೆ ಎಲ್ಲರಿಗೂ ಇದ್ದ ಪ್ರೀತಿಯಂತೂ ಎಲ್ಲ ವನ್ನೂ ಮೀರಿಸಿತ್ತು. ತಾವೆ ಅವರನ್ನು ಶುಶ್ರೂಷೆ ಮಾಡುವ ತನಕ ತೃಪ್ತರಾಗುತ್ತಿರಲಿಲ್ಲ. ಕೆಲವು ತಿಂಗಳಾದ ಮೇಲೆ ಪರಿವ್ರಾಜಕರಾಗಿದ್ದಾಗ ಸ್ವಾಮಿ ವಿವೇಕಾನಂದರೇ ಸ್ವೀಕರಿಸಿದ್ದ ಒಬ್ಬ ಶಿಷ್ಯರು ಬೇಲೂರು ಮಠಕ್ಕೆ ಬಂದರು. ಸಂಘದಲ್ಲಿ ಅವರನ್ನು ಸದಾನಂದ ಎಂದು ಕರೆಯುವರು. ಆತ

ಆಡುತ್ತಿದ್ದ ಹರಕಲು ಮುರಕಲು ಇಂಗ್ಲೀಷ್ ಭಾಷೆಯಿಂದ ಆಗಿನ ಕಾಲ ದಲ್ಲಿ ಮಠದಲ್ಲಿ ಸನ್ಯಾಸಿಗಳು ಎಂತಹ ಜೀವನ ನಡೆಸುತ್ತಿದ್ದರು ಎಂಬುದನ್ನು ಊಹಿಸಬಹುದಾಗಿತ್ತು. ಆತ ತನ್ನ ಮನೆಯಿಂದ ಕಲ್ಕತ್ತೆಗೆ ಬರುವುದಕ್ಕೆ ಖರ್ಚನ್ನು ಸಂಪಾದಿಸಲು ಎರಡು ಮೂರು ತಿಂಗಳು ರೈಲ್ವೆಯಲ್ಲಿ ಕೆಲಸ ಮಾಡಬೇಕಾಯಿತು. ಅವರು ಮಠಕ್ಕೆ ಬರುವ ಸಮಯದಲ್ಲೆ ವಿವೇಕಾ ನಂದರು ಆಗಲೆ ಮಠವನ್ನು ಬಿಡುವುದರಲ್ಲಿದ್ದರು. ಆದರೆ ಶಿಷ್ಯನಿಗೋಸುಗ ಪಯಣವನ್ನು ಮುಂದೆ ಹಾಕಿದರು. ಅಂದು ಸಾಯಂಕಾಲವೇ ಹೊರಡ ಬೇಕಾಗಿದ್ದುದು ಒಂದು ವರುಷವಾದ ಮೇಲೆ ಅವರು ಹೊರಟರು. ಈ ಕಾಲವನ್ನು ಕುರಿತು ಆ ಶಿಷ್ಯರು ಗೌರವದಿಂದ "ವಿವೇಕಾನಂದರ ಸಂಘ ನನ್ನಿಂದ ಪ್ರಾರಂಭವಾಯಿತು" ಎಂದರು.

ಈ ಸಮಯದಲ್ಲಿ ಸ್ವಾಮಿಜಿ ಕೆಲವುವೇಳೆ ಇಪ್ಪತ್ತುನಾಲ್ಕು ಗಂಟೆ ಕೆಲಸಮಾಡುತ್ತಿದ್ದರು. ಹುಚ್ಚರಂತೆ ಯಾವಾಗಲೂ ಏನನ್ನಾದರೂ ಮಾಡುತ್ತಿರುವುದೇ. ಬೆಳಗಿನ ಜಾವ ಇನ್ನೂ ನಸುಗತ್ತಲಾಗಿರುವಾಗಲೇ ಎದ್ದು "ಶೃಣ್ವಂತು ಸರ್ವೇ ಅಮೃತಸ್ಯ ಪುತ್ರಾಃ" ಎಂದು ಹಾಡುತ್ತಾ ಎಲ್ಲರನ್ನೂ ಎಬ್ಬಿಸುತ್ತಿದ್ದರು. ಆಗ ಎಲ್ಲರೂ ಧ್ಯಾನಕ್ಕೆ ಏಳುತ್ತಿದ್ದರು. ಅನಂತರ ಭಜನೆ, ಸಂಭಾಷಣೆ, ಅಪರಾಹ್ಣದವರೆಗೆ, ಸ್ತೋತ್ರ ಶಾಸ್ತ್ರ ಪಾಠಗಳಾದ ಮೇಲೆ ಇತಿಹಾಸವನ್ನು ಕುರಿತು ಮಾತನಾಡುವರು. ಕೆಲವು ವೇಳೆ ಇಗ್ನೇಷಿಯಸ್ ಲಾಯಲಾ, ಜೋನ್ ಆಫ್ ಆರ್ಕ್, ಝಾನ್ಸಿರಾಣಿ ವಿಷಯವಾಗಿ ಮಾತನಾಡುವರು. ಸ್ವಾಮಿಜಿ ಫ್ರೆಂಚ್ ಕ್ರಾಂತಿಯ ಗ್ರಂಥದಿಂದ ಕೆಲವು ಭಾಗವನ್ನು ಓದಿ ಹೇಳುವರು. ಆಗ ಕಲ್ಪನಾಜಾಲ ದಲ್ಲಿ ಸಿಕ್ಕಿ ರಿಪಬ್ಲಿಕ್ಕಿಗೆ ಜಯವಾಗಲಿ ಎಂದು ಅದರಲ್ಲೆ ತನ್ಮಯರಾಗಿ ಹೋಗುತ್ತಿದ್ದರು. ಅವರು ಕೆಲವು ವೇಳೆ ಅಸಾಸಿಯ ಸಾಧುವಿನ ವಿಚಾರ ವನ್ನು ಮಾತನಾಡುತ್ತ ಭಾವೋದ್ದೀಪನವಾಗುವಂತೆ ಅವರು ಹೇಳುತ್ತಿದ್ದಂತೆ "ಮೃತ್ಯು ಸಹೋದರಿಯೆ ಸುಖಾಗಮನ ನಿನಗೆ" ಎನ್ನುತ್ತಿದ್ದರು. ಅಷ್ಟು ಹೊತ್ತಿಗೆ ಮಧ್ಯಾಹ್ನ ಒಂದೊ ಎರಡೊ ಗಂಟೆ ಆಗಿರುವಾಗ ಮಠದ ಪೂಜಾರಿ ಪರಿಚಾರಕ ಮತ್ತು ಅಡಿಗೆಯವರಾದ ರಾಮಕೃಷ್ಣಾನಂದಸ್ವಾಮಿ ಗಳು ಗುರುಭಾಯಿಗಳನ್ನು ಗದರಿಸುತ್ತಾ ಸ್ನಾನ ಮತ್ತು ಊಟಕ್ಕೆ ಏಳಿಸು ತ್ತಿದ್ದರು. ಇದಾದ ಮೇಲೆ ಪುನಃ ಗುಂಪು ಸೇರುತ್ತಿದ್ದಿತು. ಸಾಯಂ ಕಾಲ ಎರಡು ಗಂಟೆಗಳ ವರೆಗೆ ಭಜನೆ ಮತ್ತು ಪ್ರವಚನಾದಿಗಳಲ್ಲಿ ಕಾಲ

ಕಳೆಯುತ್ತಿದ್ದರು. ಮಂಗಳಾರತಿ ಕೂಡ ಅವರ ತನ್ಮಯತೆಗೆ ಭಂಗ ತರು ತ್ತಿರಲಿಲ್ಲ. ಅದಾದನಂತರ ಭಜನೆ, ಶ್ರೀ ಗುರುದೇವರ ವಿಚಾರವಾಗಿ ಸಂಭಾಷಣೆ ಜರಗುತ್ತಿತ್ತು. ಅನಂತರ ಪುನಃ ಧ್ಯಾನದಲ್ಲಿ ಮಗ್ನರಾಗುತ್ತಿ ದ್ದರು. ಮನೆಯ ಮಾಳಿಗೆಯ ಮೇಲೆ ಅರ್ಧರಾತ್ರಿವರೆವಿಗೂ "ಜಯ ಸೀತಾ ರಾಮ್" ಎಂದು ಭಜನೆಮಾಡುತ್ತಿದ್ದರು. ಎಲ್ಲಾ ಧರ್ಮದ ಪವಿತ್ರ ದಿನ ಗಳಲ್ಲಿ ಆಯಾ ಧರ್ಮಕ್ಕೆ ಸೇರಿದ ಪುಣ್ಯದಿನಗಳನ್ನು ಆಚರಿಸುತ್ತಿದ್ದರು. ಕ್ರಿಸ್‌ಮಸ್ ದಿನಗಳಲ್ಲಿ ರಾತ್ರಿ ಧೂನಿಯ ಸುತ್ತಲೂ ಕುಳಿತು ರಾತ್ರಿ ಕಾವಲು ಕಾಯುತ್ತಿದ್ದ ಕುರುಬರ ಬಳಿಗೆ ಬಂದ ದೇವದೂತನ ವಿಷಯ ವನ್ನು ಮೆಲುಧನಿಯಲ್ಲಿ ಮಾತನಾಡುತ್ತಾ ಪ್ರಪಂಚದಲ್ಲಿ ಕ್ರಿಸ್ಥನ ಜನ್ಮದಿನ ಹಾಡಿದ ಮೊದಲನೇ (ಗ್ಲೋರಿಯಾ) ಹಾಡನ್ನು ಹಾಡುತ್ತಿದ್ದರು. ಅವರು ಗುಡ್‌ಫ್ರೈಡೆ ಆಚರಿಸಿದ ದಿನ ತುಂಬಾ ವಿಚಿತ್ರವಾಗಿದೆ. ಅಂದು ಹಲವು ಗಂಟೆಗಳು ಕ್ರಿಸ್ಥನ ಚಿಂತನೆಯಲ್ಲೆ ಕಾಲ ಕಳೆಯುತ್ತಾ ಭಾವೋದ್ದೀಪನ ಗೊಂಡರು. ಅಂದು ಉಪವಾಸ ಮಾಡಿದರು. ಸ್ವಲ್ಪ ದ್ರಾಕ್ಷಿಯನ್ನು ತಂದು ಅದನ್ನು ಹಿಂಡಿ ರಸಮಾಡಿ ನೀರಿನೊಂದಿದೆ ಬೆರಸಿ, ಎಲ್ಲರೂ ಒಂದೇ ಬಟ್ಟ ಲಿಂದ ಅದನ್ನು ಕುಡಿಯಬೇಕೆಂಮ ಇದ್ದರು. ಮಠದವರು ಇದರಲ್ಲಿ ನಿರತರಾಗಿರುವಾಗ ಕ್ರಿಸ್ಥನ ಹೆಸರಿನಲ್ಲಿ ಯಾರೊ ಯೂರೋಪಿಯನ್ ಧ್ವನಿ ಬಾಗಿಲಿನಬಳಿ ಕೇಳಿ ಬಂತು. ಮಠದಲ್ಲಿರುವವರೆಲ್ಲ ಪರಮಾನಂದರಾಗಿ ಇದ್ದ ಸುಮಾರು ಹದಿನೈದು ಜನಗಳು ಅವನನ್ನು ಸುತ್ತುಗಟ್ಟಿ ಗುಡ್ ಫ್ರೈಡೆಯ ವಿಷಯವಾಗಿ ಕ್ರಿಸ್ಥನೊಬ್ಬನ ಬಾಯಿಯಿಂದಲೇ ಕೇಳಬೇಕೆಂದು ಅವನನ್ನು ಕೇಳಿಕೊಂಡರು. ಆದರೆ ಆತ ಸಾಲ್ವೇಷನ್ ಸೈನ್ಯಕ್ಕೆ ಸೇರಿದವ ನೆಂದೂ, ಗುಡ್ ಫ್ರೈಡೆ ವಿಷಯ ಅವನಿಗೇನೂ ಗೊತ್ತಿಲ್ಲವೆಂದೂ, ಜನರಲ್ ಭೂತ್ ಜನ್ಮದಿನ, ಇನ್ನು ಕೆಲವು ವಿಶೇಷ ದಿನಗಳು ಮಾತ್ರ ತನಗೆ ಗೊತ್ತು ಎಂದನು ಎಂದರು ಸ್ವಾಮಿ ಸದಾನಂದರು. ಅವರ ಬಾಯಿಂದ ಇದನ್ನು ಕೇಳುತ್ತಿದ್ದಾಗ ಅವರ ಕುಗ್ಗಿದ ಧ್ವನಿಯನ್ನು ಗಮನಿಸಿದರೆ ಅಂದು ಆತನ ಸುತ್ತ ನೆರೆದವರಿಗೆಲ್ಲಾ ನಿರಾಶೆಯಾಯಿತೆಂದು ಊಹಿಸಬಹುದು. ಮೊದಲು ಅವರಿಗೆ ತುಂಬಾ ಅಸಮಾಧಾನವಾಗಿ ಆತನ ಕೈಯಲ್ಲಿದ್ದ ಬೈಬಲ್ ಕಿತ್ತು ಕೊಂಡು ನೀನು ಇದನ್ನು ಇಟ್ಟುಕೊಳ್ಳುವುದಕ್ಕೆ ಯೋಗ್ಯನಲ್ಲ ಎಂದು ಹೊರಗೆ ಅಟ್ಟಿದರು. ಆದರೆ ಮತ್ತೊಬ್ಬರು ಬೇರೊಂದು ಬಾಗಿಲಿನಿಂದ

ಹೋಗಿ ಅವನನ್ನು ಮಠದೊಳಗೆ ಕರೆತಂದು ಊಟವಿಟ್ಟು ಆತನ ಪುಸ್ತಕ ವನ್ನು ಕೊಟ್ಟು ಕಳುಹಿಸಿದರಂತೆ.

"ಆಗ ಬೇಸಗೆಯ ಕಾಲ. ಒಂದು ನಿಮಿಷವೂ ಬಿಡುವು ಇರುತ್ತಿರಲಿಲ್ಲ. ಹೊರಗಿನವರು ಬಂದು ಹೋಗುತ್ತಿದ್ದರು. ಪಂಡಿತರು ಚರ್ಚೆಮಾಡು ತ್ತಿದ್ದರು. ಆದರೆ ವಿವೇಕಾನಂದರು ಮಾತ್ರ ಒಂದು ನಿಮಿಷವೂ ಸುಮ್ಮನೆ ಇರುತ್ತಿರಲಿಲ್ಲ. ಕೆಲವು ವೇಳೆ ಒಬ್ಬರೇ ಇದ್ದಾಗ ಅತ್ತಿಂದಿತ್ತ ತಾರಾಡುತ್ತಾ "ಹರಿ ಭೋಲ್, ಜಯ ಮಾ" ಎಂದು ಉಚ್ಚರಿಸುತ್ತಿದ್ದರು. ಹೀಗೆ ಅವರು ಮುಂದೆ ಸಾಧಿಸುವುದಕ್ಕೆ ಅಣಿಯಾಗುತ್ತಿದ್ದರು. ನಾನು ಎಲ್ಲವನ್ನೂ ದೂರ ದಲ್ಲಿ ನಿಂತು ಕೇಳುತ್ತಿದ್ದೆ. ಬಿಡುವಾದಾಗ ಸ್ವಾಮಿಜಿಯವರನ್ನು ಏನು ಊಟಕ್ಕೆ ಏಳುವುದಿಲ್ಲವೆ ಎಂದಾಗ ಅವರು ಸುಮ್ಮನೆ ಹಾಸ್ಯವಾಗಿ ಏನನ್ನೊ ಹೇಳಿಬಿಡುತ್ತಿದ್ದರು?" ಇದನ್ನು ವಿವರಿಸುತ್ತಿದ್ದಾಗ ಸದಾನಂದರ ಮುಖ ಕಾಂತಿಯಿಂದ ಅರಳುತ್ತಿತ್ತು. ಕೆಲವು ವೇಳೆ ಅಡಿಗೆ ಮಾಡುವ ಕಾಲದಲ್ಲಿ, ಪೂಜೆಗೆ ಅಣಿಮಾಡುವ ಕಾಲದಲ್ಲಿ ಮಾತುಕತೆ ಪ್ರಾರಂಭವಾಗುತ್ತಿತ್ತು. ಮೇಲಿನ ಕೆಲಸದಲ್ಲಿ ತಾರತಮ್ಯವಿಲ್ಲದೆ ಎಲ್ಲರೂ ಭಾಗಿಗಳಾಗುತ್ತಿದ್ದರು. ಅಂದು ಅವರು ಅಷ್ಟೊಂದು ಕಷ್ಟದಲ್ಲಿದ್ದರೂ ಅನೇಕ ಜನ ಅವರ ಬಳಿಗೆ ಊಟಕ್ಕೆ ಬರುತ್ತಿದ್ದರು. ಅವರಿಗೇ ಸಾಕಷ್ಟು ಇರುತ್ತಿರಲಿಲ್ಲ. ಮೈಮೇಲೆ ಹೊದೆದುಕೊಂಡು ಹೊರಗೆ ಹೋಗಲು ಚೆನ್ನಾದ ಒಂದು ಜೊತೆ ಉತ್ತರೀಯ ಮಾತ್ರ ಇತ್ತು. ಅದನ್ನು ಹೊರಗೆ ಒಂದು ದಾರದ ಮೇಲೆ ಇಡುತ್ತಿದ್ದರು. ಯಾರು ಹೊರಗೆ ಹೋಗುತ್ತಿದ್ದರೊ ಅವರು ಅದನ್ನು ಹೊದೆದುಕೊಂಡು ಹೋಗುತ್ತಿದ್ದರು. ಅವರಿಗೆ ಬೇರೆ ಉಪಾಯವೇ ಇರಲಿಲ್ಲ. ಆದರೂ ಬಡವರಿಗೆ ಅತಿಥಿಗಳಿಗೆ ಎಲ್ಲಿಂದಲೋ ಆಹಾರವನ್ನು ಒದಗಿಸುತ್ತಿದ್ದರು. ಮತ್ತೆ ಕೆಲವರು ಪಾಠ ಕಲಿಯುವುದಕ್ಕೊ ಅಥವಾ ಮತ್ತಾವುದಾದರೂ ಸಹಾಯಕ್ಕೊ ಬರುತ್ತಿದ್ದರು. ಸ್ವಲ್ಪ ಹಣವನ್ನು ಚಂದಾ ಎತ್ತಿ ನೂರಾರು ಪ್ರತಿ ಭಗವದ್ಗೀತೆ ಮತ್ತು ಇಮಿಟೇಷನ್ ಆಫ್ ಕ್ರೈಸ್ಟ್ (Imitation of Christ) ಪ್ರತಿಗಳನ್ನು ದಾನ ಮಾಡಿದರು. ಇವೆರಡು ಗ್ರಂಥಗಳೂ ಆಗ ಅವರ ಗೌರವಕ್ಕೆ ಪಾತ್ರವಾಗಿದ್ದುವು. ಹಲವು ವರುಷಗಳಾದ ಮೇಲೆ ಸ್ವಾಮಿಜಿ ಅವರು ತಮಗೆ ಥಾಮಸ್ ಎ. ಕೆಂಪೆಸ್ಸಿನ Imitation of Christ ಗ್ರಂಥದಲ್ಲಿ ಜ್ಞಾಪಕವಿರುವ ಏಕಮಾತ್ರ ವಾಕ್ಯವನ್ನು ಹೇಳಿದರು: "ಗುರುಗಳೆ, ನೀವೆಲ್ಲಾ ಸುಮ್ಮನಿರಿ! ಪ್ರವಾದಿಗಳೆ ನೀವು ಸುಮ್ಮನಿರಿ!

ಹೇ ಭಗವಾನ್, ನೀನೊಬ್ಬನೆ ನನ್ನೊಡನೆ ಮಾತನಾಡು'' ಈ ಗ್ರಂಥ ಕ್ರಮೇಣ ಇವರ ಸ್ಮೃತಿಪಥದಲ್ಲಿ ನಿಂತರೂ ಶ್ರೀರಾಮಕೃಷ್ಣರ ಹಿಂದೂ ಮಕ್ಕಳಲ್ಲಿ ಭಗವದ್‌ಗೀತೆಯ ಸೌಂದರ್ಯ ಮತ್ತು ಅದರಲ್ಲಿರುವ ಶಕ್ತಿ ಕ್ರಮೇಣ ಪ್ರಾಮುಖ್ಯವಾಗುತ್ತ ಬಂದಿತು.

ಹೀಗೆ ಹನ್ನೆರಡು ತಿಂಗಳು ಕಳೆಯಿತು. ಅನಂತರ ಸ್ವಾಮಿಜಿ ಪವಹಾರಿಬಾಬರನ್ನು ನೋಡಲು ಘಾಜಿಪುರಕ್ಕೆ ಹೊರಟುಹೋದರು. ಸ್ವಾಮಿಜಿ ಅವರು ಪವಹಾರಿಬಾಬ ಅವರಿಗೆ ಪರಮಹಂಸರ ಅನಂತರದ ಸ್ಥಾನವನ್ನು ಕೊಟ್ಟಿದ್ದರು. ಕೆಲವು ತಿಂಗಳಾದ ಮೇಲೆ ತಾವು ಅಲ್ಲಿ ಪಡೆದ ಅನುಭವವನ್ನು ಇತರರಿಗೂ ತಿಳಿಯಪಡಿಸುವುದಕ್ಕೆ ಬಂದರು. ತಕ್ಷಣವೆ ಯೋಗಾನಂದರೆಂಬ ಗುರುಭಾಯಿಗಳೊಬ್ಬರು ಅಲಹಾಬಾದಿನಲ್ಲಿ ಸಿಡುಬಿನಿಂದ ನರಳುತ್ತಿರುವರೆಂಬ ಸುದ್ದಿ ಬಂದಿತು. ಸ್ವಾಮಿಜಿ ಅವರೊಡನೆ ಕೆಲವರು ಯೋಗಾನಂದರ ಶುಶ್ರೂಷೆಗೆಂದು ಹೋದರು.

ಸದಾನಂದರು ಹೇಳುವಂತೆ ಅಲಹಾಬಾದಿನಲ್ಲಿ ಹಲವುದಿನ ಧಾರ್ಮಿಕ ಚರ್ಚೆಯಲ್ಲಿ ಕಾಲ ಕಳೆಯಿತು. ಯೋಗಾನಂದರ ಖಾಯಿಲೆ ಕೇವಲ ಒಂದು ನಿಮಿತ್ತಮಾತ್ರವಾಗಿತ್ತೆಂದು ತೋರುವುದು. ಇಡೀ ಊರಿಗೆ ಊರೇ ಇವರನ್ನು ನೋಡುವುದಕ್ಕೆ ತಂಡೋಪತಂಡವಾಗಿ ಬಂದು ಹೋಗುತ್ತಿತ್ತು. ಒಂದು ಗುಂಪಾದ ಮೇಲೆ ಮತ್ತೊಂದು ಗುಂಪು ಬಂದು ಹೋಗುತ್ತಿತ್ತು. ಹಗಲು ರಾತ್ರಿ ಹೀಗೆಯೆ. ಸ್ವಾಮಿಜಿಯವರು ಯಾವಾಗಲೂ ದಿವ್ಯ ಭಾವದಲ್ಲಿ ಉನ್ಮತ್ತರಾಗಿದ್ದರು ಆ ಕಾಲದಲ್ಲಿ. ಆಗಲೆ ಒಬ್ಬ ಮಹಮ್ಮದೀಯ ಪರಮಹಂಸರನ್ನು ಸ್ವಾಮಿಜಿ ನೋಡಿದರು. ಅವರ ಪ್ರತಿಯೊಂದು ಚಹರೆಯೂ ಪರಮಹಂಸರೆಂಬುದಕ್ಕೆ ನಿದರ್ಶನವಾಗಿತ್ತು. ಇದೊಂದು ಮಹಾ ಪವಿತ್ರದಿನವಾಗಿತ್ತು. "ಕೆಲವು ವೇಳೆ ದಿಗಂಬರನಾಗಿ, ಕೆಲವು ವೇಳೆ ಉನ್ಮತ್ತನಾಗಿ, ಒಮ್ಮೆ ಪಂಡಿನಂತೆ, ಮತ್ತೊಮ್ಮೆ ಮೂಢನಂತೆ, ಒಮ್ಮೆ ಕ್ರಾಂತಿಕಾರನಂತೆ, ಮತ್ತೊಮ್ಮೆ ಸಾಧು ಪುರುಷನಂತೆ ಪರಮಹಂಸರು ಪ್ರಪಂಚದಲ್ಲಿ ಸಂಚರಿಸುವರು'' ಎಂಬ ಶಂಕರಾಚಾರ್ಯರ ವಿವೇಕ ಚೂಡಾಮಣಿಯ ಶ್ಲೋಕವನ್ನು ಹೇಳುತ್ತ ರಾತ್ರಿಯೆಲ್ಲಾ ಅದರ ವಿಷಯವನ್ನು ಕುರಿತು ಚಿಂತಿಸುತ್ತಿದ್ದರು. ಹೀಗೆ ಎರಡುವಾರಗಳು ಕಳೆದ ವಂತೆ. ಅನಂತರ ಪಂಗಡದವರೆಲ್ಲಾ ಇಬ್ಬರು ಮೂವರು ಜನಗಳಿಗೆ ಒಂದೊಂದು ಗುಂಪಾಗಿ ಕ್ರಮೇಣ ಗಂಗಾನದೀತೀರದಲ್ಲಿದ್ದ ತಮ್ಮ ಬಾರಾ

ನಗರ ಮಠಕ್ಕೆ ಹಿಂತಿರುಗಿದರು. ಈಗೊಂದು ಪ್ರಸಂಗ ಜರುಗಿತು. ಅದೇ ೧೮೯೦ರಲ್ಲಿ ವಿವೇಕಾನಂದರು ಗುರುಭಾಯಿಗಳಿಂದ ದೂರವಾದುದು. ೧೮೯೭ರಲ್ಲಿ ತಮ್ಮ ಪ್ರಖ್ಯಾತ ದಿಗ್ವಿಜಯವನ್ನು ಗಳಿಸಿದ ಮೇಲೆಯೇ ಅವರು ಪುನಃ ಹಿಂತಿರುಗಿ ಬಂದದ್ದು.

ಈ ವೇಳೆಗೆ ಸ್ವಾಮಿಜಿ ಅಖಂಡಾನಂದರೊಡನೆ ಹೊರಟರು. ಟಿಬೆಟ್ಟಿಗೆ ಹೋದಕಾಲದಲ್ಲಿ ಆಲ್ಮೋರಾದಲ್ಲಿ ತಮಗೆ ಪರಿಚಿತರಾದ ಭಕ್ತರೊಬ್ಬರ ಮನೆಗೆ ಅಖಂಡಾನಂದರು ಸ್ವಾಮಿಜಿಯವರನ್ನು ಕರೆದುಕೊಂಡು ಹೋದರು. ಒಂದು ದಿನ ಸ್ವಾಮಿಜಿ ಹಿಮಾಲಯ ಬೆಟ್ಟವನ್ನು ಹತ್ತುತ್ತಿದ್ದಾಗ ಹಸಿವಿನಿಂದ ಪ್ರಜ್ಞಾಹೀನರಾಗಿ ಬಿದ್ದರು. ಆಗ ಮಹಮ್ಮದೀಯನೊಬ್ಬನು ಅವರಿಗೆ ಸೌತೇಕಾಯನ್ನು ಕೊಟ್ಟು ಉಪಚರಿಸಿದ ಮೇಲೆ ಪುನಃ ಜೀವ ಬಂದಂತಾಯಿತು. ಒಂದೇ ಸಮನಾಗಿ ಊಟವಿಲ್ಲದೆ ಎಷ್ಟು ದಿನಗಳು ಇದ್ದರೊ ನನಗೆ ಗೊತ್ತಿಲ್ಲ. ಆ ಸಮಯದಲ್ಲಿ ಸ್ವಾಮಿಜಿ ಒಂದು ವ್ರತವನ್ನು ಆಚರಿಸುತ್ತಿದ್ದರು. ಯಾರನ್ನೂ ಊಟಾದಿಗಳಿಗೆ ಕೇಳುತ್ತಿರಲಿಲ್ಲ. ಈ ಕಾಲದಲ್ಲಿ ಅವರ ಪರಿಚಯವಿದ್ದ ಒಬ್ಬರು, ಊಟವಿಲ್ಲದ ದೀರ್ಘಕಾಲವೆಷ್ಟು ಎಂದು ಕೇಳಿದಾಗ, ಸ್ವಾಮಿಜಿ ಅವರು, ಐದು ದಿನಗಳು ಎಂದು ಉತ್ತರವಿತ್ತರಂತೆ.

ಇದಾದನಂತರ ಇವರ ಪರ್ಯಟನೆಯ ವಿವರಗಳು ನಮಗೆ ದೊರಕುವುದಿಲ್ಲ. ಅಪರೂಪವಾಗಿ ಕಾಗದ ಬರೆಯುತ್ತಿದ್ದರು. ಆದರೆ ಗುರುಭಾಯಿಗಳೆ ಸಂಚಾರದಲ್ಲಿ ನಿರತರಾಗಿದ್ದರು. ಇದನ್ನು ಹೇಳುವವರು ಸ್ವಾಮಿಜಿ ಹೊರಟುಹೋದ ಮೇಲೆ ನಮ್ಮ ಜೀವನ ಸಪ್ಪೆಯಾಯಿತು ಎನ್ನುವರು. ಅವರಿದ್ದ ಮೊದಲ ಮನೆಯನ್ನು ರಿಪೇರಿ ಮಾಡಬೇಕಾಗಿದ್ದುದರಿಂದ ಬಿಡಬೇಕಾಯಿತು. ಆದರೆ ಇವರಲ್ಲಿ ರಾಮಕೃಷ್ಣಾನಂದರೆಂಬುವರೊಬ್ಬರು ಮಾತ್ರ ಶ್ರೀರಾಮಕೃಷ್ಣರ ಅವಶೇಷಗಳಿಂದ ಅಗಲಿ ಇರಲು ಒಪ್ಪಲಿಲ್ಲ. ಮಳೆ ಬರಲಿ, ಬಿಸಿಲು ಬರಲಿ, ಅವರ ಅವಶೇಷವಿದ್ದ ಕಡೆ ಒಂದು ಛಾವಣಿ ಮಾಡಿ ತಾನಿರುವೆ ಎಂದು ವಜ್ರಸಂಕಲ್ಪ ತೊಟ್ಟರು. ಆಗ ಇತರ ಗುರುಭಾಯಿಗಳೆಲ್ಲಾ ಪೂಜಾಮಂದಿರದಲ್ಲಿ ಪುನಃ ನೆರೆದರು. ಆಗ ಇವರು, ನಿರ್ಮಲಾನಂದ ಮತ್ತು ಹೊಸದಾಗಿ ಸೇರಿದ "ನುಸುರೆ ತಿಕ್ಕುವವನು" ಪ್ರೇಮಾನಂದರಿಗೆ ಸೇರಿದ ಒಂದು ಮನೆಗೆ ಹೋದರು. ಅದು ದಕ್ಷಿ

ಣೇಶ್ವರಕ್ಕೆ ಸಮೀಪದಲ್ಲೇ ಇತ್ತು. ಮೊದಲು ಬಾರಾನಗರದಲ್ಲಿದ್ದ ಮಠ ವನ್ನು ಆಲಂಬಜಾರ್ ಮಠ ಎಂದು ಕರೆಯುತ್ತಾರೆ.

ಆಗ ಅಖಂಡಾನಂದರು ತಪ್ಪಿಸಿಕೊಂಡುಹೋದ ತಮ್ಮ ನಾಯಕ ನನ್ನು ಹುಡುಕಿಕೊಂಡು ಹೋಗುತ್ತಿದ್ದರು. ಮಧ್ಯೆ ಮಧ್ಯೆ ಸ್ವಾಮಿಜಿ ಯಾವುದೊ ಊರಿನಲ್ಲಿರುವರೆಂಬುದನ್ನು ಕೇಳಿ ಅಲ್ಲಿಗೆ ಬರುತ್ತಿದ್ದರು. ಅಲ್ಲಿಗೆ ಅವರು ಬರುವುದರೊಳಗೆ ಸ್ವಾಮಿಜಿ ಅಲ್ಲಿಂದ ಪರಾರಿಯಾಗಿರುತ್ತಿದ್ದರು. ಅವರ ಸಂಚಾರದ ಸುಳಿವನ್ನೇ ತಿಳಿಸುತ್ತಿರಲಿಲ್ಲ. ಒಂದುಸಲಿ ಸ್ವಾಮಿ ತ್ರಿಗುಣಾತೀತರು ಗುಜರಾತಿನಲ್ಲಿದ್ದಾಗ ತೊಂದರೆಗೆ ಒಳಗಾದರು. ಆಗ ಯಾರೊ ಬಂಗಾಳಿ ಸಾಧು ಒಬ್ಬ ಮುಖ್ಯ ಮಂತ್ರಿಗಳೊಡನೆ ಇರುವನು; ನೀವು ಅವನ ಬಳಿಗೆ ಹೋದರೆ ಸಹಾಯ ಸಿಕ್ಕೀತು ಎಂದು ಹೇಳಿದರು. ಅವರಿಗೆ ಹೇಳಿಕಳುಹಿಸಿದರು. ಕಂಡಾಗ ಅವರೇ ವಿವೇಕಾನಂದರಾಗಿದ್ದರು. ಗುರುಭಾಯಿಗೆ ಬೇಕಾದ ಸಹಾಯವನ್ನು ನೀಡಿ ಆದ ಮೇಲೆ ಅವರಿಗೆ ಹೊರಟುಹೋಗುವಂತೆ ಹೇಳಿ ತಾವು ಬೇರೆ ದಾರಿ ಹಿಡಿದರು. ಬುದ್ಧನ ಈ ಮಾತನ್ನು ಅವರು ಪದೇಪದೇ ಹೇಳುತ್ತಿದ್ದರು: "ಸದ್ದುಗದ್ದಲಗಳಿಗೆ ಅಂಜದ ಕೇಸರಿಯಂತೆ, ಬಲೆಯಲ್ಲಿ ಬೀಳದೆ ಬೀಸುತ್ತಿರುವ ಗಾಳಿಯಂತೆ, ನೀರಿನಲ್ಲಿದ್ದರೂ ಅದರಿಂದ ನಿರ್ಲಿಪ್ತವಾದ ಕಮಲದೆಲೆಯಂತೆ ನೀನು ಖಡ್ಗಾಮೃಗದಂತೆ ಏಕಾಂಗಿಯಾಗಿ ಸಂಚರಿಸು". ಆಗಿನ ಕಾಲದಲ್ಲಿ ಸ್ವಾಮಿಜಿ ಅವರ ಆದರ್ಶವೇ ಇದಾಗಿತ್ತು.

ಸ್ವಾಮಿಜಿ ಆಲ್ಮೋರಾದಲ್ಲಿದ್ದಾಗ ಬಾಲ್ಯದಲ್ಲಿ ಇವರ ಪ್ರೀತಿಗೆ ಪಾತ್ರಳಾದ ತಂಗಿಯೊಬ್ಬಳು ದುರಂತಕ್ಕೆ ಈಡಾಗಿ ಕಾಲವಾದುದನ್ನು ಕೇಳಿ ದರು ಎಂದು ನಮಗೆ ಈಗ ಗೊತ್ತಾಗುವುದು. ಆಗ ತಾವು ಎಲ್ಲಿಗೆ ಹೋಗು ತ್ತೇವೆ ಎಂಬುದನ್ನು ಯಾರಿಗೂ ಹೇಳದೆ ಒಂದು ಪರ್ವತಪ್ರಾಂತ್ಯಕ್ಕೆ ಓಡಿದರು. ಹಲವು ವರುಷಗಳಾದ ಮೇಲೆ ಇವರ ಅನುಭವದ ಆಳವನ್ನು ಹೊಕ್ಕು ನೋಡಿದವರಿಗೆ ತಂಗಿಯ ಸಾವಿನಿಂದ ಹೃದಯದಲ್ಲಿ ಆದ ಗಾಯ ಇನ್ನೂ ಮಾಗಿರಲಿಲ್ಲವೆಂದು ತೋರುತ್ತಿತ್ತು. ಒಂದು ಕ್ಷಣವೂ ಅದರ ಯಾತನೆಯನ್ನು ಮರೆತಿರಲಿಲ್ಲ. ಭರತಖಂಡದಲ್ಲಿ ಸ್ತ್ರೀಯರಿಗೆ ವಿದ್ಯಾಭ್ಯಾಸ ವನ್ನು ಕೊಟ್ಟು ಅವರ ಸ್ಥಿತಿಯನ್ನು ಉತ್ತಮಪಡಿಸಬೇಕು ಎಂಬುದರ ಹಿಂದೆ ತಂಗಿಯ ವಿಷಯವಾಗಿ ಇವರು ಪಡುತ್ತಿದ್ದ ಯಾತನೆ ಸ್ವಲ್ಪಮಟ್ಟಿಗಾದರೂ ಕಾರಣವಾಗಿರಬಹುದೆಂದು ನಾವು ಯೋಚಿಸಬಹುದು.

ಆ ಸಮಯದಲ್ಲಿ ಸ್ವಾಮಿಜಿ ಪರ್ವತ ಪ್ರಾಂತ್ಯದ ಗ್ರಾಮವೊಂದರಲ್ಲಿದ್ದ ಗುಹೆಯೊಂದರಲ್ಲಿ ಕೆಲವು ತಿಂಗಳು ಇದ್ದರು. ಅವರ ಬಾಯಲ್ಲಿ ಎರಡು ವೇಳೆ ಮಾತ್ರ ಜೀವನದ ಈ ವಿಷಯಕ್ಕೆ ಸಂಬಂಧಪಟ್ಟುದನ್ನು ಕೇಳಿರುವೆನು ಒಂದುಸಲಿ ಅವರು "ಆಗಲೆ ನಾನು ಏನ್ನೋಂದು ಕೆಲಸಮಾಡಬೇಕಾಗಿದೆ ಎಂಬ ಭಾವನೆ ಎಂದಿಗಿಂತ ಹೆಚ್ಚಾಗಿ ನನ್ನ ಮನಸ್ಸನ್ನೆಲ್ಲಾ ಆಕ್ರಮಿಸಿತು. ಗವಿಯ ಆ ಜೀವನದಿಂದ ಬೈಲಿನ ಊರು ಕೇರಿಗಳಲ್ಲಿ ಸಂಚರಿಸುವುದಕ್ಕೆ ನನ್ನನ್ನು ನೂಕಿದಂತೆ ಇತ್ತು" ಎಂದರು. ಇನ್ನೊಂದು ಸಲ ಮತ್ತೊಬ್ಬರಿಗೆ, "ಸಾಧು ಎಲ್ಲಿರುವನು ಅದಲ್ಲ ಮುಖ್ಯ. ಗುಹೆಯಲ್ಲಿದ್ದರೂ ತನಗೆ ಊಟಕ್ಕೆ ಎಷ್ಟು ಚಪಾತಿ ತರುತ್ತಾರೆ ಎಂಬ ಯೋಚನೆಯಲ್ಲಿ ಒಬ್ಬ ಮಗ್ನನಾಗಿರಬಹುದು" ಎಂದು ಹೇಳಿದರು.

ಈ ಸಮಯದಲ್ಲೆ ಅಂತ ಕಾಣುವುದು ಆ ಉದ್ವೇಗಕ್ಕೆ ವಶರಾಗಿ ಕನ್ಯಾಕುಮಾರಿಯಲ್ಲಿ ಜಗನ್ಮಾತೆಯನ್ನು ಪೂಜಿಸುತ್ತೇನೆ ಎಂದು ಸಂಕಲ್ಪ ತೊಟ್ಟರು. ಈ ಹರಿಕೆ ಸಲ್ಲಿಸಲು ಬೇಕಾದಷ್ಟು ಕಾಲಾವಕಾಶವಿತ್ತು. ಆದರೂ ಇದನ್ನು ನೆರವೇರಿಸಲು ಕೇವಲ ಎರಡು ವರುಷಗಳು ಮಾತ್ರ ಹಿಡಿಯಿತು. ಪರಿವ್ರಾಜಕರಾಗಿ ಅಲೆಯುತ್ತಿದ್ದಾಗ ಇಂಡಿಯಾದೇಶದ ಪ್ರತಿಯೊಂದು ಭಾಗದ ಜೀವನದ ಪ್ರತ್ಯಕ್ಷ ಅನುಭವವನ್ನು ಪಡೆದರು. ಈ ಕಾಲಕ್ಕೆ ಸಂಬಂಧಪಟ್ಟ ಕಥೆಗಳಿಗೆ ಅಂತ್ಯವೇ ಇಲ್ಲ. ಆಗಿನ ಕಾಲದಲ್ಲಿ ಇವರಿಗೆ ಆದ ಸ್ನೇಹಿತರ ಸಂಖ್ಯೆ ಇನ್ನೂ ಕೊನೆಗೊಂಡಿಲ್ಲ. ಸಿಕ್ಕರ ಉಪದೇಶ ಪಡೆದರು. ಮಹಾರಾಷ್ಟ್ರಪಂಡಿತರಿಂದ ಮೀಮಾಂಸ ಶಾಸ್ತ್ರವನ್ನು ಓದಿದರು. ಜೈನ ಪಂಡಿತರಿಂದ ಅವರ ಶಾಸ್ತ್ರವನ್ನು ಓದಿದರು. ರಜಪುಟಾನದ ರಾಜರು ಇವರನ್ನು ಗುರುಗಳಂತೆ ಸ್ವೀಕರಿಸಿದರು. ಮಧ್ಯ ಪ್ರಾಂತ್ಯದಲ್ಲಿ ಕಸ ಗುಡಿಸುವವರ ಮನೆಯಲ್ಲಿ ಕೆಲವು ದಿನಗಳು ಇದ್ದರು. ಮಲಬಾರಿನಲ್ಲಿ ಬಳಕೆಯಲ್ಲಿರುವ ಜಾತಿಪದ್ಧತಿಯನ್ನು ಸ್ವತಃ ನೋಡಿದರು. ತಮ್ಮ ದೇಶದ ಪ್ರಕೃತಿ ಸೌಂದರ್ಯವನ್ನು ಮತ್ತು ಚಾರಿತ್ರಕ ದೃಷ್ಟಿಯಿಂದ ಘಟನಾರ್ಹವಾದ ಸ್ಥಳಗಳನ್ನು ನೋಡಿದರು. ಕೊನೆಗೆ ಕನ್ಯಾಕುಮಾರಿಗೆ ಹೋದರು. ಕನ್ಯಾಕುಮಾರಿ ತೀರದಲ್ಲಿ ಸಮುದ್ರದಲ್ಲಿದ್ದ ಒಂದು ದ್ವೀಪಕ್ಕೆ ದೋಣಿಯಲ್ಲಿ ಹೋಗಲು ಕಾಸಿಲ್ಲದೆ ಈಜಿಕೊಂಡು ಹೋದರು. ಹಿಂತಿರುಗಿ ಮದ್ರಾಸಿನಿಂದ ಉತ್ತರಕ್ಕೆ ಹೋಗುವಾಗಲೆ ಅವರಿಗೆ ಕೆಲವು ಮೆಚ್ಚಿನ

ಶಿಷ್ಯರಾದರು. ಇವರೇ ಸ್ವಾಮಿಜಿ ಅವರನ್ನು ಜೂನ್ ೧೮೯೩ ರಲ್ಲಿ ಅಮೇರಿಕಾದೇಶಕ್ಕೆ ಕಳುಹಿಸಲು ಕಾರಣರಾದರು.

ಸ್ವಾಮಿಜಿ ಅಮೇರಿಕಾದೇಶಕ್ಕೆ ಹೋಗಲು ಬಡಪೆಟ್ಟಿಗೆ ಒಪ್ಪಲಿಲ್ಲ. ಇವರನ್ನು ಕಳುಹಿಸುವುದಕ್ಕಾಗಿ ಸಂಗ್ರಹಿಸಿದ ಐನೂರು ರೂಪಾಯಿಗಳನ್ನು ಸ್ವಾಮಿಜಿ ದಾನಧರ್ಮಗಳಿಗೆ ಕೊಟ್ಟುಬಿಟ್ಟರು ಬೇಕಾದರೆ ವಿಧಿಯೇ ತಮ್ಮನ್ನು ಅಲ್ಲಿಗೆ ನೂಕಲಿ ಎಂದು. ಅವರ ಶಿಷ್ಯರು ಇದನ್ನು ಈಗಲೂ ಹೇಳುತ್ತಾರೆ. ಅವರು ಬೊಂಬಾಯಿಗೆ ಬಂದಾಗಲೂ ಅನಿಶ್ಚಿತರಾಗಿದ್ದರು. ಹೋಗಲೆ ಬೇಡವೆ ಎಂದು ಅನುಮಾನಿಸುತ್ತಿದ್ದಾಗ ಇವರ ಗುರುದೇವ ಪದೇ ಪದೇ ಇವರಿಗೆ ಗೋಚರಿಸಿ ಅಮೇರಿಕಾದೇಶಕ್ಕೆ ಹೋಗು ಎಂದಂತೆ ಆಯಿತಂತೆ. ಕೊನೆಗೆ ಶ್ರೀರಾಮಕೃಷ್ಣರ ಧರ್ಮಪತ್ನಿಯಾದ ಶಾರದಾದೇವಿಯವರಿಗೆ ಈ ವಿಷಯದಲ್ಲಿ ಅವರ ಅಭಿಪ್ರಾಯವನ್ನು ಕೇಳಿ ಅವರ ಆಶೀರ್ವಾದವನ್ನು ಕೋರಿದರು. ತಮ್ಮಿಂದ ಪುನಃ ಅವರಿಗೆ ಪತ್ರ ಬರುವವರೆಗೆ ಈ ಸುದ್ದಿಯನ್ನು ಯಾರಿಗೂ ಹೇಳದಂತೆ ಕೇಳಿಕೊಂಡರು. ಈ ಪತ್ರಕ್ಕೆ ಅವರಿಂದ ಉತ್ತರ ಬಂದ ಮೇಲೆ, ಅವರ ಪ್ರೋತ್ಸಾಹ ಮತ್ತು ಆಶೀರ್ವಾದ ಬಲ ದೊರೆತ ಮೇಲೆ, ಅವರು ನಿಜವಾಗಿ ಪಾಶ್ಚಾತ್ಯದೇಶಗಳಿಗೆ ಹೊರಟರು. ಇನ್ನು ಮೇಲೆ ಅವರು ವಿಧಿಗೆ ವಿರೋಧವಾಗಿ ಹೋಗುವಂತೆ ಇರಲಿಲ್ಲ. ಅನಾಮಧೇಯರಾಗಿರಬೇಕೆಂದು ಮಠವನ್ನು ಬಿಟ್ಟು ಹೊರಟವರು ಪರಿವ್ರಾಜಕರಾಗಿ ಊರಿಂದ ಊರಿಗೆ ಅಲೆಯುತ್ತಿದ್ದಾಗ ಹಲವು ಕಡೆ ತಮ್ಮ ಹೆಸರನ್ನು ಬದಲಾಯಿಸಿಕೊಳ್ಳುತ್ತಿದ್ದರು. ಚಿಕಾಗೊ ನಗರದಲ್ಲಿ ಪ್ರಥಮ ಭಾಷಣ ಮಾಡಿ ದಿಗ್ವಿಜಯವನ್ನು ಸಂಪಾದಿಸಿದ ರಾತ್ರಿ, ಈ ಖ್ಯಾತಿ, ಹೇಗೆ ಇವರು ಅನಾಮಧೇಯರಾಗಿ ಇರಬೇಕೆಂಬ ಆದರ್ಶಕ್ಕೆ ಭಂಗ ತಂದಿತೆಂದು ರಾತ್ರಿಯೆಲ್ಲ ಪರಿತಪಿಸಿದರಂತೆ ಎಂದು ಅನಂತರ ಸ್ವಾಮಿಜಿ ಯಾರಿಗೊ ಹೇಳಿದರು. ಇನ್ನು ಮೇಲೆ ಖ್ಯಾತಿಯ ಕೋರೈಸುವ ಸೂರ್ಯ ಇವರ ಮೇಲೆ ಪ್ರಕಾಶಿಸುತ್ತಿದ್ದನು. ಅಜ್ಞಾತನಾದ ಭಿಕಾರಿ ಇನ್ನು ಮೇಲೆ ಅಜ್ಞಾತನಾಗಿ ಇರಲು ಸಾಧ್ಯವಾಗಲಿಲ್ಲ.

ಭರತಖಂಡದ ಪರ್ಯಟನಕಾಲದಲ್ಲಿ ನನ್ನ ಗುರುದೇವನ ಮೂರನೆಯ ಮತ್ತು ಕೊನೆಯದಾದ ಶೀಲವನ್ನು ನೋಡುತ್ತೇವೆ. ಅನಂತರ ಇವರ ಮೂಲಕ ಯಾವ ಸತ್ಯ ವ್ಯಕ್ತವಾಯಿತೊ ಅದಕ್ಕೆ ಈ ಕಾಲ (ಪರಿವ್ರಾಜಕ

ಸಮಯ) ಏಕಕಾಲದಲ್ಲಿ ಉಜ್ವಲ ಉದಾಹರಣೆಯಂತೆ ಮತ್ತು ಸಾಕ್ಷಿ ಯಂತೆ ಇತ್ತು.

ಸ್ವಾಮಿಜಿ ಜೀವನದ ಮೇಲೆ ಪ್ರಭಾವವನ್ನು ಬೀರಿದ್ದು ನಿಸ್ಸಂಶಯ ವಾಗಿ ಈ ಮೂರು ವಿಷಯಗಳೆಂದು ನಾನು ಹೇಳಬಲ್ಲೆ. ಮೊದಲು ಇವರಿಗೆ ಇಂಗ್ಲೀಷ್ ಮತ್ತು ಸಂಸ್ಕೃತದಲ್ಲಿದ್ದ ಪಾಂಡಿತ್ಯ. ಎರಡನೆಯದೆ ಎಲ್ಲಾ ಶಾಸ್ತ್ರಗಳ ಸಾರದಂತೆ ಇದ್ದ ಅವಕ್ಕೆ ಜ್ವಲಂತ ಉದಾಹರಣೆಯಂತೆ ಇದ್ದ ಇವರ ಗುರುಗಳ ವ್ಯಕ್ತಿತ್ತ್ವ. ಮೂರನೆಯದೆ ಭರತಖಂಡ ಮತ್ತು ಅಲ್ಲಿಯ ಜನರ ಪ್ರತ್ಯಕ್ಷ ಅನುಭವ. ಮಹಿಮಾವಂತರಾದ ಇವರ ಗುರುಗಳೇ ಭರತಖಂಡದ ಸಂದೇಶದ ಸಂಕ್ಷಿಪ್ತ ಪ್ರತಿನಿಧಿಗಳಂತೆ ಇದ್ದರು. ಸ್ವಾಮಿಜಿ ಬೋಧನೆಗಳಲ್ಲಿ ಈ ಮೂರನ್ನು ಪ್ರತ್ಯೇಕವಾಗಿ ಕಂಡುಹಿಡಿಯಬಹುದು. ಪ್ರಪಂಚದ ಮುಂದೆ ವೇದಾಂತವನ್ನು ಸಾರುವಾಗ, ಅವರ ಜನರ ಆದರ್ಶ ವನ್ನು ಎತ್ತಿ ಹಿಡಿಯುವಾಗ ಬಹುಮಟ್ಟಿಗೆ ಹಿಂದಿನ ಕಾಲದ ಸಂಸ್ಕೃತ ಭಾಷೆಯಲ್ಲಿರುವ ವೇದೋಪನಿಷತ್ತಿನ ಮೂಲಕ ಅದನ್ನು ವಿವರಿಸುವರು. ಇಷ್ಟೊಂದು ಸ್ಪಷ್ಟವಾಗಿ ಅದನ್ನು ವಿವರಿಸಬೇಕಾದರೆ ಆ ಆದರ್ಶಗಳನ್ನು ಅದ್ಭುತವಾದ ತಮ್ಮ ಗುರುಗಳ ಒಂದು ಜೀವನದಲ್ಲಿ ನೋಡಿದ್ದ ಹಿನ್ನೆಲೆ ಇರಬೇಕು. ಭಕ್ತಿಯೋಗದ ವಿಷಯವನ್ನು ಮಾತನಾಡುವಾಗ "ಪ್ರೀತಿ ಯಿಂದ ಪ್ರಾರಂಭವಾಗಿ ಅದರಲ್ಲೆ ಮುಂದುವರಿದು, ಅದರಲ್ಲೆ ಪರ್ಯವ ಸಾನವಾಗುವುದು'' ಎನ್ನುವಾಗ ಅಥವಾ ಅವರು ಕರ್ಮರಹಸ್ಯವನ್ನು ವಿವರಿಸುವಾಗ, ಅಲ್ಲಿ ನನ್ನ ಗುರುದೇವನ ವ್ಯಕ್ತಿತ್ವವೇ ರೂಪುತಾಳಿದಂತೆ ಇದೆ. ಇಲ್ಲಿ ತಾವು ಶಿಷ್ಯರಾಗಿ ಯಾವ ಮಹಾತ್ಮನ ಚರಣಸನ್ನಿಧಿಯಲ್ಲಿ ಕಾಲಕಳೆದರೊ ಆ ಪವಿತ್ರವಾತಾವರಣವನ್ನು ವ್ಯಕ್ತಗೊಳಿಸಲು ಪ್ರಯತ್ನಿಸು ತ್ತಿರುವುದು ನಮಗೆ ಕಾಣುವುದು. ನಾವು ಚಿಕಾಗೊ ಸರ್ವಧರ್ಮ ಸಮ್ಮೇಳನದ ಉಪನ್ಯಾಸವನ್ನು ಓದಿದಾಗ ಅಥವಾ ಅಷ್ಟೇ ಪ್ರಮುಖವಾದ ಮದ್ರಾಸಿನ ಬಿನ್ನವತ್ತಳೆಗೆ ಉತ್ತರ ಅಥವಾ ೧೮೯೭ರಲ್ಲಿ ಲಾಹೋರಿನಲ್ಲಿ ಮಾಡಿದ ಉಪನ್ಯಾಸದಲ್ಲಿ ಹಿಂದೂಧರ್ಮದ ಸಾರವನ್ನು ಅದರ ಸಾಮಾನ್ಯ ತತ್ತ್ವಗಳನ್ನು ವಿವರಿಸಲು ಯತ್ನಿಸುವರು. ಈ ಉಪನ್ಯಾಸಗಳಲ್ಲಿ ಅವರೇ ಶ್ರಮಪಟ್ಟು ಸಂಗ್ರಹಿಸಿದ ಸ್ವಂತ ಅನುಭವ ವ್ಯಕ್ತವಾಗುವುದು. ಅವರ ಈ ಉಪನ್ಯಾಸಗಳ ಹಿಂದೆಲ್ಲ ಅವರ ಪರಿವ್ರಾಜಕ ದಿನಗಳ ಪರಿಣಾಮ ವಿದೆ. ಆ ದಿನದ ಕಥೆ ಬಹುಶಃ ಎಂದಿಗೂ ಕೊನೆಗಾಣದಂತೆ ಇದೆ. ಅವರ ದೇಶ

ಮತ್ತು ಜನಗಳ ಮೇಲೆ ಇವರಿಗೆ ಇದ್ದ ಗೌರವಕ್ಕೆ ಕಾರಣ ಕೇವಲ ಅಂಧ ವಿಶ್ವಾಸವಲ್ಲ, ಪ್ರತ್ಯಕ್ಷ ಅನುಭವ. ಇದೊಂದು ಹಲವು ಕಾಲದ ಅನುಭವ ದಿಂದ ಜನಿಸಿದ ಬಲಿಷ್ಠವಾದ ಆಶಾಭಾವನೆ. ಇದರಲ್ಲಿ ಹೊಸ ವಿಷಯ ಗಳನ್ನು ತಿಳಿಯಬೇಕೆಂಬ ಕಾತರವಿದೆ, ಎಂತಹ ಕಟುಟೀಕೆಯನ್ನೂ ಧೈರ್ಯ ವಾಗಿ ಎದುರಿಸಬಲ್ಲ ಸಾಹಸವಿದೆ. ಹಿಂದೂಧರ್ಮದ ಸಾಮಾನ್ಯ ತಳಹದಿ ಯನ್ನು ಕಂಡುಹಿಡಿಯುವುದಕ್ಕಾಗಿ ನಾನು ಇಡೀ ಜೀವನ ಪ್ರಯತ್ನ ಪಟ್ಟಿರುವೆ ಎಂದರು ಅವರೊಮ್ಮೆ. ಅದಕ್ಕಿಂತಲೂ ಹೆಚ್ಚಾಗಿ ಅವರಲ್ಲಿದ್ದ ಹಿಂದೂ ಜನಾಂಗದ ಪೂರ್ಣ ಪ್ರತ್ಯಕ್ಷ ಅನುಭವವೇ ಆ ಜಾಗ ಮತ್ತು ದೇಶಕ್ಕೆ ಸಂಬಂಧಪಟ್ಟ ಸರಳವಾದ ಹಳೆಯ ಭಾವನೆಗಳನ್ನು ಅಷ್ಟೊಂದು ದೊಡ್ಡದಾಗಿ ಕಾಣುವಂತೆ ಮಾಡಿದ್ದು. ಅವರ ದೇಶದಲ್ಲಿ ಅತ್ಯಂತ ಧೀಮಂತರೆನ್ನಿಸಿಕೊಂಡವರಿಗೆ ತಕ್ಕ ಪಾಂಡಿತ್ಯ ಅವರಲ್ಲಿತ್ತು. ಅದರೂ ಕೆಲವರು ಆಧುನಿಕರಂತೆ ಸನ್ಯಾಸಿಯನ್ನಾಗಲಿ, ರೈತನನ್ನಾಗಲಿ, ವಿಗ್ರ ಹಾರಾಧಕನನ್ನಾಗಲಿ ಜಾತಿಯ ಕಟ್ಟಿಗೆ ಒಳಗಾಗಿರುವ ನಿಕೃಷ್ಟದೃಷ್ಟಿಯಿಂದ ನೋಡಲಿಲ್ಲ. ಇವೆಲ್ಲ ಭರತಖಂಡವೆಂಬ ಬೃಹತ್ ಚಿತ್ರದ ಅಂಶ ಗಳಾಗಿದ್ದುವು. ಇವರು ಹಲವು ವರುಷಗಳಕಾಲ ಅವರೊಡನೆ ಒಂದಾಗಿದ್ದು ದರಿಂದಲೇ ವಿಶ್ವಗ್ರಾಸಿಯಾಗಿರುವಂತಹ ದೃಷ್ಟಿ ಸಾಧ್ಯವಾಯಿತು.

ಒಂದು ಮಹಾವ್ಯಕ್ತಿಯ ಜೀವನದಲ್ಲಿ ಮುಖ್ಯವಾಗಿರುವ ಭಾವನೆಗಳ ಆದಿಯನ್ನು ಹುಡುಕಿದರೆ ಮಾತ್ರ ಸಾಲದು ಆ ಜೀವನವನ್ನೆಲ್ಲಾ ಅಳೆಯ ಬೇಕಾದರೆ ಎಂಬುದನ್ನು ನಾವು ಗಮನಿಸಬೇಕು. ಒಬ್ಬರಿಗಿಂತ ಮತ್ತೊಬ್ಬ ರಿಗೆ ಪ್ರಪಂಚದ ದೃಶ್ಯ ಚೆನ್ನಾಗಿ ಕಾಣಬೇಕಾದರೆ ಹಾಗೆ ಕಾಣುವವನಲ್ಲಿ ಯಾವುದೊ ಒಂದು ವೈಶಿಷ್ಟ್ಯವಿದೆ, ಎಂದಿಗೂ ಬತ್ತದ ಶಕ್ತಿ ಚಿಲುಮೆ ಇದೆ ಎಂದು ಅರಿಯಬೇಕು. ವಿವೇಕಾನಂದರಿಗೆ ಜನ್ಮತಃ ತಾವು ಭರತಖಂಡದ ಉದ್ಧಾರಕ್ಕಾಗಿ ಬಂದವರು ಎಂಬ ಭಾವನೆ ಇದ್ದಿತೆಂದು ನಾನು ತಿಳಿದಿರು ವೆನು. ಪ್ರಾರಂಭದಲ್ಲಿ ಅಮೆರಿಕಾದೇಶದಲ್ಲಿ ಅವರಿಗೆ ಉತ್ತೇಜನ ಸಿಕ್ಕ ದಾಗಲೂ, ಬೇರೊಂದು ಊಟ ಎಲ್ಲಿ ಸಿಕ್ಕುವುದು ಎಂದು ಗೊತ್ತಿಲ್ಲದೇ ಇರು ವಾಗಲೂ, ಜನ್ಮತಃ ಬಂದ ಆತ್ಮಶ್ರದ್ಧೆ ಮಾತ್ರ ಎಂದಿಗೂ ಮಾಯವಾಗಿರ ಲಿಲ್ಲ. ಸ್ವಾಮಿಜಿ ಕೂಡ ಹೆಮ್ಮೆಯಿಂದ ಆ ಕಾಲವನ್ನು ಸ್ಮರಿಸಿಕೊಳ್ಳು ವರು. ಯಾವುದಾದರೊಂದು ಮಹಾ ಉದ್ದೇಶ ಸಾಧನೆಗಾಗಿ ಜನ್ಮ ತಾಳಿದ ಮಹಾ ವ್ಯಕ್ತಿಗಳಲ್ಲೆಲ್ಲಾ ಇಂತಹ ಒಂದು ಅದಮ್ಯಭರವಸೆ

ನಿಸ್ಸಂದೇಹವಾಗಿ ನೆಲಸಿರುವುದು. ಇದು ಜೀವಿಯ ಆಳದಲ್ಲಿರುವ ಮಾತಿನ ಮೂಲಕ ಒಣ್ಣಿಸಲಾರದ ಮಹಾತ್ಮ್ಯೆ. ಇದನ್ನು ಅವರ ಜೀವನ ಒಂದೇ ವ್ಯಕ್ತಗೊಳಿಸುವುದು. ಇಂತಹ ಒಂದು ಭಾವನೆಗೂ ಅಹಂಕಾರಕ್ಕೂ ಧೃವದಷ್ಟು ವ್ಯತ್ಯಾಸವಿರುವುದು ಹಿಂದೂಗಳಿಗೆ. ಇದನ್ನು ಸ್ವಾಮಿಜಿ ಅವರ ಜೀವನದಲ್ಲಿ ಅವರು ಪ್ರಥಮಬಾರಿ ಶ್ರೀರಾಮಕೃಷ್ಣರನ್ನು ಕಂಡಾಗ ನೋಡುವೆವು. ಮೊದಲು ಆ ವೃದ್ಧಗುರುಗಳು ಮೆಚ್ಚಿನ ಶಿಷ್ಯನನ್ನು ಹೊಗಳಿದಾಗ ಶಿಷ್ಯನಿಗೆ ಬೇಜಾರಾಗುವುದು ಅದನ್ನು ಕೇಳುವುದಕ್ಕೆ.

ಸ್ವಾಮಿಜಿಗೆ ಹದಿನೆಂಟು ವರುಷ ವಯಸ್ಸಾದಾಗ ಬ್ರಹ್ಮಸಮಾಜದವರೊಡನೆ ದಕ್ಷಿಣೇಶ್ವರಕ್ಕೆ ಬಂದಿದ್ದರು. ಇವರ ಅಸಾಧಾರಣ ಇಂಪಾದ ಕಂಠ ಮತ್ತು ಇವರಿಗಿದ್ದ ಸಂಗೀತದ ಅಭಿರುಚಿಯನ್ನು ಅರಿತ ಯಾರೊ ಒಬ್ಬರು ಇವರನ್ನು ಹಾಡುವಂತೆ ಕೇಳಿಕೊಂಡರು. ಅಯೋಧ್ಯನಾಥ್ ತಕ್ರಾಸಿ ಎಂಬುವನು ರಚಿಸಿದ ಒಂದು ಹಾಡನ್ನು ಇವರು ಹಾಡಿದರು. "ಪವಿತ್ರತೆ ಎಂಬ ನಿಧಿಯನ್ನು ನಿನ್ನ ಹೃದಯದಲ್ಲಿ ರಕ್ಷಿಸು" ಎಂದು ಹಾಡು ಕೊನೆಗೊಂಡಿತು.

ಶ್ರೀರಾಮಕೃಷ್ಣರಿಗೆ ಸುಳಿವನ್ನು ಕೊಡುವುದಕ್ಕೆ ಇದೇ ಸಾಕಾಗಿತ್ತು. "ಮಗು, ಮಗು, ನಾನು ನಿನಗಾಗಿ ಕಳೆದ ಮೂರು ವರುಷಗಳಿಂದಲೂ ಕಾಯುತ್ತಿದ್ದೆ. ನೀನು ಕೊನೆಗೊಮ್ಮೆ ಬಂದೆಯಾ!" ಎಂದರು. ಅಂದಿನಿಂದ ಶ್ರೀರಾಮಕೃಷ್ಣರು 'ನರೆನ್'ಗೆ ಎಂದೆಂದಿಗೂ ವಿಧೇಯರಾದ ತರುಣ ಗುರುಭಾಯಿಗಳನ್ನು ತರಬೇತು. ಮಾಡಲು ಪ್ರಯತ್ನಿಸಿದರು. ಸ್ವಾಮಿಜಿ ಅವರನ್ನು 'ನರೆನ್' ಎಂದು ಕರೆಯುತ್ತಿದ್ದರು. ಗುರುಗಳಿಗೆ ನರೇಂದ್ರನ ಭವಿಷ್ಯವನ್ನು ಎಷ್ಟು ಕೊಂಡಾಡಿದರೂ ಸಾಲದು, ಅವನ ಪ್ರತಿಭೆಯನ್ನು ಎಷ್ಟು ಹೊಗಳಿದರೂ ಸಾಲದು. ಹಲವು ಪ್ರಖ್ಯಾತ ಪುರುಷರಲ್ಲಿ ಎರಡೊ ಮೂರೊ ಅಥವಾ ಹೆಚ್ಚು ಎಂದರೆ ಹತ್ತೊ ಹನ್ನೆರಡೊ ಒಳ್ಳೆಯ ಗುಣಗಳಿದ್ದರೆ ನರೇಂದ್ರನಲ್ಲಿ ಅಂತಹ ಸಹಸ್ರ ಗುಣಗಳಿವೆ ಎನ್ನುತ್ತಿದ್ದರು. ಅವರು ನಿಜವಾಗಿಯೂ ಸಹಸ್ರದಳದ ಪದ್ಮದಂತೆ. ಕೆಲವು ಮಹಾತ್ಮರಲ್ಲಿ ಎರಡು ಶಿವನ ಲಕ್ಷಣಗಳಿವೆ ಎಂದು ಶ್ರೀರಾಮಕೃಷ್ಣರು ಒಪ್ಪಿಕೊಂಡರೂ ನರೇನ್‌ನಲ್ಲಿ ಅಂತಹ ಹದಿನೆಂಟಾದರೂ ಇವೆ ಎನ್ನುತ್ತಿದ್ದರು.

ಶ್ರೀರಾಮಕೃಷ್ಣರು ಜನರ ಕಾಪಟ್ಯವನ್ನು ತಕ್ಷಣ ಕಂಡುಹಿಡಿಯುತ್ತಿದ್ದರು. ಅವರು ಮುಟ್ಟಿದರೆ ಇವರಿಗೆ ದಾರುಣ ವ್ಯಥೆಯಾಗುತ್ತಿತ್ತು.

ಒಂದು ಸಲ ಅಂತಹವನೊಬ್ಬನು ಕೊಡಲು ಬಂದ ದಾನವನ್ನು ಇವರು ಸ್ವೀಕರಿಸಲಿಲ್ಲ. ಈತ ಹೊರಗೆ ನೋಡುವುದಕ್ಕೆ ಎಷ್ಟೇ ಚೆನ್ನಾಗಿ ಕಂಡರೂ ಒಳಗೆ ಕೊಳೆತು ನಾರುತ್ತಿದೆ ಎಂದರು. ಅವನು ಎಷ್ಟೇ ಪ್ರಾಯಶ್ಚಿತ್ತ ಗಳನ್ನು ಮಾಡಿಕೊಂಡರೂ ಅವನ ಸಂಪರ್ಕವೇ ಒಬ್ಬನನ್ನು ಪಾಪಿಯನ್ನಾಗಿ ಮಾಡುವುದು. ಆದರೆ ನರೇಂದ್ರನಾದರೊ ಇಂಗ್ಲೀಷರ ಹೊಟೇಲಿನಲ್ಲಿ ದನದ ಮಾಂಸವನ್ನು ತಿಂದರೂ ಪುಣ್ಯಾತ್ಮನಾಗಿಯೇ ಉಳಿಯುವನು. ಅವನ ಸ್ಪರ್ಶವೇ ಇತರರನ್ನು ಪವಿತ್ರರನ್ನಾಗಿ ಮಾಡುವುದು ಎಂದರು. ಇಂತಹ ಉಪದೇಶಗಳಿಂದ ಅನಂತರ ಯಾರು ಇವರನ್ನು ಹಿಂಬಾಲಿಸಬೇಕಾಗಿದೆಯೊ ಅವರಿಗೂ ಮತ್ತು ಇವರಿಗೆ ನಾಯಕನಾಗಬೇಕಾದಂತಹ ಶಿಷ್ಯನಿಗೂ ಎಂದೆಂದಿಗೂ ಭಿನ್ನವಾಗದ ಆಧಾರಸ್ತಂಬದಂತೆ ಇರುವ ಅಭೇದ್ಯವಾದ ಆದರ್ಶಗಳ ಮೇಲೆ ಅವರ ಜೀವನವನ್ನು ರೂಢಿಸಿದರು.

ಹೊಸ ಶಿಷ್ಯರು ತಮ್ಮ ಸಮೀಪಕ್ಕೆ ಬಂದರೆ ಅವರ ದೇಹ ಮತ್ತು ಮನಸ್ಸನ್ನು ಚೆನ್ನಾಗಿ ಪರೀಕ್ಷಿಸುವುದು ಅವರ ಅಭ್ಯಾಸವಾಗಿತ್ತು. ಹೇಗೆ ಯಂತ್ರದ ಪ್ರತಿಯೊಂದು ಭಾಗವೂ ಕುಶಲಿಯಾದ ಯಾಂತ್ರಿಕನಿಗೆ ಅದು ಯಾವ ಕೆಲಸಕ್ಕೆ ಇದೆ ಎಂದು ಗೊತ್ತಾಗುವುದೊ ಹಾಗೆಯೇ ದೇಹದ ಅಂಗೋಪಾಂಗಗಳು ಕೂಡ ಆಯಾ ದೇಹಧಾರಿಯ ಶೀಲವನ್ನು ವ್ಯಕ್ತ ಗೊಳಿಸಿತ್ತು ಶ್ರೀರಾಮಕೃಷ್ಣರಿಗೆ. ಪರೀಕ್ಷಿಸುವಾಗ ಶಿಷ್ಯನನ್ನು ಸುಪ್ತಾ ವಸ್ಥೆಗೆ ಕಳುಹಿಸಿ ಅಲ್ಲಿ ಅವನ ಮನಸ್ಸಿನ ಆಳದಲ್ಲಿರುವ ವಿಷಯಗಳನ್ನು ತಿಳಿಯುತ್ತಿದ್ದರು. ಕೆಲವು ಪ್ರಮುಖ ಶಿಷ್ಯರು ಈ ಸ್ಥಿತಿಯಲ್ಲಿರುವಾಗ ಅವರ ವಿಷಯವನ್ನು ಹೇಳುವುದಕ್ಕೆ ಅವರಿಗೇ ಅವಕಾಶಕೊಡುತ್ತಿದ್ದರು. ಸಾಮಾನ್ಯರಿಗೆ ಪ್ರಶ್ನೆಗಳನ್ನು ಹಾಕಿ ಅವರಿಂದ ವಿಷಯಗಳನ್ನು ತಿಳಿಯು ತ್ತಿದ್ದರು. ಹೀಗೆ ನರೇಂದ್ರನನ್ನು ಪರೀಕ್ಷೆ ಮಾಡಿ ನೋಡಿಯಾದ ಮೇಲೆಯೇ, "ನರೇಂದ್ರನಿಗೆ ತಾನು ಯಾರು ಎಂದು ಗೊತ್ತಾಗುವುದೋ ಅಂದು ದೇಹದಲ್ಲಿ ಮತ್ತೊಂದು ಕ್ಷಣವೂ ಜಾಸ್ತಿ ಇರಬಯಸುವುದಿಲ್ಲ; ಈ ಮಿತಿಯಿಂದ ಕೂಡಿರುವ ದೇಹವನ್ನು ತ್ಯಜಿಸುವನು" ಎಂದು ಭವಿಷ್ಯ ನುಡಿದಿದ್ದರು. ಈ ಜೀವನದಲ್ಲಿ ಅವರು ಸಾಧಿಸಿದ್ದ ಮತ್ತು ಹಿಂದಿನ ಜನ್ಮಗಳಲ್ಲಿ ಅವರು ಏನೇನು ಸಾಧಿಸಿದ್ದರು ಎಂಬುದರ ಸ್ಮೃತಿಯೇ ಅದು ಎಂದು ಅವರ ಶಿಷ್ಯರು ನಂಬುವರು. ಈ ಶಿಷ್ಯನಿಂದ ಯಾವ ಸೇವಾಕಾರ್ಯ ವನ್ನೂ ಶ್ರೀರಾಮಕೃಷ್ಣರು ಸ್ವೀಕರಿಸುತ್ತಿರಲಿಲ್ಲ. ಶ್ರೀರಾಮಕೃಷ್ಣರನ್ನು

ಸೇವಿಸುವುದು, ಅವರಿಗೆ ತಂಬಾಕನ್ನು ಅಣಿಮಾಡುವುದು ಮುಂತಾದ ಚಿಲ್ಲರೆ ಕೆಲಸಗಳನ್ನೆಲ್ಲಾ ಇತರಶಿಷ್ಯರು ಮಾತ್ರ ಶ್ರೀರಾಮಕೃಷ್ಣರಿಗೆ ಮಾಡುತ್ತಿದ್ದರು.

ಪೌರಾತ್ಯರಲ್ಲಿ ರೂಢಿಯಲ್ಲಿರುವ ಹಲವು ಆಚಾರಗಳಲ್ಲಿ ಸದ್ವಂಶಸ್ಥನಲ್ಲದವನಿಂದ ಬಂದ ಆಹಾರವನ್ನು ಮುಟ್ಟದೆ ಇರುವುದೊಂದು ವಿಚಿತ್ರವಾಗಿ ಕಾಣುವುದು. ಈ ವಿಷಯದಲ್ಲಿ ಮಾತ್ರ ಸ್ವಾಮಿಜಿ ಗುರುಗಳು ಹೆಂಗಸಿನಷ್ಟೇ ಶಿಷ್ಟಾಚಾರವನ್ನು ಪರಿಪಾಲಿಸುತ್ತಿದ್ದರು. ಆದರೆ ಯಾವುದನ್ನು ತಾವು ಸೇವಿಸುತ್ತಿರಲಿಲ್ಲವೊ ಅದನ್ನು ನರೇಂದ್ರನಿಗೆ ಕೊಡುತ್ತಿದ್ದರು. ಅವನೊಂದು ಕಾಡ್ಗಿಚ್ಚು; ದೋಷಗಳನ್ನೆಲ್ಲಾ ಭಸ್ಮೀಭೂತಮಾಡಿಬಿಡುವನು ಎನ್ನುತ್ತಿದ್ದರು. ಈ ಹುಡುಗನ ಆಧ್ಯಾತ್ಮಿಕ ಸ್ವಭಾವ ಪುರುಷಲಕ್ಷಣಗಳಿಂದ ಕೂಡಿದ್ದುದು, ಅವರದು ಸ್ತ್ರೀ ಸ್ವಭಾವದ್ದು. ಗುರುಗಳು ಗೌರವಪೂರಿತವಾಗಿ ಶಿಷ್ಯನನ್ನು ಮೆಚ್ಚುತ್ತಿದ್ದರು. ಇದರಿಂದ ಎಲ್ಲರಲ್ಲಿಯೂ ಆ ಹುಡುಗನ ಮಹಿಮಾಮಯ ಭವಿಷ್ಯದಲ್ಲಿ ಭರವಸೆ ಉಂಟಾಗುವಂತೆ ಮಾಡಿದರು. ಇದರಿಂದ ಗುರುಗಳು ಕಾಲವಾದ ಮೇಲೂ ಶಿಷ್ಯನು ಅನಂತರ ಮಾಡುವ ಕೆಲಸಕ್ಕೆ ಗುರುಗಳು ಹೇಳಿದ್ದನ್ನೇ ಇವರು ಮಾಡುತ್ತಿರುವರು ಎಂದು ಅವರ ಅನುಯಾಯಿಗಳು ಭಾವಿಸ ತೊಡಗಿದರು. ನಾಯತನ ಕೆಲಸಕ್ಕೆ ಸಹಾಯ ಮತ್ತು ಪ್ರೋತ್ಸಾಹ ದೊರಕಿತು. ಬಂಧನವನ್ನು ತುಂಡರಿಸುವುದೇ ಸ್ವಾಮಿಜಿ ಅವರ ಕೆಲಸವಾಗಿತ್ತು; ಬೇರೇನೂ ಅಲ್ಲ. ಆದಕಾರಣ ಯಾವುದು ಬಂಧನವನ್ನು ಕಿತ್ತು ಒಗೆಯುವುದು, ಮತ್ತು ಸ್ವಾತಂತ್ರ್ಯದ ಹೆಸರಿನಲ್ಲಿ ಸ್ವೇಚ್ಛಾವಿಹಾರ ಇವೆರಡನ್ನು ಅವರ ಅನುಯಾಯಿಗಳು ಬಹಳ ಜೋಪಾನವಾಗಿ ವಿಮರ್ಶಿಸಬೇಕಾಗಿತ್ತು. ಭರತಖಂಡದ ಪ್ರಾರಂಭದಿನಗಳಲ್ಲಿ ಸಂಘದ ಕಾರ್ಯದ ಈ ಭಾಗವನ್ನು ಎಷ್ಟು ಧೈರ್ಯದಿಂದ ಪದೇಪದೇ ನೆರವೇರಿಸುತ್ತಿದ್ದುದನ್ನು ನೋಡಿದಾಗ ಮನಸ್ಸಿನ ಮೇಲೆ ಪರಿಣಾಮಕಾರಿಯಾದಂತೆ ಮತ್ತಾವುದೂ ಆಗಲಿಲ್ಲ. ಶ್ರೇಷ್ಠ ಆಚಾರ ಸಂಪ್ರದಾಯವಂತರ ಮನೆಯಿಂದ ಬಂದಿದ್ದವರು, ಅಥವಾ ಉಗ್ರ ತಪಸ್ವಿಗಳು, ತಮ್ಮ ನಾಯಕರು ಸ್ವೀಕರಿಸಿದ ಐರೋಪ್ಯ ಶಿಷ್ಯರೊಂದಿಗೆ ಊಟಮಾಡಲು ಕೂಡ ಸಿದ್ಧರಾಗಿದ್ದರು. ವಿವೇಕಾನಂದರು ಮದ್ರಾಸಿನಲ್ಲಿ ಇಂಗ್ಲೀಷಿನವನು ಮತ್ತು ಅವನ ಸತಿ ಜೊತೆಯಲ್ಲಿ ಊಟ ಮಾಡುವುದನ್ನು ನೋಡಿದರೆ, ಅವರು ಪಾಶ್ಚಾತ್ಯದೇಶದಲ್ಲಿದ್ದಾಗ ದನದ

ಮಾಂಸ ಮತ್ತು ಮದ್ಯವನ್ನು ಸೇವಿಸಿದರೆಂದು ಕೇಳಿದರೆ, ಅವರ ಗುರು ಭಾಯಿಗಳ ಮುಖದಲ್ಲಿ ಸ್ವಲ್ಪವೂ ಅಸಮಾಧಾನವಿರಲಿಲ್ಲ. ಇದನ್ನು ಪ್ರಶ್ನಿಸುವುದು, ಇದನ್ನು ವಿವರಿಸುವುದು, ಇದು ಸರಿಯೆ ಎಂದು ಕೇಳುವುದು ಅವರ ಕರ್ತವ್ಯವಾಗಿರಲಿಲ್ಲ. ಅವರು ಏನಾದರೂ ಮಾಡಲಿ, ಎಲ್ಲಿಗಾದರೂ ಒಯ್ಯಲಿ, ಅವರ ಬೆಂಬಲಿಗರಾಗಿ ನಿಲ್ಲುವುದುಮಾತ್ರ ಅವರ ಕರ್ತವ್ಯವಾಗಿತ್ತು. ನಾವು ಇದನ್ನು ನೋಡಿದಾಗ ವಿವೇಕಾನಂದರಿಲ್ಲದೇ ಇದ್ದರೆ ಶ್ರೀರಾಮಕೃಷ್ಣಸಂಘ ಕೆಲಸಕ್ಕೆ ಬಾರದೆ ಹೋಗುತ್ತಿತ್ತು; ಅದರಂತೆಯೇ ಸಂಘದ ಗುರುಭಾಯಿಗಳಿಲ್ಲದೇ ಇದ್ದರೆ ಅಷ್ಟೇ ನಿರರ್ಥಕವಾಗುತ್ತಿತ್ತು ವಿವೇಕಾನಂದರ ಜೀವನ ಮತ್ತು ಶ್ರಮ ಎನ್ನಿಸುವುದು. ಕಾಲಾನಂತರ ಸಂಘದ ಹಿರಿಯರ ಗುಂಪಿಗೆ ಸೇರಿದವರೊಬ್ಬರು "ಶ್ರೀರಾಮಕೃಷ್ಣರು ಸ್ವಾಮಿ ವಿವೇಕಾನಂದರನ್ನು ತಯಾರುಮಾಡುವುದಕ್ಕಾಗಿ ಬದುಕಿದ್ದರು" ಎಂದು ಹೇಳಿದರು. ಇದು ನಿಜವಾಗಿಯೂ ಸತ್ಯವೆ? ಅಥವಾ ಜಗನ್ಮಾತೆಯ ವಿಶಾಲ ಹೃದಯದಿಂದ ಬಂದ ಸಂದೇಶದಲ್ಲಿ ಯಾವುದು ಇದು ಯಾವುದು ಅದು ಎಂದು ಕಂಡುಹಿಡಿಯಲು ಅಸಾಧ್ಯವೊ? ನಾವು ಇವರ ಜೀವನವೆಲ್ಲಾ ನೋಡಿದರೆ, ನಮ್ಮಲ್ಲಿ ಶ್ರೀರಾಮಕೃಷ್ಣ—ವಿವೇಕಾನಂದರೆಂಬ ಒಂದು ಚೈತನ್ಯವಿತ್ತು ಎಂದು ಕಾಣುವುದು. ಅವರ ಕಾಂತಿ ಪರಿಧಿಯಲ್ಲಿ ಹಲವು ಆಕಾರಗಳಿವೆ. ಅವರಲ್ಲಿ ಕೆಲವರು ನಮ್ಮಲ್ಲಿ ಈಗಲೂ ಇರುವರು. ಅವರಲ್ಲಿ ಯಾರ ವಿಷಯದಲ್ಲಿಯೂ ಒಬ್ಬರ ವ್ಯಕ್ತಿತ್ವ ಇಲ್ಲಿ ಕೊನೆಗಾಣುವುದು, ಮತ್ತೊಬ್ಬರ ವ್ಯಕ್ತಿತ್ವ ಅಲ್ಲಿ ಪ್ರಾರಂಭವಾಗುವುದು ಎಂದು ಹೇಳಲಾರೆವು.



## ೫

## ಉತ್ತರ ಭಾರತದಲ್ಲಿ ಪರ್ಯಟನ

೧೮೯೮ರ ಬೇಸಗೆಯ ಕಾಲ ನನ್ನ ಮನಸ್ಸಿನಲ್ಲಿ ಚಿತ್ರದಂತೆ ಜಾಜ್ವಲ್ಯಮಾನವಾಗಿ ನಿಂತಿದೆ. ಆಧ್ಯಾತ್ಮಿಕ ಉತ್ಸಾಹ ಮತ್ತು ಸರಳತೆಯ ಸುಂದರ ಹಿನ್ನೆಲೆಯಲ್ಲಿ ಚಿತ್ರಿತವಾಗಿರುವ ಪವಿತ್ರ ದೃಶ್ಯಗಳಂತೆ ಇವೆ ಅವು. ಇವುಗಳೆಲ್ಲ ಪವಿತ್ರವಾಗಿರುವುದು ನಮ್ಮ ಮಧ್ಯದಲ್ಲಿದ್ದ ಒಬ್ಬ ಮಹಾ ವ್ಯಕ್ತಿಯ ಸಾನ್ನಿಧ್ಯದಿಂದ. ನಮ್ಮಲ್ಲಿ ನಾಲ್ಕು ಜನ ಪಾಶ್ಚಾತ್ಯ ಮಹಿಳೆಯರು ಇದ್ದರು. ಒಬ್ಬರು ಶ್ರೀಮತಿ ಓಲ್‌ಬುಲ್ ಎಂಬುವರು. ಕೇಂಬ್ರಿಡ್ಜ್ ಮಸಾಚುಸೆಟ್ಸ್‌ನಿಂದ ಬಂದವರು. ಮತ್ತೊಬ್ಬರು ಕಲ್ಕತ್ತೆಯಲ್ಲಿ ಉದ್ಯೋಗದಲ್ಲಿರುವ ಆಂಗ್ಲೊ ಇಂಡಿಯನ್ನರು. ಜೊತೆಯಲ್ಲಿ ಸ್ವಾಮಿಜಿ ಮತ್ತು ಅವರ ಗುರುಭಾಯಿಗಳು ಇದ್ದರು. ನಾವು ಆಲ್ಮೋರಕ್ಕೆ ಬಂದೊಡನೆಯೆ ಸ್ವಾಮಿಜಿ ಮತ್ತು ಅವರ ಗುರುಭಾಯಿಗಳು ಸೇವಿಯರ್ಸ್ ದಂಪತಿಗಳ ಅತಿಥಿಗಳಾದರು. ನಾವು ಅವರ ಮನೆಗೆ ಸ್ವಲ್ಪದೂರದಲ್ಲಿ ಒಂದು ಮನೆಯಲ್ಲಿ ತಂಗಿದೆವು. ನಾವು ಹೀಗೆ ಇದ್ದುದರಿಂದ ಸ್ವತಂತ್ರವಾಗಿರುವುದಕ್ಕೂ ಮತ್ತು ಅವರೊಡನೆ ಮಾತುಕತೆಯಾಡುವುದಕ್ಕೂ ಬೇಕಾದಷ್ಟು ಅವಕಾಶವಿತ್ತು. ನಾವು ಒಂದು ತಿಂಗಳಾದ ಮೇಲೆ ಆಲ್ಮೋರಾದಿಂದ ಕಾಶ್ಮೀರಕ್ಕೆ ಹೊರಟೆವು. ಆಗ ಸ್ವಾಮಿಜಿ ಶ್ರೀಮತಿ ಓಲ್‌ಬುಲ್ ರ ಅತಿಥಿಗಳಾಗಿ ನಮ್ಮೊಡನೆ ಬಂದರು. ಸ್ವಾಮಿಜಿ ಅವರ ಗುರುಭಾಯಿ ಮತ್ತು ಸೇವಕರು ಹಿಂದೆ ಉಳಿದರು.

ಮೇ ತಿಂಗಳ ಪ್ರಾರಂಭದಿಂದ ಅಕ್ಟೋಬರ್ ತಿಂಗಳ ಕೊನೆಯವರೆಗೆ ಎಂತಹ ರಮ್ಯವಾದ ದೃಶ್ಯಗಳಮೂಲಕ ನಾವು ಸಾಗಿಹೋದೆವು! ನಾವು ಹೋಗುತ್ತಿರುವಂತೆ ನಮಗೆ ಕಂಡ ಆಕರ್ಷಣೀಯ ವಿಷಯಗಳನ್ನು ಹೇಗೆ ಅವರು ಒಂದಾದಮೇಲೊಂದನ್ನು ಸ್ವಾರಸ್ಯವಾಗಿ ವಿವರಿಸತೊಡಗಿದರು. ಇಂಡಿಯಾದೇಶದ ವಿಷಯವಾಗಿ ಪಾಶ್ಚಾತ್ಯರಲ್ಲಿ ಕೆಲವು ವಿಷಯಗಳಲ್ಲಿ ಪರಿಣಿತರಾಗಲು ಪ್ರಯತ್ನಿಸಿರುವವರನ್ನು ಬಿಟ್ಟರೆ ಉಳಿದವರಲ್ಲಿ ಎಂತಹ ಅಜ್ಞಾನವಿದೆ. ಹಿಂದಿನ ಕಾಲದಲ್ಲಿ ಪಾಟಲೀಪುತ್ರವೆಂದು ಪ್ರಖ್ಯಾತವಾದ ಪಾಟ್ನಾ ನಗರದಿಂದಲೇ ನಮ್ಮ ಪಾಠ ಪ್ರಾರಂಭವಾಯಿತೆಂದು ಹೇಳಬಹುದು. ಪೂರ್ವದಿಕ್ಕಿನಿಂದ ರೈಲ್ವೆಯಲ್ಲಿ ನದೀಮೂಲಕ ಕಾಶಿಯನ್ನು

ಪ್ರವೇಶಿಸುವಾಗ ಪ್ರಪಂಚದಲ್ಲೆಲ್ಲಾ ಒಂದು ಅದ್ಭುತವಾದ ದೃಶ್ಯ ನಮಗೆ ಕಾಣುವುದು. ನಮ್ಮ ನಾಯಕರು ಉತ್ಸಾಹದಿಂದ ಅದನ್ನು ಹೊಗಳ ತೊಡಗಿದರು. ಲಕ್ನೊ ನಗರದ ಕೈಗಾರಿಕೆ ಮತ್ತು ಭೋಗ್ಯವಸ್ತುಗಳ ವಿಷಯವನ್ನು ವಿವರಿಸತೊಡಗಿದರು. ಸ್ವಾಮಿಜಿ ಚರಿತ್ರಾರ್ಹನಾದ ಅಥವಾ ಸುಂದರವಾದ ದೊಡ್ಡ ದೊಡ್ಡ ನಗರಿಗಳನ್ನು ಮಾತ್ರ ಕುತೂಹಲ ದಿಂದ ಕೊಂಡಾಡಲಿಲ್ಲ. ದೂರವಾದ ಬೈಲುಪ್ರದೇಶಗಳಲ್ಲಿ ಹೊಲ ಮನೆ ಹಳ್ಳಿಗಳಮೂಲಕ ಹಾದು ಹೋಗುವಾಗ ಅದನ್ನು ನೋಡಿದಾಗ ಸ್ವಾಮಿಜಿ ಅವರ ಹೃದಯದಲ್ಲಿ ಚಿಮ್ಮದಷ್ಟು ಪ್ರೇಮ, ಅದರಲ್ಲೆ ತನ್ಮಯರಾಗುವುದು, ಮತ್ತೆ ಇನ್ನೆಲ್ಲಿಯೂ ಕಾಣಲಿಲ್ಲವೆನ್ನಬಹುದು. ಇಂತಹ ಸಮಯಗಳಲ್ಲಿ ಸ್ವಾಮಿಜಿ ಇಡೀ ಭರತಖಂಡವನ್ನೇ ಮನನ ಮಾಡತೊಡಗಿದರು. ಸಮು ದಾಯಕ ಒಕ್ಕಲುತನ, ರೈತನ ಮನೆಯಲ್ಲಿರುವ ಗೃಹಿಣಿಯ ನಿತ್ಯಜೀವನ ಇವುಗಳನ್ನು ಕುರಿತು ವಿವರಿಸುವುದರಲ್ಲಿ ಗಂಟೆಗಟ್ಟಲೆ ಕಳೆಯುತ್ತಿದ್ದರು. ಹೇಳುವಾಗ ರಾತ್ರಿ ಒಲೆಯ ಮೇಲೆ ಬೆಳಿಗ್ಗೆ ತಿಂಡಿಗಾಗಿ ಬೇಯಿಸು ವುದಕ್ಕೆ ಇಟ್ಟದ್ದ ಕಾಳನ್ನೂ ಮರೆಯುತ್ತಿರಲಿಲ್ಲ. ಪರಿವ್ರಾಜಕರಾಗಿ ಅಲೆಯುತ್ತಿದ್ದಾಗ ತಮಗೆ ಆದ ಅನುಭವಗಳೆ ಕಾರಣ ಎಂದು ಕಾಣುವುದು. ಅವರು ನಮ್ಮೊಡನೆ ಮಾತನಾಡುವಾಗ ಉತ್ಸಾಹ ಕಣ್ಣಿನಲ್ಲಿ ಹೊಳೆಯು ತ್ತಿತ್ತು, ಮಾತಿನಲ್ಲಿ ಅನುರಣಿತವಾಗುತ್ತಿತ್ತು. ದೀನ ರೈತನ ಮನೆಯವ ರಷ್ಟು ಅತಿಥಿಸತ್ಕಾರಪರರು ಭರತಖಂಡದಲ್ಲಿ ಇಲ್ಲ ಎಂದು ಸಾಧುಗಳು ಹೇಳುವುದನ್ನು ನಾನು ಕೇಳಿರುವೆನು. ನಿಜ, ಗೃಹಿಣಿಗೆ ಅತಿಥಿಗೆ ಮಲಗಲು ಕೊಡುವುದಕ್ಕೆ ಚಾಪೆಯಲ್ಲದೆ ಬೇರಿಲ್ಲ. ತಂಗಲು ಮಣ್ಣಿನಲ್ಲಿ ಕಟ್ಟಿದ ಮನೆಯ ಮುಂಭಾಗವಲ್ಲದೆ ಬೇರಿಲ್ಲ. ಆದರೆ ರಾತ್ರೆ ಮಲಗಲು ಹೋಗು ವುದಕ್ಕಿಂತ ಮುಂಚೆ ಅತಿಥಿಯನ್ನು ನೋಡಲು ಅವನಿಗೆ ಕಾಣದಂತೆ ಬರು ವಳು. ಬೆಳಿಗ್ಗೆ ಎದ್ದಮೇಲೆ ಹಲ್ಲನ್ನು ಉಜ್ಜಿಕೊಳ್ಳಲು ಒಂದು ಕಡ್ಡಿಯನ್ನು ಇಟ್ಟು, ಕುಡಿಯಲು ಒಂದು ಬಟ್ಟಲು ಹಾಲನ್ನು ಸಮೀಪದಲ್ಲಿ ಇಟ್ಟು ಹೋಗುವಳು. ತನ್ನ ಮನೆಯಲ್ಲಿ ಅತಿಥಿ ಸುಖವಾಗಿ ಸುದಾರಿಸಿಕೊಂಡು ಹೋಗಲಿ ಎಂದು.

ಸ್ವಾಮಿಜಿ ಸಂಚರಿಸುತ್ತಿದ್ದಾಗ ಭರತಖಂಡದ ಭೂತಕಾಲದಲ್ಲೆ ಬಾಳಿ ಸಂಚರಿಸುತ್ತಿದ್ದಂತೆ ಇತ್ತು, ಅದೇ ಅವರ ಜೀವನದ ಉಸಿರಿನಂತೆ ಇತ್ತು ಎಂದು ಕೆಲವುವೇಳೆ ಅನುಭವಿಸಬಹುದಾಗಿತ್ತು. ಅವರಲ್ಲಿದ್ದ

ಚಾರಿತ್ರಿಕ ದೃಷ್ಟಿ ಅದ್ಭುತವಾಗಿತ್ತು. ನಾವು ಟೆರೈ ಪ್ರಾಂತ್ಯದಲ್ಲಿ ಮಳೆಗಾಲ ಪ್ರಾರಂಭವಾಗುವುದಕ್ಕಿಂತ ಮುಂಚೆ ಗ್ರೀಷ್ಮ ಋತುವಿನ ಒಂದು ಮಧ್ಯಾಹ್ನ ಪ್ರಯಾಣ ಮಾಡುತ್ತಿದ್ದಾಗ ಇದೇ ದಾರಿಯಲ್ಲಿ ಆ ಯುವಕ ಸಿದ್ಧಾರ್ಥ ಸಂಚರಿಸಿದ್ದು, ಆ ತ್ಯಾಗಿ ಬುದ್ಧನನ್ನು ಸ್ಪರ್ಶಿಸಿದ ಭೂಮಿ ಇದೇ ಎಂದು ನಮಗೆ ಅರಿವಾಗುವಂತೆ ಮಾಡಿದರು. ಸ್ವೇಚ್ಛೆಯಾಗಿ ಸಂಚರಿಸುತ್ತಿದ್ದ ನವಿಲತಂಡ ರಜಪುಟಾಣ ಮತ್ತು ಅವರ ಲಾವಣಿಗಳನ್ನು ಮನಸ್ಸಿಗೆ ತರುತ್ತಿತ್ತು. ಮಧ್ಯೆ ಯಾವಾಗಲಾದರೊಮ್ಮೆ ಒಂದು ಆನೆಯನ್ನು ನೋಡಿದರೆ ಹಿಂದಿನ ಯುದ್ಧ ಹೇಗೆ ನಡೆಯುತ್ತಿತ್ತು ಎಂಬುದನ್ನು ಹೇಳಲುಪಕ್ರಮಿಸುವರು. ಎಲ್ಲಿಯವರೆಗೆ ವೈರಿಗಳನ್ನು ಹಿಮ್ಮೆಟ್ಟಿಸಲು ಸಜೀವ ಪಿರಂಗಿ ದಳದಂತೆ ಇರುವ ಆನೆಗಳು ಇರುವುವೊ ಅಲ್ಲಿಯವರೆಗೆ ಯಾರೂ ಅವರನ್ನು ಸೋಲಿಸುವಂತೆ ಇರಲಿಲ್ಲ.

ಬಂಗಾಳದಿಂದ ವಾಯುವ್ಯ ಪ್ರಾಂತ್ಯಕ್ಕೆ ನಾವು ಹೋದಾಗ ಸ್ವಾಮಿಜಿ ದಯಾಮಯ ಇಂಗ್ಲೀಷರು ರಾಜ್ಯಭಾರದಲ್ಲಿ ತೋರುವ ವಿಚಕ್ಷಣೆಯ ವಿಷಯವನ್ನು ಕುರಿತು ಮಾತನಾಡುವುದನ್ನು ನಿಲ್ಲಿಸಿದರು. ಆಗ ಅವರು ತಮ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದರು. "ಇತರರು ಮಾಡಿದಂತೆ ಇಂಗ್ಲೀಷರು ಮಾಡದೆ ಪೌರಾತ್ಯ ದೇಶಗಳ ರಾಜ್ಯಭಾರದಲ್ಲಿ ವ್ಯಕ್ತಿಯ ಪ್ರಭಾವವನ್ನು ಅರಿತರು. ಬಲವಾದ ಜನರ ಅಭಿಪ್ರಾಯ ಇನ್ನೂ ಇಲ್ಲಿ ಚೆನ್ನಾಗಿ ಅಭಿವ್ಯಕ್ತವಾಗಿರಲಿಲ್ಲ. ಆದಕಾರಣವೆ ಯಾವ ಆಸ್ಪತ್ರೆಗೆ ಕಾಲೇಜಿಗೆ, ಆಫೀಸಿಗೆ ಮೇಲಿನ ಅಧಿಕಾರಿಗಳು ಭೇಟಿಯನ್ನು ಯಾವಾಗ ಬೇಕಾದರೂ ಕೊಡಬಹುದಾಗಿತ್ತು. ದಟ್ಟದರಿದ್ರನೂ ಹೇಗೊ ಅಧಿಕಾರಿಯನ್ನು ಭೇಟಿಮಾಡಿದರೆ ತನಗೆ ನ್ಯಾಯ ದೊರಕುವುದೆಂದು ಭಾವಿಸಿದ್ದನು. ಪೌರಾತ್ಯ ಆಡಳಿತದಲ್ಲಿ ವ್ಯಕ್ತಿಯ ಪ್ರಾಮುಖ್ಯತೆಯನ್ನು ಸ್ವಾಮಿಜಿ ಅವರು ಮಾತನಾಡುತ್ತಿದ್ದಾಗ ಹೇಳುತ್ತಿದ್ದರು. Imperialistic Government (ಸಾರ್ವಭೌಮ ಸರ್ಕಾರ) ಯಾವಾಗಲೂ ಪ್ರಜಾಪ್ರಭುತ್ವಕ್ಕೆ ವಿರೋಧಿ. ಆದಕಾರಣವೆ ಜೂಲಿಯಸ್ ಸೀಸರ್ ಚಕ್ರವರ್ತಿಯಾಗಲು ಪ್ರಯತ್ನಿಸಿದ್ದು ಎಂದು ಅವರು ಊಹಿಸುತ್ತಿದ್ದರು. ಅವರನ್ನು ಕೇಳುತ್ತಿದ್ದ ಜನಸಾಧಾರಣರಿಗೆ ರಾಜರ ಸರ್ವಾಧಿಕಾರದ ಕಾಲ ಆಗಿಹೋಗಿ ಈಗ ಅಧಿಕಾರಿಗಳ ಕಾಲ ಬಂದಿದೆ ಎಂಬುದನ್ನು ತಿಳಿದುಕೊಳ್ಳಲು ಬಹಳ ಕಷ್ಟವಾಗಿತ್ತು. ಸಾರ್ವಭೌಮನೊಬ್ಬನಿದ್ದಾಗ ಯಾವಾಗ ಬೇಕಾದರೂ

ಅವರಿಗೆ ತಮ್ಮ ಅರ್ಜಿಯನ್ನು ಅರ್ಪಿಸಬಹುವಾಗಿತ್ತು, ಅವನಿಂದ ಕ್ಷಮೆ ಬೇಡಬಹುದಾಗಿತ್ತು; ಸಾರ್ವಭೌಮನು ತನ್ನ ಇಚ್ಛಾನುಸಾರ ಇವನಿಗೆ ತೀರ್ಪನ್ನು ಕೊಡಬಹುದಾಗಿತ್ತು. ಆದರೆ ಈಗ ಅವಾವುವೂ ಇಲ್ಲ, ಬರೀ ಒಂದಾದಮೇಲೊಂದು ಇಲಾಖೆಗಳು. ಆಂಗ್ಲೇಯರ ಆಳ್ವಿಕೆಯ ಪ್ರಾರಂಭ ದಲ್ಲಿ ಹಲವು ಜನ ಏನೂ ತಿಳಿಯದವರು ವಿಂಡ್‌ಸರ್‌ನಲ್ಲಿರುವ ವಿಕ್ಟೋರಿಯ ರಾಣಿಗೆ ತಮ್ಮ ಕಷ್ಟವನ್ನು ಹೇಳಿಕೊಳ್ಳಬೇಕೆಂದು ತಮ್ಮಲ್ಲಿರುವುದನ್ನೆಲ್ಲಾ ಖರ್ಚುಮಾಡಿ ಹೊರಟಿದ್ದರು. ಇವರು ತಮ್ಮ ಮನೆ ಮತ್ತು ಗ್ರಾಮದಿಂದ ಬಹಳ ದೂರಹೋಗಿ ಪರದೇಶದಲ್ಲಿ ನಡೆದುನಡೆದು ನಿರಾಶರಾಗಿ ಸಾಕಾಗಿ ಪ್ರಾಣಬಿಟ್ಟರು.

ನಾವು ಪಂಜಾಬ್ ಪ್ರಾಂತ್ಯಕ್ಕೆ ಪ್ರವೇಶ ಮಾಡಿದಾಗ ಸ್ವಾಮಿಜಿ ಅವರಲ್ಲಿದ್ದ ದೇಶಪ್ರೀತಿ ಅತಿ ನಿಕಟವಾಗಿ ನಮಗೆ ಪರಿಚಯವಾಯಿತು. ಯಾರಾದರೂ ಅವರನ್ನು ಇಲ್ಲಿ ನೋಡಿದವರು ಸ್ವಾಮಿಜಿ ಈ ಪ್ರಾಂತ್ಯಕ್ಕೇ ಸೇರಿದವರು ಎಂದು ಊಹಿಸುವುದರಲ್ಲಿ ಸಂದೇಹವಿರಲಿಲ್ಲ. ಅಷ್ಟೊಂದು ನಿಕಟಬಾಂಧವ್ಯವನ್ನು ಅವರು ಬೆಳೆಸಿದ್ದರು. ಅಲ್ಲಿಯ ಜನರ ಪ್ರೀತಿ ಮತ್ತು ಗೌರವಕ್ಕೆ ಅವರು ಪಾತ್ರರಾಗಿದ್ದರು. ಪ್ರೀತಿಯನ್ನು ಅವರಿಂದ ಎಷ್ಟೋ ಪಡೆದಿದ್ದರು ಮತ್ತು ಎಷ್ಟೋ ಅವರಿಗೆ ಕೊಟ್ಟಿದ್ದರು. ಹಲವರು ಸ್ವಾಮಿಜಿಯವರಲ್ಲಿ ಸಿಕ್ಕರ ಪರಮ ಗುರುವಾದ ಗುರುನಾನಕರು ಮತ್ತು ಅವರ ಕೊನೆಯ ಗುರುಗಳಾದ ಗುರು ಗೋವಿಂದಸಿಂಗ್ ಎಂಬುವ ಒಂದು ಅಪೂರ್ವ ಮಿಲನವನ್ನೇ ಕಾಣುತ್ತೇವೆಂದು ಹೇಳುತ್ತಿದ್ದರು. ಅವರಲ್ಲಿ ತುಂಬಾ ಅನುಮಾನ ಸ್ವಭಾವದವರೂ ಕೂಡ ಸ್ವಾಮಿಜಿ ಅವರನ್ನು ನಂಬು ತ್ತಿದ್ದರು. ಸ್ವಾಮಿಜಿಯವರು ಐರೋಪ್ಯರನ್ನು ತಮ್ಮವರೆಂದು ಭಾವಿಸುವುದು ಅವರಿಗೆ ತೋರುತ್ತಿದ್ದ ವಿಶ್ವಾಸ ಮತ್ತು ಅವರ ವಿಷಯವಾಗಿ ಸ್ವಾಮಿಜಿ ಅಭಿಪ್ರಾಯವನ್ನು ಅವರು ಒಪ್ಪದೇ ಇದ್ದರೂ ಅವರಲ್ಲಿದ್ದ ಲಂಚ ರುಶುವತ್ತಿಗೆ ಒಳಗಾಗದ ನಿಷ್ಠುರತೆ, ಮತ್ತು ನಿರ್ದಾಕ್ಷಣ್ಯವಾದ ಟೀಕೆ ಇವುಗಳಿಗಾಗಿ ಅವರನ್ನು ಪ್ರೀತಿಸುತ್ತಿದ್ದರು. ಸ್ವಾಮಿಜಿ ಅವರು ಅಮೆರಿಕಾ ಶಿಷ್ಯರಿಗೆ ಕೊಡುತ್ತಿದ್ದ ಒಂದು ಸುಂದರ ದೃಶ್ಯ ಆಗಲೆ ನೆನಪಿನ್‌ನಲ್ಲಿತ್ತು– ಇದನ್ನು ನೆನಸಿಕೊಂಡಾಗ ಸ್ವಾಮಿಜಿ ಅವರ ಮುಖಕಮಲ ಹಿಂದಿನ ಆನಂದ ಸ್ಮೃತಿಯಿಂದ ಅರಳಿದಂತೆ ಆಗುತ್ತಿತ್ತು. ಅದೇ ಪಂಜಾಬಿನ ಕನ್ಯೆ ಯೊಬ್ಬಳು ಚರಕವನ್ನು ತಿರುಗಿಸುತ್ತಿದ್ದಾಗ "ಶಿವೋಹಂ" "ಶಿವೋಹಂ"

ಎಂದು ಹೇಳುತ್ತಿದ್ದುದು. ಆದರೂ ಇಲ್ಲಿ ನಡೆದ ಮತ್ತೊಂದು ಘಟನೆಯನ್ನು ನಾನು ಹೇಳದೆ ಇರಲಾರೆ. ಇವರ ಜೀವನದ ಕೊನೆಯ ದಿನಗಳಲ್ಲಿ ಮತ್ತೊಮ್ಮೆ ಅವರು ಕಾಶಿಯಲ್ಲಿ ಇದನ್ನೇ ಮಾಡಿದರು. ಅದೇ ರಸ್ತೆಯಲ್ಲಿ ಮಿಠಾಯಿ ಮಾರಾಟ ಮಾಡುತ್ತಿರುವ ಮಹಮ್ಮದೀಯನನ್ನು ಕರೆದು ಅವನಿಂದ ಕೊಂಡು ತಿಂದದ್ದು.

ನಾವು ಕೆಲವು ಹಳ್ಳಿಗಳಮೇಲೆ ಹೋದಾಗ ಮನೆಯ ಬಾಗಿಲಿನ ಮೇಲಿದ್ದ ಚೆಂಡುಹೂವನ್ನು ತೋರಿ ಇದೇ ಹಿಂದೂ ಮನೆಯ ಲಕ್ಷಣ ಎಂದು ಹೇಳುತ್ತಿದ್ದರು. ಕೆಲವು ವೇಳೆ ಹಿಂದೂ ಜನಾಂಗದವರು ಮೆಚ್ಚು ವುದು ಹೈಮವರ್ಣ, ಐರೋಪ್ಯರ ಆದರ್ಶದಂತೆ ಅದು ಬಿಳಿ ಅಥವಾ ಎಳೆ ಗೆಂಪಲ್ಲ ಎಂದು ಅಂತಹ ಜನರನ್ನು ತೋರುತ್ತಿದ್ದರು. ಟಾಂಗದಲ್ಲಿ ಸ್ವಾಮಿಜಿವೊಂದಿಗೆ ಹೋಗುತ್ತಿದ್ದಾಗ ಶಿವನ ಕಥೆಯನ್ನು ಕೆಲವುವೇಳೆ ಹೇಳುತ್ತಿದ್ದರು. ಅವರಿಗೆ ಇದನ್ನು ಎಷ್ಟು ಹೇಳಿದರೂ ಬೇಜಾರು ಇಲ್ಲದಂತೆ ಇತ್ತು. ಆ ಯೋಗಿರಾಜನಾದ ಶಿವ ಮೌನದಿಂದ ಪ್ರಪಂಚಕ್ಕೆ ದೂರ ವಾಗಿರುವ ಹಿಮಾಲಯದ ಮೇಲೆ ನೆಲಸಿದ್ದನು. ಜನರಿಂದ ಏನನ್ನೂ ಇಚ್ಛಿಸುತ್ತಿರಲಿಲ್ಲ. ತಾನೊಬ್ಬನೇ ಇರಲು ಬಿಟ್ಟರೆ ಸಾಕೆಂದು ನಿರಂತರ ಧ್ಯಾನದಲ್ಲಿ ಮಗ್ನನಾಗಿದ್ದನು.

ನಾವು ರಾವಲ್‌ಪಿಂಡಿಯಿಂದ ಮೂರಿಗೆ ಹೋಗಿ ಅಲ್ಲಿ ಕೆಲವು ದಿನ ಗಳು ಇದ್ದೆವು. ಅಲ್ಲಿಂದ ಸ್ವಲ್ಪ ದೂರ ಟಾಂಗದಲ್ಲಿ ದೋಣಿಯಲ್ಲಿ ಹೋಗಿ ಕಾಶ್ಮೀರದಲ್ಲಿರುವ ಶ್ರೀನಗರವನ್ನು ಸೇರಿದವು. ಇದೇ ನಮ್ಮ ಪರ್ಯಟನ ಕಾಲದ ಕೇಂದ್ರ ನಗರಿಯಾಯಿತು. ನಮ್ಮ ಪಯಣದಲ್ಲಿ ಆಲ್ಮೋರಾ ಕಡೆ ಹೋಗುವಾಗ ಬೆಟ್ಟಗಳ ಮೇಲಿನ ಅರಣ್ಯವನ್ನು ಒಣ್ಣಿಸುವುದರಲ್ಲಿ, ಜೀಲಮ್ಮಿನ ಕಣಿವೆಯಲ್ಲಿ ಹೋಗುವಾಗ ಸಿಕ್ಕುವ ಭೀಮಾಕಾರದ ಬಂಡೆ ಗಳು, ಗದ್ದೆಗಳಿಂದ ಆವೃತವಾದ ಗ್ರಾಮಗಳು ಇವುಗಳ ಸೊಬಗನ್ನು ಬಣ್ಣಿ ಸುವುದರಲ್ಲೆ ಬೇಕಾದರೆ ತನ್ಮಯರಾಗಿ ಹೋಗಬಹುದು. ನಾವು ಆಗಿನ ಕಾಲದ ದೃಶ್ಯವನ್ನು ನೆನೆಸಿಕೊಂಡರೆ ಹಲವು ಸುಂದರ ದೃಶ್ಯಗಳು ಒಂದಾದ ಮೇಲೊಂದು ಮನದಲ್ಲಿ ಮೂಡಿಹೋಗುತ್ತವೆ. ಇವುಗಳಲ್ಲಿ ಅತಿ ಕನಿಷ್ಟ ವಲ್ಲದ ಒಂದು ಸುಂದರ ದೃಶ್ಯವೇ ಕಡುಗೆಂಪಿನ ಲಂಗ ತೊಟ್ಟು ಬಿಳಿಯ ಮುಸುಕನ್ನು ಹಾಕಿಕೊಂಡಿದ್ದ ನೋಡಲು ಸುಂದರವಾದ ಮಹಮ್ಮದೀಯ ರೈತರ ಮುದುಕಿಯೊಬ್ಬಳು. ಈಕೆ ಚೀನಾರ್ ಮರದ ಕೆಳಗೆ ಒಂದು

ತೋಟದಲ್ಲಿ ಚರಕದಿಂದ ನೂಲು ತೆಗೆಯುತ್ತಿದ್ದಳು. ಸುತ್ತಲೂ ಇವಳ ಸೊಸೆಯವರು ಕುಳಿತಿದ್ದರು. ನಾವು ಆ ದಾರಿಯಲ್ಲಿ ಹೋಗುತ್ತಿದ್ದಾಗ ಆಕೆಯನ್ನು ನೋಡಲು ಕೆಳಗೆ ಇಳಿದೆವು. ಸ್ವಾಮಿಜಿ ಎರಡನೆ ವೇಳೆ ಆಕೆ ಯನ್ನು ನೋಡುವುದಕ್ಕೆ ಹೋಗುತ್ತಿರುವುದು. ಕಳೆದ ವರುಷ ವಿಶ್ವಾಸ ದಿಂದ ಆಕೆ ಸ್ವಾಮಿಜಿಯನ್ನು ಕಂಡು ಮಾತನಾಡಿದ್ದಳು. ಬೀಳ್ಕೊಡುವ ಸಮಯದಲ್ಲಿ ಸ್ವಾಮಿಜಿ ಅವರು ಆಕೆಯನ್ನು "ತಾಯಿ, ನೀನು ಯಾವ ಧರ್ಮಕ್ಕೆ ಸೇರಿದವಳು?" ಎಂದು ಕೇಳಿದರು. ಈ ಮಾತನ್ನು ಕೇಳಿ ದೊಡನೆಯೆ ಸಂತೋಷ ಮತ್ತು ಹೆಮ್ಮೆಯಿಂದ ಆಕೆ ಮುಖ ಅರಳಿತು. ಸ್ಪಷ್ಟವಾಗಿ ಗಟ್ಟಿಯಾಗಿ "ದೇವರ ದಯೆಯಿಂದ ನಾನು ಮುಸಲ್ಮಾನಳು" ಎಂದು ಹೇಳಿದಳು. ಈ ಘಟನೆಯನ್ನು ಸ್ವಾಮಿಜಿ ಅವರು ಎಷ್ಟೋ ವೇಳೆ ಹೇಳುತ್ತಿದ್ದರು.

ಶ್ರೀನಗರದ ಹೊರವಳಯದಲ್ಲಿ ಬೆಳೆದ ಎತ್ತರವಾದ ಪಾಪ್ಲರ್ ಮರ ಗಳ ಸಾಲು ರಾಫೇಲ್ ಬರೆದ ಪ್ರಖ್ಯಾತ ಚಿತ್ರಗಳಂತೆ ಇವೆ. ಅದರ ಕೆಳಗೆ ಇಂಡಿಯಾದೇಶ ಮತ್ತು ಅಲ್ಲಿಯ ಧರ್ಮದ ವಿಷಯವಾಗಿ ಹಲವು ಮಾತುಕತೆಗಳನ್ನು ನಾವು ಕೇಳಿದೆವು. ಅದರ ವಿಷಯವಾಗಿ ಬೇಕಾದರೆ ನಾನು ಹೇಳಬಹುದು.

ರಾತ್ರಿ ಚಂದ್ರನ ಬೆಳಕಿನಲ್ಲಿ ಹೊಲದಲ್ಲಿ ಹಳ್ಳಿಗರು ಆಡುವ ಸುಗ್ಗಿಯ ಆಟವನ್ನು ಬೇಕಾದರೆ ಹೇಳುತ್ತಾ ಹೋಗಬಹುದು. ಇಲ್ಲವೆ ಅಮರನಾಥ ದಲ್ಲಿ ಬೆಳೆಯುವ ಕೆಂಪು ಹೂವಿನ ವಿಚಾರವಾಗಿ ಆಗಲಿ ಅಥವಾ ಇಸ್ಲಾಮಾ ಬಾದಿನಲ್ಲಿ ಪಾಪ್ಲರ್ ಮರಗಳ ಕೆಳಗೆ ಇರುವ ಹಸರು ಗದ್ದೆಯ ವಿಷಯವಾಗಿ ಆಗಲೀ ಲಂಬಿಸುತ್ತಾ ಹೋಗಬಹುದು. ಬೇಸಗೆಯಲ್ಲಿ ಕಾಶ್ಮೀರದ ಬಯಲಿ ನಲ್ಲಿ ಒಂದು ವಿಧದ ಕಡುನೀಲಿ ಬಣ್ಣದ ಹೂವು [Forget-me-not] ಸಾಧಾರಣವಾಗಿ ಬಿಡುವುದು. ಆದರೆ ಶರತ್ ಮತ್ತು ವಸಂತ ಋತುಗಳಲ್ಲಿ ಬಯಲು ಮತ್ತು ನದಿಯ ದಡಗಳೆಲ್ಲಾ ಒಂದು ಬಗೆಯ ನೀಲಿಬಣ್ಣದ ಸಣ್ಣ ಹೂವುಗಳಿಂದ ತುಂಬಿ ಹೋಗುವುವು. ಅವುಗಳ ಮಧ್ಯೆ ನಡೆಯುತ್ತಿದ್ದಾಗ ಅದರ ಎಲೆಗಳು ಗರಿಕೆ ಹುಲ್ಲಿನಂತೆ ಚೂಪಾಗಿರುವುದು ಕಾಣುವುದು. ದಾರಿಯ ಪಕ್ಕದಲ್ಲಿ ನೀಲಿಯಾಗಸದ ಹಿನ್ನೆಲೆಯಲ್ಲಿ ಬೆಳಗುತ್ತಿರುವ ಇಂತಹ ಹೂಗಳಿಂದ ಕೂಡಿದ ಗುಡ್ಡಗಳು, ಕೆಲವೆಡೆ ಅಲ್ಲಿರುವ ಗೋರಿಗಳು, ಎಂತಹ ಎದೆಗೆ ತಟ್ಟುವ ಭಾವನೆಗಳನ್ನು ಮನದಲ್ಲಿ ಏಳಿಸುವುವು!

ಹುಲ್ಲು ಮತ್ತು ಹೂವಿನ ಗಿಡಗಳ ಮಧ್ಯದಲ್ಲಿ ಅಲ್ಲಲ್ಲಿ ಈಗ ಆರೈಕೆ ಇಲ್ಲದೆ ಇರುವ ಸೇಬು ಪಿಯರ್ ಮತ್ತು ಪ್ಲಂ ಗಿಡಗಳು ಇವೆ. ಇವೇ ಸರ್ಕಾರಕ್ಕೆ ಸೇರಿದ ಹಳ್ಳಿಯ ತೋಟಗಳು. ಹಿಂದೆ ಅವುಗಳ ಮೂಲಕ ಜನರಿಗೆ ಉಚಿತವಾಗಿ ಅದರ ಫಲವನ್ನು ಕೊಡುತ್ತಿದ್ದರು. ಈಗ ಅವುಗಳ ಅವಶೇಷವನ್ನು ಮಾತ್ರ ನೋಡುತ್ತಿರುವೆವು. ಒಂದು ದಿನ ನಾನು ಸೂರ್ಯಾಸ್ಥಮಯ ಸಮಯದಲ್ಲಿ ನದಿಯ ಎತ್ತರವಾದ ದಡದಮೇಲೆ ನಡೆಯುತ್ತಿರುವಾಗ ಮಹಮ್ಮದೀಯ ಕುರುಬರು ಕೈಯಲ್ಲಿ ಕೋಲುಹಿಡಿದು ಕೊಂಡು ಮೇಕೆಯ ಹಿಂಡನ್ನು ತಮ್ಮ ಹಳ್ಳಿಯ ಕಡೆ ಹೊಡೆದುಕೊಂಡು ಹೋಗುತ್ತಿದ್ದುದನ್ನು ನೋಡಿದೆನು. ಅವರು ಸೇಬಿನ ಗಿಡಗಳ ಸಮೀಪಕ್ಕೆ ಬಂದಾಗ ಸ್ವಲ್ಪಹೊತ್ತು ನಿಂತರು. ತಮ್ಮ ಮೇಲಿದ್ದ ಕಂಬಳಿಯನ್ನೇ ನೆಲದಮೇಲೆ ಹಾಸಿ ನಮಾಜು ಮಾಡಲು ಪ್ರಾರಂಭಿಸಿದರು. ನಿಜವಾಗಿ ಸೌಂದರ್ಯಕ್ಕೆ ಒಂದು ಅಂತ್ಯವಿಲ್ಲವೆಂದು ನನ್ನ ಹೃದಯ ಸಾರುವುದು. ಇಲ್ಲಿ ಇದಕ್ಕೆ ಒಂದು ಕೊನೆ ಮೊದಲಿಲ್ಲ.

ನಾನು ಈ ವಿಷಯಗಳನ್ನೆಲ್ಲ ಕುರಿತು ಮಾತನಾಡುತ್ತಿರುವುದು ಈ ದೇಶಕ್ಕೆ ಸಂಬಂಧಪಟ್ಟ ಭೂಗೋಳವನ್ನಾಗಲಿ, ಚರಿತ್ರೆಯನ್ನಾಗಲಿ, ಈ ಜನರಿಗೆ ಸಂಬಂಧಪಟ್ಟ ಆಚಾರ ವ್ಯವಹಾರವನ್ನಾಗಲಿ ಹೇಳಬಯಸುವುದ ಕ್ಕಲ್ಲ. ಹಳೆಯಕಾಲದ ಧರ್ಮವನ್ನು ಆಧುನಿಕಕಾಲದ ಜಟಿಲ ಸಮಸ್ಯೆ ಗಳ ಮಧ್ಯದಲ್ಲಿ ಹೇಗೆ ಅವರು ಬಾಳುತ್ತಿರುವರು ಎಂಬುದನ್ನು ಸ್ವಾಮಿಜಿ ಅವರ ಬಾಯಿಂದ ಕೇಳುವ ಅಪೂರ್ವ ಸುಯೋಗ ಈ ಲೇಖಕಿಯದಾಗಿತ್ತು. ಅದನ್ನು ಕುರಿತು ಇಲ್ಲಿ ವಿವರಿಸುತ್ತೇನೆ. ಸ್ವಾಮಿಜಿ ಅವರು ಒಮ್ಮೆ ಹೇಳಿ ದಂತೆ ಶ್ರೀರಾಮಕೃಷ್ಣರು ದೇವಸ್ಥಾನದ ತೋಟದಲ್ಲಿರುವ ಒಂದು ಹೂವಿ ನಂತೆ ಇದ್ದರು. ಭರತಖಂಡದ ಪೂರ್ವಕಾಲದ ಆದರ್ಶವೇ ರೂಪುತಾಳಿ ದಂತೆ ಇತ್ತು. ಶಿಶುಸಹಜ ಸರಳಸ್ವಭಾವ, ಅರ್ಧಬೆತ್ತಲೆ, ಆಚಾರವಂತ ರಾಗಿದ್ದರು. ಇಂತಹ ಒಂದು ಪುಷ್ಪ, ಪೂರ್ವಾಚಾರ ಸಂಪ್ರದಾಯದ ನೆನ ಪನ್ನು ಕೂಡ ತೊಡೆದುಹಾಕಬೇಕೆಂದು ಯತ್ನಿಸುತ್ತಿದ್ದ ಸಮಯದಲ್ಲಿ ಇದ್ದಕ್ಕೆ ಇದ್ದಂತೆಯೇ ಪೂರ್ಣವಿಕಸಿತವಾಯಿತು. ನನ್ನ ಗುರುದೇವನ ಮಹಿಮೆ ಮತ್ತು ಅವರ ದೊಡ್ಡ ಒಂದು ದುರಂತರವೇ ಅವರು ಈ ಆದರ್ಶಕ್ಕೆ ಸೇರದೆ ಇದ್ದುದು. ಅವರು ಸಂಪೂರ್ಣವಾಗಿ ಆಧುನಿಕರು. ಅವರಲ್ಲಿ ಹಿಂದೆ ಭಗವಂತನನ್ನು ಪ್ರತ್ಯಕ್ಷಮಾಡಿಕೊಂಡವರ ಕಾಂತಿ ಬೆಳಗ

ಬಹುದು. ಆದರೆ ಅದೇ ಕ್ರಾಂತಿಯನ್ನು ಆಧುನಿಕ ಕಾಲದವರು ಎದುರಿಸು ತ್ತಿರುವ ಎಲ್ಲಾ ಸಮಸ್ಯೆಗಳು, ಅನುಮಾನಗಳನ್ನು ಬಗೆಹರಿಸುವುದ ರಲ್ಲಿಯೂ ಕಾಣಬಹುದು. ಹತ್ತೊಂಬತ್ತನೇ ಶತಮಾನದ ಮಾನವನ ಆಸೆ ಭರವಸೆಗಳನ್ನು ಒಪ್ಪಿಕೊಳ್ಳಲಿ ಬಿಡಲಿ, ಯಾವುದನ್ನೂ ಗಮನಿಸದೆ ಇರಲಿಲ್ಲ. ಜ್ಞಾನಪ್ರಸಾರದ ಪರಿಣಾಮವಾಗಿ ಐರೋಪ್ಯರಲ್ಲಿ ಆದಂತೆ ಸ್ವಾಮಿಜಿ ಅವರಲ್ಲಿಯೂ ಮಾನವಕೋಟಿಯ ದುಃಖ ಮತ್ತು ಹೋರಾಟ ಗಳು ವ್ಯಕ್ತವಾದವು. ಯೂರೋಪ್ ಇದರ ವಿಷಯವಾಗಿ ಯಾವ ತೀರ್ಪನ್ನು ಕೊಟ್ಟಿದೆ ಎಂಬುದು ನಮ್ಮೆಲ್ಲರಿಗೂ ಗೊತ್ತಿದೆ. ಕಳೆದ ಅರ ವತ್ತು ವರ್ಷಗಳಿಂದ ನಮ್ಮ ಕಲೆ ವಿಜ್ಞಾನ ಕಾವ್ಯದಲ್ಲೆಲ್ಲ ನಿರಾಶೆಯ ಧ್ವನಿ ತುಂಬಿದೆ. ಜೀವನ ಸೌಲಭ್ಯಗಳಿರುವವರಲ್ಲಿ ತೃಪ್ತಿ ದೃಢವಾಗುತ್ತಿದೆ, ಅವರ ಹಕ್ಕುಗಳು ಜಾಸ್ತಿಯಾಗುತ್ತಿವೆ. ಇಲ್ಲದವರಲ್ಲಿ ದುಃಖ ಮತ್ತು ನೋವು ಜಾಸ್ತಿಯಾಗುತ್ತಿವೆ. ಮಾನವ ಈ ದೋಷಕ್ಕೆ ಪ್ರೋತ್ಸಾಹ ವನ್ನು ಕೊಡದೆ ಇದ್ದರೂ ಅದನ್ನು ನಿಗ್ರಹಿಸುವುದಕ್ಕೇ ಆಗಲಿ, ತಗ್ಗಿಸು ವುದಕ್ಕೇ ಆಗಲಿ ಅವನಲ್ಲಿ ಶಕ್ತಿಯಿಲ್ಲ. ನಮ್ಮ ಅತ್ಯಂತ ಮೇಧಾವಿಗಳಿಗೆ ಇದು ಗೊತ್ತಿದೆ. ಬೇರೆ ಮಾರ್ಗವಿಲ್ಲದೆ, ಮನಸ್ಸಿಲ್ಲದ ಮನಸ್ಸಿನಿಂದ ಕೈ ಗಳನ್ನು ಹಿಸಿಕಿಕೊಳ್ಳುತ್ತಾ ಪೌರಾತ್ಯ ಸಂಸ್ಕೃತಿ ನಿಂತುಕೊಂಡು ಹೀಗೆ ಹೇಳಿ ಕೊಳ್ಳಬೇಕಾಗಿದೆ: "ಯಾರಿಗೆ ಇದೆಯೊ ಅವರಿಗೆ ಕೊಡಲ್ಪಡುವುದು. ಯಾರಿಗೆ ಇಲ್ಲವೊ, ಅವರಲ್ಲಿ ಇರುವ ಅಲ್ಪವನ್ನೂ ಕಸಿದುಕೊಳ್ಳುವರು. ಸೋತವನು ಸತ್ತಂತೆಯೆ!"

ಪೌರಾತ್ಯ ಸಂಸ್ಕೃತಿಯೂ ಹೀಗೆಯೆ ಹೇಳುವುದೆ? ಹೀಗೆ ಹೇಳಿದರೆ ಮಾನವ ಕೋಟಿಗೆ ಇನ್ನು ಭರವಸೆ ಎಲ್ಲಿ? ಈ ಪ್ರಶ್ನೆಗೆ ಉತ್ತರ ನನ್ನ ಗುರುದೇವನ ಜೀವನದಲ್ಲಿದೆ. ಭರತಖಂಡ ಮತ್ತು ಇದೇ ಪ್ರಪಂಚದ ಸಾಧಕಗಣದ ಆಧ್ಯಾತ್ಮಿಕ ಅನ್ವೇಷಣೆ ಮತ್ತು ಸಾಕ್ಷಾತ್ಕಾರಗಳಿಗೆ ನನ್ನ ಗುರು ಹಕ್ಕುದಾರರಂತೆ ಕಂಡರು. ಹಾಗೆ ಹೊಸದಾದ ಭವಿಷ್ಯದಲ್ಲಿ ಬರುವ ಆದರ್ಶಗಳಿಗೆ ಇಂದಿನವರಿಗೆ ಮಾರ್ಗದರ್ಶಕರಂತೆ ಇರುವರು. ಅವರ ಮನಸ್ಸಿನಲ್ಲಿ ಭಾಧಿಸುತ್ತಿದ್ದ ಒಂದು ಸಮಸ್ಯೆಗೆ ಪರಿಹಾರವೊಂದು ಆಗಲೆ ಅಲ್ಲಿರುವುದು ನನಗೆ ಕಂಡಿತು. ಅದೇ ಸಮಸ್ಯೆಗೆ ನನ್ನ ನಿರ್ಣಯವಾದರೊ ಸಂಪೂರ್ಣ ವಿರೋಧವಾಗಿತ್ತು. ಇದು ಅವರಿಗೆ ಚೆನ್ನಾಗಿ ವೇದ್ಯ ವಾಗಿತ್ತು. ಇದರಿಂದ ನನಗೆ ಅದ್ಭುತ ಪ್ರಯೋಜನವಾಯಿತು. ಅವರಿಗೆ

ಎಲ್ಲಾ ವಿಧವಾದ ಅಸಾಧಾರಣ ಆಲೋಚನೆ ಮತ್ತು ಭಾವನೆಗೆ ಪರಿಹಾರ ಗೊತ್ತಿತ್ತು. ಇದರಿಂದ ಆಧುನಿಕ ಜಗತ್ತಿಗೆ ಎಷ್ಟೋ ಪ್ರಯೋಜನವಾಗುವುದೆಂದು ನಾನು ಭಾವಿಸುತ್ತೇನೆ. ನಾನು ಯಾವುದನ್ನು ತಿಳಿದುಕೊಳ್ಳಲಾರದೆ ಹೋದೆನೊ ಆ ವಿಷಯಗಳೇ ಚೆನ್ನಾಗಿ ತಿಳಿದುಕೊಳ್ಳುವವರ ಹೃದಯಕ್ಕೆ ಬೀಳುವುದೆಂದು ಯೋಚಿಸುತ್ತೇನೆ. ಅವರು ಹೇಳಿದುದಕ್ಕೆ ನಾನು ಬಣ್ಣ ಕಟ್ಟದೆ ಕೇವಲ ಸಾಕ್ಷಿಯಂತೆ ಬಣ್ಣಿಸುವುದಕ್ಕೆ ಸಾಧ್ಯವಾಗಲೆಂದು ನಾನು ಆಶಿಸುತ್ತೇನೆ.

೬

## ಚೈತನ್ಯದಾತ

ನಾನು ಕಲ್ಕತ್ತೆಯಲ್ಲಿದ್ದಾಗ, ಆಧ್ಯಾತ್ಮಿಕ ಜೀವನವೆಂಬುದು ಸ್ಪಷ್ಟವಾಗಿರುವುದು, ಅದನ್ನು ಬೇಕಾದರೆ ಕೆಲವು ಮುಖ್ಯವಾದ ಮಾರ್ಗದ ಮೂಲಕ ಸಾಧನೆ ಮಾಡಿ ಪಡೆಯಬಹುದು ಎಂದು ಕೇಳಿದ್ದೆ. ನಾನು ಹಿಮಾಲಯಕ್ಕೆ ಬಂದಮೇಲೆ ಭಗವಂತನನ್ನು ಪಡೆಯಬೇಕೆಂಬ ಉತ್ಕಟ ಆಕಾಂಕ್ಷೆಯೆ ಅದಕ್ಕೆ ಮೂಲ ಎಂಬುದನ್ನು ಅರಿತೆನು. ಇದನ್ನು ನಾನು ವರ್ಣಿಸಲಾರೆ. ನನ್ನ ಗುರುದೇವನ ವೈಶಿಷ್ಟ್ಯವೇ ಇದಾಗಿತ್ತು. ಹಲವರು ಬೆಂಕಿಯನ್ನು ಹೇಗೆ ಮಾಡಬೇಕೆಂದು ಹೇಳಿದರೆ ಅವರು ತಾವೆ ಬೆಂಕಿಯನ್ನು ಕೊಡಬಲ್ಲವರಾಗಿದ್ದರು. ಇತರರು ಸಲಹೆ ಕೊಟ್ಟರೆ ಇವರು ಆ ವಸ್ತುವನ್ನೇ ಪ್ರತ್ಯಕ್ಷ ಕೊಡಬಲ್ಲವರಾಗಿದ್ದರು.

ನಾನು ಇಲ್ಲಿ ಮುಚ್ಚುಮರೆಯಿಲ್ಲದೆ ವಿಶದವಾಗಿ ಹೇಳುತ್ತೇನೆ. ನಾನು ಶಿಷ್ಯಳಾದ ಕಾಲವನ್ನು ಪರ್ಯಾಲೋಚಿಸಿದರೆ ನಾನೊಬ್ಬ ಆಲೋಚನಾ ಗ್ರಾಹಕಿಯಂತೆ ಇದ್ದೆ ಎನ್ನಿಸುವುದು. ನನ್ನ ಗುರುದೇವನ ಶಕ್ತಿಪ್ರವಾಹದಲ್ಲಿ ನಾನು ಸಾಕಷ್ಟು ತೇಲಲು ಸಾಧ್ಯವಾಯಿತು ಎಂದು ಪ್ರತ್ಯಕ್ಷ ಅನುಭವದಿಂದ ಹೇಳಬಲ್ಲೆ. ಇಂತಹ ಅನುಭವ, ಬಾಹ್ಯವಸ್ತುಗಳು ಹೇಗೆ ಒಂದು ನಿಯಮಕ್ಕೆ ಅಡಿಯಾಳಾಗಿರುವುವೋ ಅದರಂತೆಯೇ ಇದೂಕೂಡ ಒಂದು ನಿಯಮದ ಅಧೀನದಲ್ಲಿದೆ ಎಂದು ಸಾರುವುದು. ಇದು ಹೇಗೆ ನನಗೆ ಪ್ರಾಪ್ತವಾಯಿತು ಎಂಬುದನ್ನು ಸ್ಪಷ್ಟವಾಗಿ ವಿವರಿಸಲು ಯತ್ನಿಸುವೆನು.

ಸ್ವಾಮಿಜಿ ತಮ್ಮ ಸ್ವಂತ ಅನುಭವಗಳ ವಿಷಯದಲ್ಲಿ ಯಾವಾಗಲೂ ಗೋಪ್ಯವಾಗಿದ್ದರು. ಪ್ರಪಂಚದಲ್ಲಿ ಹಲವು ಕಡೆ ಇವರಿಗೆ ಅನೇಕರು ತಮ್ಮ ಹೃದಯದಲ್ಲಿರುವುದನ್ನೆಲ್ಲಾ ತೋಡಿಕೊಂಡಿದ್ದರೂ ಇವರುಮಾತ್ರ ಸಾಧ್ಯವಾದಷ್ಟು ಈ ಗುರು ವೃತ್ತಿಯಿಂದ ಪಾರಾಗಬೇಕೆಂದು ಇಚ್ಛಿಸುತ್ತಿದ್ದರು. ಯಾರಾದರೂ ಇವರನ್ನು ಪ್ರಶ್ನೆ ಕೇಳಿದರೆ ಅದಕ್ಕೆ ಉತ್ತರ ಹೇಳಬೇಕಾದಾಗ, ತಮ್ಮ ಜೀವನದ ಅನುಭವಗಳನ್ನು ವ್ಯಕ್ತಗೊಳಿಸಬೇಕಾಗಿ ಬಂದಾಗ, ನಿಟ್ಟುಸಿರು ಬಿಟ್ಟು ಅಸಮಾಧಾನವನ್ನು ಸೂಚಿಸುತ್ತಿದ್ದರು. ಸಮಾಧಿಸ್ಥಿತಿಯಲ್ಲಿ ಮಾನಸಿಕ ಸ್ಥಿತಿ ಹೇಗೆ ಇರುತ್ತದೆ ಎಂದು ಲಂಡನ್ನಿನಲ್ಲಿ ಅನೇಕವೇಳೆ ಉಪನ್ಯಾಸಗಳ ಮಧ್ಯೆ ಇವರನ್ನು ಪ್ರಶ್ನೆ ಕೇಳಿ

ದಾಗ ಪ್ರೇಕ್ಷಕರು ಯಾತಕ್ಕಾದರೂ ಈ ಪ್ರಶ್ನೆಯನ್ನು ಕೇಳಿದರೊ ಎಂದು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತಿದ್ದರು.

ಸ್ವಾಮಿಜಿಯವರ ಗುಂಪಿನಲ್ಲಿ ನಾನು ಬರಬಹುದೆಂದು ಹೇಳಿದರು. ನಾನು ಯಾವ ಕೆಲಸವನ್ನು ಭರತಖಂಡದಲ್ಲಿ ಮಾಡಬೇಕೆಂದು ಬಯಸಿದ್ದರೊ ಅದರ ವಿಷಯವಾಗಿ ಅವರಿಂದಲೇ ನಾನು ತರಬೇತಾಗಲು ಅನುಕೂಲವಾಗುವುದು. ಆದರೆ ಈ ಶಿಕ್ಷಣದ ಕ್ರಮ ಮಾತ್ರ ಸಾಮಾನ್ಯವಾಗಿತ್ತು. ನಾವು ಒಂದು ತೋಟದಲ್ಲೊ ಹಾಲಿನಲ್ಲೊ ಕುಳಿತುಕೊಂಡು ಸ್ವಾಮಿಜಿ ಹೇಳುವುದನ್ನು ಕೇಳುತ್ತಿದ್ದೆವು. ಪ್ರತಿಯೊಬ್ಬರೂ ತಮಗೆ ಇಷ್ಟವಾದುದನ್ನು ಆರಿಸಿಕೊಂಡು ಅನಂತರ ತಮಗೆ ತೋಚಿದಂತೆ ಓದಿಕೊಳ್ಳುತ್ತಿದ್ದರು.

೧೮೯೮ನೇ ವರುಷದಲ್ಲೆಲ್ಲ ಎಲ್ಲೊ ಒಂದ ದಿನ ಮಾತ್ರ ಸ್ವಾಮಿಜಿ ನನ್ನೊಬ್ಬಳನ್ನೇ ಅರ್ಧಗಂಟೆಮಾತ್ರ ಕರೆದುಕೊಂಡು ಹೋಗಿ ಮಾತನಾಡಿದರು. ಅದೇ ಬೇಸಗೆಯ ಕೊನೆಯದಿನಗಳು. ನಾನೇನು ಮಾಡಬೇಕಾಗಿದೆ ಎಂದು ಆಗತಾನೆ ಸ್ವಲ್ಪ ಸ್ವಲ್ಪ ತಿಳಿಯುತ್ತಿದ್ದೆ. ಸಂಭಾಷಣೆ ಭವಿಷ್ಯದಲ್ಲಿ ನಾವು ಏನು ಮಾಡಬೇಕು, ನಮ್ಮ ಆದರ್ಶವೇನು ಎಂಬ ಸಾಮಾನ್ಯ ವಿಷಯಗಳಾಗಿದ್ದುವೇ ಹೊರತು ಕೇವಲ ನನ್ನ ಜೀವನಕ್ಕೆ ಮಾತ್ರ ಅನ್ವಯಿಸುವುದು ಯಾವುದೂ ಇರಲಿಲ್ಲ.

ಒಬ್ಬ ಮಹಾ ಪ್ರತಿಭಾನ್ವಿತನ ಸುತ್ತಲೂ ನೆರೆಯುವವರಲ್ಲಿ ಆತನಿಗೂ ಸುತ್ತಲೂ ನೆರೆಯುವವರಿಗೂ ಅಗೋಚರವಾದ ಭಾವಸಂಬಂಧಗಳು ಏರ್ಪಡುವುವು. ಇವೇ ಆ ಮಹಾವ್ಯಕ್ತಿಯ ಆಲೋಚನಾಸ್ರೋತ ಹರಿಯುವ ಪಾತ್ರವಾಗುತ್ತದೆ. ಇವುಗಳ ಮೂಲಕವೇ ಕೇಳುವವರು ಅದನ್ನು ಸ್ವೀಕರಿಸುವರು. ಗಣಿತಶಾಸ್ತ್ರಜ್ಞನಾದರೂ ಅವನು ಎಷ್ಟು ಇಂತಹ ಭಾವ ಸಂಬಂಧವನ್ನು ಇಟ್ಟುಕೊಂಡಿರುವನೊ ಅದರ ಪ್ರಮಾಣದಲ್ಲಿ ಆತನ ಆಲೋಚನೆ ಇತರರಲ್ಲಿ ಹರಡುವುದು. ಈ ಭಾವನೆ ಅವ್ಯಕ್ತವಾದುವು. ಇದನ್ನು ಪಡೆಯುವವರು ತಮ್ಮ ಆದರ್ಶಕ್ಕೆ ತಕ್ಕಂತೆ ಇದನ್ನು ಮೆಚ್ಚುವರು. ಕೆಲವರು ತಾವು ಭೃತ್ಯರಂತೆ ಭಾವಿಸುವರು, ಮತ್ತೊಬ್ಬ ಅವನ ಸಹೋದರನಂತೆಯೊ, ಸ್ನೇಹಿತನಂತೆಯೇ ಇರುವನು. ಇನ್ನೊಬ್ಬರು ಗುರುದೇವನ ವ್ಯಕ್ತಿತ್ವವನ್ನು ತಮ್ಮ ಪ್ರೀತಿಪಾತ್ರನಾದ ಮಗುವೆಂದು ಭಾವಿಸಬಹುದು. ಭರತಖಂಡದಲ್ಲಿ ಇದೊಂದು ಸ್ಪಷ್ಟವಾದ ಶಾಸ್ತ್ರವೇ ಆಗಿರುವುದು. ಯಾವು

೬

## ಚೈತನ್ಯದಾತ

ನಾನು ಕಲ್ಕತ್ತೆಯಲ್ಲಿದ್ದಾಗ, ಆಧ್ಯಾತ್ಮಿಕ ಜೀವನವೆಂಬುದು ಸ್ಪಷ್ಟವಾಗಿರುವುದು, ಅದನ್ನು ಬೇಕಾದರೆ ಕೆಲವು ಮುಖ್ಯವಾದ ಮಾರ್ಗದ ಮೂಲಕ ಸಾಧನೆ ಮಾಡಿ ಪಡೆಯಬಹುದು ಎಂದು ಕೇಳಿದ್ದೆ. ನಾನು ಹಿಮಾಲಯಕ್ಕೆ ಬಂದಮೇಲೆ ಭಗವಂತನನ್ನು ಪಡೆಯಬೇಕೆಂಬ ಉತ್ಕಟ ಆಕಾಂಕ್ಷೆಯೆ ಅದಕ್ಕೆ ಮೂಲ ಎಂಬುದನ್ನು ಅರಿತೆನು. ಇದನ್ನು ನಾನು ವರ್ಣಿಸಲಾರೆ. ನನ್ನ ಗುರುದೇವನ ವೈಶಿಷ್ಟ್ಯವೇ ಇದಾಗಿತ್ತು. ಹಲವರು ಬೆಂಕಿಯನ್ನು ಹೇಗೆ ಮಾಡಬೇಕೆಂದು ಹೇಳಿದರೆ ಅವರು ತಾವೆ ಬೆಂಕಿಯನ್ನು ಕೊಡಬಲ್ಲವರಾಗಿದ್ದರು. ಇತರರು ಸಲಹೆ ಕೊಟ್ಟರೆ ಇವರು ಆ ವಸ್ತುವನ್ನೇ ಪ್ರತ್ಯಕ್ಷ ಕೊಡಬಲ್ಲವರಾಗಿದ್ದರು.

ನಾನು ಇಲ್ಲಿ ಮುಚ್ಚುಮರೆಯಿಲ್ಲದೆ ವಿಶದವಾಗಿ ಹೇಳುತ್ತೇನೆ. ನಾನು ಶಿಷ್ಯಳಾದ ಕಾಲವನ್ನು ಪರ್ಯಾಲೋಚಿಸಿದರೆ ನಾನೊಬ್ಬ ಆಲೋಚನಾ ಗ್ರಾಹಕಿಯಂತೆ ಇದ್ದೆ ಎನ್ನಿಸುವುದು. ನನ್ನ ಗುರುದೇವನ ಶಕ್ತಿಪ್ರವಾಹದಲ್ಲಿ ನಾನು ಸಾಕಷ್ಟು ತೇಲಲು ಸಾಧ್ಯವಾಯಿತು ಎಂದು ಪ್ರತ್ಯಕ್ಷ ಅನುಭವದಿಂದ ಹೇಳಬಲ್ಲೆ. ಇಂತಹ ಅನುಭವ, ಬಾಹ್ಯವಸ್ತುಗಳು ಹೇಗೆ ಒಂದು ನಿಯಮಕ್ಕೆ ಅಡಿಯಾಳಾಗಿರುವುವೋ ಅದರಂತೆಯೇ ಇದೂಕೂಡ ಒಂದು ನಿಯಮದ ಅಧೀನದಲ್ಲಿದೆ ಎಂದು ಸಾರುವುದು. ಇದು ಹೇಗೆ ನನಗೆ ಪ್ರಾಪ್ತವಾಯಿತು ಎಂಬುದನ್ನು ಸ್ಪಷ್ಟವಾಗಿ ವಿವರಿಸಲು ಯತ್ನಿಸುವೆನು.

ಸ್ವಾಮಿಜಿ ತಮ್ಮ ಸ್ವಂತ ಅನುಭವಗಳ ವಿಷಯದಲ್ಲಿ ಯಾವಾಗಲೂ ಗೋಪ್ಯವಾಗಿದ್ದರು. ಪ್ರಪಂಚದಲ್ಲಿ ಹಲವು ಕಡೆ ಇವರಿಗೆ ಅನೇಕರು ತಮ್ಮ ಹೃದಯದಲ್ಲಿರುವುದನ್ನೆಲ್ಲಾ ತೋಡಿಕೊಂಡಿದ್ದರೂ ಇವರುಮಾತ್ರ ಸಾಧ್ಯವಾದಷ್ಟು ಈ ಗುರು ವೃತ್ತಿಯಿಂದ ಪಾರಾಗಬೇಕೆಂದು ಇಚ್ಛಿಸುತ್ತಿದ್ದರು. ಯಾರಾದರೂ ಇವರನ್ನು ಪ್ರಶ್ನೆ ಕೇಳಿದರೆ ಅದಕ್ಕೆ ಉತ್ತರ ಹೇಳಬೇಕಾದಾಗ, ತಮ್ಮ ಜೀವನದ ಅನುಭವಗಳನ್ನು ವ್ಯಕ್ತಗೊಳಿಸಬೇಕಾಗಿ ಬಂದಾಗ, ನಿಟ್ಟುಸಿರು ಬಿಟ್ಟು ಅಸಮಾಧಾನವನ್ನು ಸೂಚಿಸುತ್ತಿದ್ದರು. ಸಮಾಧಿಸ್ಥಿತಿಯಲ್ಲಿ ಮಾನಸಿಕ ಸ್ಥಿತಿ ಹೇಗೆ ಇರುತ್ತದೆ ಎಂದು ಲಂಡನ್ನಿನಲ್ಲಿ ಅನೇಕವೇಳೆ ಉಪನ್ಯಾಸಗಳ ಮಧ್ಯೆ ಇವರನ್ನು ಪ್ರಶ್ನೆ ಕೇಳಿ

ದಾಗ ಪ್ರೇಕ್ಷಕರು ಯಾತಕ್ಕಾದರೂ ಈ ಪ್ರಶ್ನೆಯನ್ನು ಕೇಳಿದರೊ ಎಂದು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತಿದ್ದರು.

ಸ್ವಾಮಿಜಿಯವರ ಗುಂಪಿನಲ್ಲಿ ನಾನು ಬರಬಹುದೆಂದು ಹೇಳಿದರು. ನಾನು ಯಾವ ಕೆಲಸವನ್ನು ಭರತಖಂಡದಲ್ಲಿ ಮಾಡಬೇಕೆಂದು ಬಯಸಿದ್ದರೊ ಅದರ ವಿಷಯವಾಗಿ ಅವರಿಂದಲೇ ನಾನು ತರಬೇತಾಗಲು ಅನುಕೂಲವಾಗುವುದು. ಆದರೆ ಈ ಶಿಕ್ಷಣದ ಕ್ರಮ ಮಾತ್ರ ಸಾಮಾನ್ಯವಾಗಿತ್ತು. ನಾವು ಒಂದು ತೋಟದಲ್ಲೊ ಹಾಲಿನಲ್ಲೊ ಕುಳಿತುಕೊಂಡು ಸ್ವಾಮಿಜಿ ಹೇಳುವುದನ್ನು ಕೇಳುತ್ತಿದ್ದೆವು. ಪ್ರತಿಯೊಬ್ಬರೂ ತಮಗೆ ಇಷ್ಟವಾದುದನ್ನು ಆರಿಸಿಕೊಂಡು ಅನಂತರ ತಮಗೆ ತೋಚಿದಂತೆ ಓದಿಕೊಳ್ಳುತ್ತಿದ್ದರು.

೧೮೯೮ನೇ ವರುಷದಲ್ಲೆಲ್ಲ ಎಲ್ಲೊ ಒಂದ ದಿನ ಮಾತ್ರ ಸ್ವಾಮಿಜಿ ನನ್ನೊಬ್ಬಳನ್ನೇ ಅರ್ಧಗಂಟೆಮಾತ್ರ ಕರೆದುಕೊಂಡು ಹೋಗಿ ಮಾತನಾಡಿದರು. ಅದೇ ಬೇಸಗೆಯ ಕೊನೆಯದಿನಗಳು. ನಾನೇನು ಮಾಡಬೇಕಾಗಿದೆ ಎಂದು ಆಗತಾನೆ ಸ್ವಲ್ಪ ಸ್ವಲ್ಪ ತಿಳಿಯುತ್ತಿದ್ದೆ. ಸಂಭಾಷಣೆ ಭವಿಷ್ಯದಲ್ಲಿ ನಾವು ಏನು ಮಾಡಬೇಕು, ನಮ್ಮ ಆದರ್ಶವೇನು ಎಂಬ ಸಾಮಾನ್ಯ ವಿಷಯಗಳಾಗಿದ್ದುವೇ ಹೊರತು ಕೇವಲ ನನ್ನ ಜೀವನಕ್ಕೆ ಮಾತ್ರ ಅನ್ವಯಿಸುವುದು ಯಾವುದೂ ಇರಲಿಲ್ಲ.

ಒಬ್ಬ ಮಹಾ ಪ್ರತಿಭಾನ್ವಿತನ ಸುತ್ತಲೂ ನೆರೆಯುವವರಲ್ಲಿ ಆತನಿಗೂ ಸುತ್ತಲೂ ನೆರೆಯುವವರಿಗೂ ಅಗೋಚರವಾದ ಭಾವಸಂಬಂಧಗಳು ಏರ್ಪಡುವುವು. ಇವೇ ಆ ಮಹಾವ್ಯಕ್ತಿಯ ಆಲೋಚನಾಸ್ರೋತ ಹರಿಯುವ ಪಾತ್ರವಾಗುತ್ತದೆ. ಇವುಗಳ ಮೂಲಕವೇ ಕೇಳುವವರು ಅದನ್ನು ಸ್ವೀಕರಿಸುವರು. ಗಣಿತಶಾಸ್ತ್ರಜ್ಞನಾದರೂ ಅವನು ಎಷ್ಟು ಇಂತಹ ಭಾವಸಂಬಂಧವನ್ನು ಇಟ್ಟುಕೊಂಡಿರುವನೊ ಅದರ ಪ್ರಮಾಣದಲ್ಲಿ ಆತನ ಆಲೋಚನೆ ಇತರರಲ್ಲಿ ಹರಡುವುದು. ಈ ಭಾವನೆ ಅವ್ಯಕ್ತವಾದುವು. ಇದನ್ನು ಪಡೆಯುವವರು ತಮ್ಮ ಆದರ್ಶಕ್ಕೆ ತಕ್ಕಂತೆ ಇದನ್ನು ಮೆಚ್ಚುವರು. ಕೆಲವರು ತಾವು ಭೃತ್ಯರಂತೆ ಭಾವಿಸುವರು, ಮತ್ತೊಬ್ಬ ಅವನ ಸಹೋದರನಂತೆಯೊ, ಸ್ನೇಹಿತನಂತೆಯೇ ಇರುವನು. ಇನ್ನೊಬ್ಬರು ಗುರುದೇವನ ವ್ಯಕ್ತಿತ್ವವನ್ನೇ ತಮ್ಮ ಪ್ರೀತಿಪಾತ್ರನಾದ ಮಗುವೆಂದು ಭಾವಿಸಬಹುದು. ಭರತಖಂಡದಲ್ಲಿ ಇದೊಂದು ಸ್ಪಷ್ಟವಾದ ಶಾಸ್ತ್ರವೇ ಆಗಿರುವುದು. ಯಾವು

ದಾದರೊಂದು ಮಾನವೀಯ ಭಾವನೆಯ ಸಂಬಂಧವಿಲ್ಲದೇ ಇದ್ದರೆ ಸಾಧಾರಣ ವ್ಯಕ್ತಿಗಳು ಆಧ್ಯಾತ್ಮಿಕ ಭಾವನೆಗಳನ್ನು ಪಡೆಯಲು ಸಾಧ್ಯವಿಲ್ಲ ಎಂದು ಭರತಖಂಡದ ಜನ ಧೈರ್ಯವಾಗಿ ಇದನ್ನು ಒಪ್ಪಿಕೊಳ್ಳುತ್ತಾರೆ. ನಾನಾದರೂ ಕೊನೆಗೆ ಆಧ್ಯಾತ್ಮಿಕಸುತೆಯಾದೆ. ಇದೊಂದು ಅತ್ಯಾನಂದ ಕರವಾದ ಸಂಬಂಧವಾಯಿತು. ನನ್ನ ಗುರುದೇವ ಬದುಕಿರುವತನಕ ಭಾರತೀಯರೆಲ್ಲ ನನ್ನನ್ನು ಆ ದೃಷ್ಟಿಯಿಂದ ನೋಡಲಾರಂಭಿಸಿದರು.

ನಮ್ಮ ಪ್ರಯಾಣಕ್ಕೆ ಮುಂಚೆ ವಿಷಯಗಳು ನನಗೆ ಸ್ಪಷ್ಟವಾಗಿ ಗೊತ್ತಿಲ್ಲದೆ ಇದ್ದುದರಿಂದ ಏನುಮಾಡಬೇಕೆಂದು ತೋಚದೆ ಹೋಯಿತು. ಈ ಸಮಯದಲ್ಲಿ ನನಗೆ ಬಂಗಾಳಿ ಮತ್ತು ಹಿಂದೂ ಧರ್ಮದ ವಿಷಯ ಗಳನ್ನು ಹೇಳಿಕೊಡಲು ಸ್ವಾಮಿ ಸ್ವರೂಪಾನಂದರಂತಹ ಯುವಕ ಉಪಾಧ್ಯಾಯರು ಸಿಕ್ಕಿದ್ದು ನನ್ನ ಅದೃಷ್ಟವೆನ್ನಬಹುದು. ಇವರಿಗೂ ನನ್ನ ಗುರುಗಳಾದ ಸ್ವಾಮಿ ವಿವೇಕಾನಂದರಿಗೂ ಆಗಲೇ ಒಂದು ಸಂಬಂಧವಿದ್ದುದರಿಂದ ಇವರ ಮೂಲಕ ನಮ್ಮ ಸುತ್ತಲೂ ಇರುವ ಜನರ ಭಾವನೆ ಮತ್ತು ಆಲೋಚನೆಯನ್ನು ತಿಳಿದುಕೊಳ್ಳಲು ಅನುಕೂಲವಾಯಿತು.

ನಾನು ಬ್ರಹ್ಮಚರ್ಯ ದೀಕ್ಷೆ ಪಡೆದ ಕೆಲವು ದಿನಗಳೊಳಗೆ ಸ್ವಾಮಿ ಸ್ವರೂಪಾನಂದರು ಆಶ್ರಮಕ್ಕೆ ಬ್ರಹ್ಮಚಾರಿಯಂತೆ ಸೇರಿದರು. ಕೆಲವು ವಾರಗಳೊಳಗಾಗಿಯೇ ಸ್ವಾಮಿಜಿ ಅವರ ಹಸ್ತದಿಂದ ಕಾಷಾಯ ವಸ್ತ್ರವನ್ನು ಸ್ವೀಕರಿಸಿ ಸ್ವಾಮಿಗಳಾದರು. ಇವರ ಮನೋವಿಕಾಸವನ್ನು ನೋಡಿ ನಾನು ಮುಗ್ಧಳಾದೆ. ಇವರು ಬಾಲ್ಯದಲ್ಲಿ ವೈಷ್ಣವ ಸಂಪ್ರದಾಯ ದಲ್ಲಿ ಬೆಳೆದವರು. ಇಲ್ಲಿ ದೇವರನ್ನು ದಯಾಮಯನಾದ ರಕ್ಷಕನೆಂದು ಶ್ರೀಕೃಷ್ಣ ಅವನ ಅವತಾರವೆಂದೂ ನೋಡುತ್ತಾರೆ. ಇದು ಪಾಶ್ಚಾತ್ಯ ದೇಶದಲ್ಲಿರುವ ಕ್ರಿಸ್ತ ಧರ್ಮದಂತೆಯೇ ಇರುವುದು. ಸಾಧಾರಣವಾಗಿ ನಮ್ಮೆಲ್ಲರ ಮನಸ್ಸನ್ನು ಕಲಕುವಂತಹ ಒಂದು ಪ್ರಸಂಗ ಅವರ ಜೀವನ ದಲ್ಲಿಯೂ ನಡೆಯಿತು. ಇವರು ಬಾಲ್ಯದಲ್ಲಿ ಮತ್ತು ಯೌವನಾವಸ್ಥೆಯಲ್ಲಿದ್ದಾಗ ಜೀವನದಲ್ಲಿ ಕೆಲವು ಅನ್ಯಾಯದ ಪ್ರಸಂಗಗಳನ್ನು ನೋಡಿ, ಜೀವನ ಸಮರ ಬಲಿಷ್ಠರ ಪರವಾಗಿದೆಯೇ ಹೊರತು ದೀನರಿಗಲ್ಲ ಎಂದು ದಯಾಮಯನಾದ ಸರ್ವರಕ್ಷಕನಾದ ದೇವರಿರುವನು ಎಂಬ ಬಾಲ್ಯದ ಕಥೆಯನ್ನು ನಂಬಲಾರದೆ ಹೋದರು. ಇವರ ಒಂದು ಕಥೆ ನನಗೆ ಜ್ಞಾಪಕ ದಲ್ಲಿದೆ. ಒಂದು ದಿನ ಜನಭರಿತವಾದ ರಸ್ತೆಯಲ್ಲಿ ಹೋಗುತ್ತಿದ್ದಾಗ,

ಮುದುಕಿಯೊಬ್ಬಳು ಅಳುತ್ತಾ ಕೆಳಗೆ ಬಿದ್ದುಹೋದ ಅಕ್ಕಿಯ ಕಾಳನ್ನು ಆಯುತ್ತಿದ್ದಳು. ಯಾರೊ ರಸ್ತೆಯಲ್ಲಿ ಹೋಗುತ್ತಿದ್ದವರಿಗೆ ತಗಲಿ ಅವಳ ಭಿಕ್ಷಾಪಾತ್ರೆ ಚೆಲ್ಲಿಹೋಗಿತ್ತು. ಇದನ್ನು ನೋಡಿದಾಗ "ದೇವರಿದ್ದರೆ ಇಂತಹ ಅನ್ಯಾಯ ಆಗುತ್ತಿರುವಾಗ ಅವನು ಏನುಮಾಡುತ್ತಿರುವನು?" ಎಂದು ದುಃಖದಿಂದ ನೊಂದು ಕೇಳಿದರು.

ಇಂತಹ ಎರಡು ಮೂರು ದೃಶ್ಯಗಳನ್ನು ನೋಡಿ ಆದ ಮೇಲೆ ಮನಸ್ಸಿನಲ್ಲಿ ದಾರುಣ ವ್ಯಥೆಯಾಯಿತು. ಈ ವ್ಯಥೆ ಎಷ್ಟು ದಾರುಣವಾಗಿತ್ತು ಎಂದರೆ ಅನಂತರ ಅವರಿಗೆ ಸರಿಯಾದ ಆರೋಗ್ಯವೇ ಇರಲಿಲ್ಲ. ಅನಂತರ ಅವರು ಜೀವನವನ್ನು ಬೇರೊಂದು ದೃಷ್ಟಿಯಿಂದ ನೋಡುವುದನ್ನು ಕಲಿತು ಅದರಿಂದ ಪಾರಾಗಿ ಶಾಂತಿಯನ್ನು ಪಡೆದರು. ಅವರು ಇನ್ನುಮೇಲೆ ಕನಸ್ಸನ್ನು ಧ್ವಂಸಮಾಡುವರು. ಬುದ್ಧನ ಮುಂಚೆ ಮತ್ತು ಅವನ ತರುವಾಯ ಹಲವು ಮುಮುಕ್ಷುಗಳು ಯಾವ ನಿರ್ಣಯವನ್ನು ಹೊಂದಿದರೊ ಅದನ್ನು ಪಡೆದರು. ಇನ್ನುಮೇಲೆ ಈ ಸಮಸ್ಯೆಗೆ ಪರಿಹಾರ ಎಲ್ಲೊ ಸಿಂಹಾಸನದ ಮೇಲೆ ದೇವರು ಕುಳಿತುಕೊಂಡಿರುವುದು, ಅವನ ಹತ್ತಿರ ಮಾನವ ಭಯದಿಂದ ಬಾಗುತ್ತಿರುವುದು ಆಗಿರಲಿಲ್ಲ. ಈಗಿರುವ ಇಂತಹ ಕನಸ್ಸಿಗೆ, ಮುಂದೆ ಬರಲಿರುವ ಪ್ರಪಂಚದಲ್ಲಿರುವ ಸುಖದುಃಖ ನ್ಯಾಯ ಮತ್ತು ಅನ್ಯಾಯಗಳನ್ನು ಒಳಗೊಂಡ ಕನಸ್ಸಿಗೆ ಕಾರಣ ಮನುಷ್ಯನ ಅಜ್ಞಾನ ಮತ್ತು ಸ್ವಾರ್ಥತೆ. ಈ ಭ್ರಾಂತಿಯನ್ನು ಜಯಿಸುವುದಕ್ಕೆ, ಅಂತರ್ಯದಲ್ಲಿ ಏನಿದೆ ಎಂಬ ಸತ್ಯವನ್ನು ತಿಳಿಯುವುದಕ್ಕೆ, ದ್ವಂದ್ವಗಳಿಂದ ಪಾರಾಗಿ ಮುಕ್ತಿ ಎಂಬ ಏಕತ್ವಭಾವನೆಯ ಸಾಕ್ಷಾತ್ಕಾರವನ್ನು ಪಡೆಯುವುದಕ್ಕೆ ಉದ್ಯುಕ್ತರಾದರು.

ಅಂದಿನಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಆಕಾಂಕ್ಷೆ ದಾವಾನಲದಂತೆ ಅವರಲ್ಲಿ ಉರಿಯತೊಡಗಿತು. ಅವರು ಅಂದಿನಿಂದ ಮನೆಯಲ್ಲಿ ಕಳೆದ ದಿನಗಳು ಅನಂತರ ಮಠದಲ್ಲಿ ಕಳೆದ ದಿನಗಳಿಗಿಂತಲೂ ಕಟುತರವಾಗಿತ್ತು. ಹಲವು ಕಾಲದ ಮೇಲೆ ನಾನು ಭಗವದ್ಗೀತೆಯನ್ನು ಇವರ ಹತ್ತಿರ ಆಲ್ಮೋರಾದಲ್ಲಿ ಓದುತ್ತಿದ್ದಾಗ ಭಗವತ್ಪ್ರೇಮ ಎಂಬುದು ಅಸಾಧ್ಯವಾದ ದಾಹ ಎಂಬುದನ್ನು ಅರಿಯಲು ಸಾಧ್ಯವಾಯಿತು.

ಸ್ವರೂಪಾನಂದರ ಪ್ರಭಾವದಿಂದ ನಾನು ಧ್ಯಾನಮಾಡಲು ಯತ್ನಿಸಿದೆ. ಅವರಿಂದ ನನಗೆ ಈ ಸಹಾಯವಾಗದೆ ಇದ್ದರೆ ಜೀವನದ

ಅತ್ಯಮೂಲ್ಯ ಅನುಭವವೊಂದನ್ನು ನಾನು ಕಳೆದುಕೊಳ್ಳುತ್ತಿದ್ದೆ. ಆಗ ನನಗೂ ನನ್ನ ಗುರುದೇವನಿಗೂ ಇದ್ದ ಸಂಬಂಧ ಅಭಿಪ್ರಾಯಗಳ ತುಮುಲ ಯುದ್ಧವೆಂದು ಬೇಕಾದರೆ ಹೇಳಬಹುದು. ಕಲಿಯುವುದಕ್ಕೆ ಎಷ್ಟೋ೦ದು ಇದೆ, ಆದರೆ ಇರುವ ಕಾಲ ಎಷ್ಟು ಅಲ್ಪ ಎಂಬುದು ಈಗ ನನಗೆ ಗೊತ್ತಾಗುವುದು. ಅತ್ಯಾವಶ್ಯಕವಾಗಿ ಮೊದಲು ಶಿಷ್ಯನಿಗೆ ಬೇಕಾಗಿರುವುದೇ ತನಗೆ ಎಲ್ಲಾ ಗೊತ್ತಿದೆ ಎಂಬ ಅಹಂಕಾರದಿಂದ ಪಾರಾಗುವುದು. ಆದರೆ ದುರದೃಷ್ಟವಶಾತ್ ನಾನು ಇದುವರೆಗೆ ಯಾವುದು ಒಳ್ಳೆಯದು ಬಹಳ ಶ್ರೇಷ್ಠ ಎಂದು ಭಾವಿಸಿದ್ದೆನೊ ಅದನ್ನೆಲ್ಲಾ ಗುರುದೇವ ಅಪ್ಪಳಿಸತೊಡಗಿದರು. ಆದರೆ ನಾನು ಇದಕ್ಕೆ ಸ್ವಲ್ಪವೂ ಸಿದ್ಧಳಾಗಿರಲಿಲ್ಲ. ವ್ಯಥೆ ತರ್ಕಕ್ಕೆ ನಿಲುಕದು. ಸ್ನೇಹಪರನಾದ ಪ್ರೀತಿಪರನಾದ ನಾಯಕನ ಕನಸು ಹಿಂದೆ ಸಾಗಿತ್ತು. ಅದರ ಸ್ಥಳದಲ್ಲಿ ಉದಾಸೀನನಾದ, ಬಹುಶಃ ಮೌನವಾಗಿ ನನಗೆ ವಿರುದ್ಧವಾದ ಒಂದು ವ್ಯಕ್ತಿ ನಿಂತಂತೆ ಇತ್ತು. ಇದರ ಪರಿಣಾಮವಾಗಿ ಆಗಿನ ಕಾಲದಲ್ಲಿ ನಾನು ಪಟ್ಟ ವ್ಯಥೆಯನ್ನು ಯುಕ್ತಿ ಮೂಲಕ ಈಗ ನಾನು ಸಮರ್ಥಿಸಿ ವಿವರಿಸಲಾರೆ.

ಅದೃಷ್ಟವಶಾತ್ ನಾನು ಯಾವ ಸೇವೆಯನ್ನು ಮಾಡಬೇಕೆಂದು ಬಂದಿದ್ದೇನೊ ಅದನ್ನು ಮಾಡದೆ ಹಿಂತಿರುಗಿ ಹೋಗಬೇಕೆಂಬ ಭಾವನೆ ಬರಲಿಲ್ಲ. ಹೀಗೆ ಮಾಡಿದರೆ ಯಾವ ಮಧುರಬಾಂಧವ್ಯವೂ ಇರಲಾರವೆಂದು ಅನಂತರ ನನಗೆ ಗೊತ್ತಾಯಿತು. ಆಗ ಪ್ರತಿದಿನವೂ ಸ್ವಾಮಿಜಿ ಅವರಿಂದ ನನಗೆ ಹೆಚ್ಚು ಹೆಚ್ಚು ವ್ಯಥೆಯಾಗುತ್ತಿರುವುದನ್ನು ನೋಡಿದ ಒಬ್ಬ ಹಿರಿಯರು ಇದರ ಪರಿಣಾಮ ಹಿತಕಾರಿಯಾಗಲಾರದೆಂದು ಸ್ವಾಮಿಜಿ ಅವರಿಗೆ ವಿನಯಪೂರ್ವಕವಾಗಿ ಆದರೂ ಗಂಭೀರವಾಗಿ ಎಚ್ಚರಿಸಿದರು. ಅವರು ಮೌನವಾಗಿ ಇದನ್ನು ಕೇಳಿ ಹೊರಟುಹೋದರು. ಸಾಯಂಕಾಲ ಪುನಃ ಬಂದಾಗ ವರಾಂಡದಲ್ಲಿ ಅವರನ್ನು ಕಂಡರು. ಅವರ ಕಡೆಗೆ ತಿರುಗಿ ಮಗುವಿನಂತೆ ಸರಳ ಸ್ವಭಾವದಲ್ಲಿ "ನೀವು ಹೇಳಿದ್ದೆ ಸರಿ, ನಮ್ಮ ಬಾಂಧವ್ಯದಲ್ಲಿ ಒಂದು ಬದಲಾವಣೆ ಯಾಗಬೇಕು. ನಾನು ಏಕಾಂಗಿಯಾಗಿರಲು ಅರಣ್ಯಕ್ಕೆ ಹೋಗುತ್ತೇನೆ. ಬರುವಾಗ ಶಾಂತಿ ತರುತ್ತೇನೆ" ಎಂದರು. ಆಗ ಅವರು ಮೇಲೆ ನೋಡಿದರು. ಆಗಸದಲ್ಲಿ ಹೊಸ ಚಂದ್ರ ತೇಲುತ್ತಿದ್ದ. ತಕ್ಷಣ ಅವರ ಧ್ವನಿ ಭಾವಪೂರಿತವಾಯಿತು. "ನೋಡಿ, ಮಹಮ್ಮದೀಯರು ಹೊಸ ಚಂದ್ರನನ್ನು ವಿಶೇಷವಾಗಿ ಭಾವಿಸುವರು. ನಾವು ಕೂಡ ಹೊಸ

ಚಂದ್ರನೊಡನೆ ಹೊಸ ಜೀವನವನ್ನು ಪ್ರಾರಂಭಿಸೋಣ" ಎಂದು ಮಾತು ನಿಲ್ಲುವುದರೊಳಗೆ ಕೈಯೆತ್ತಿ ಹೃತ್ಪೂರ್ವಕವಾಗಿ ಮೌನದಲ್ಲಿ ಅತ್ಯಂತ ದುಸ್ಸಾಧ್ಯಳಾದ ತಮ್ಮ ಶಿಷ್ಯೆಯನ್ನು ಆಶೀರ್ವದಿಸಿದರು. ಆಗ ಆಕೆ ಇವರ ಪದತಲದಲ್ಲಿ ಬಾಗುತ್ತಿದ್ದಳು. ಇದೊಂದು ಸಂಧಾನದ ಅಪೂರ್ವ ಆನಂದಾನುಭವ. ಇಂತಹ ಅನುಭವ ಗಾಯವನ್ನು ಮಾಗಿಸಬಲ್ಲದು. ಆದರೆ ಚೂರ್ಣವಾದ ಭ್ರಾಂತಿ ಕನಸ್ಸನ್ನು ಒಂದು ಗೂಡಿಸಲಾರದು. ಈ ಘಟನೆಯ ಪ್ರಾಮುಖ್ಯತೆಯನ್ನು ತಿಳಿಸುವುದಕ್ಕೆ ನಾನು ಈ ಕಥೆಯನ್ನು ಹೇಳಿರುವುದು. ಬಹಳ ಹಿಂದೆ ಶ್ರೀರಾಮಕೃಷ್ಣರೊಮ್ಮೆ ಹೇಳಿದ್ದರು, ಒಂದು ಸಮಯ ಬರುವುದು ಆಗ ನರೇಂದ್ರ ಸ್ಪರ್ಶಮಾತ್ರದಿಂದ ಆಧ್ಯಾತ್ಮಿಕ ಅನುಭವವನ್ನು ಇತರರಿಗೆ ಕೊಡಬಲ್ಲವನಾಗುವನು ಎಂದು. ಆಲ್ಮೋರಾದಲ್ಲಿ ಆ ಸಂಜೆ ಪರಮಹಂಸರ ಭವಿಷ್ಯವಾಣಿ ಸಾರ್ಥಕವಾಯಿತು ಎಂಬುದಕ್ಕೆ ನಾನೇ ಸಾಕ್ಷಿಯಾದೆ. ಧ್ಯಾನದಲ್ಲಿ ಏಕಾಂಗಿಯಾಗಿ ಇರುವಾಗ ಅನಂತವಾದ ಸಚ್ಚಿದಾನಂದದಲ್ಲಿ ತನ್ಮಯಳಾದಂತೆ ಕಂಡಿತು. ನನ್ನ ವೈಯಕ್ತಿಕಯುಕ್ತಿ ಇದರೆಡೆಗೆ ನನ್ನನ್ನು ಒಯ್ಯಲಾಗಲಿಲ್ಲ. ಇಲ್ಲಿಯ ಜನರ ಅನುದಿನದ ಆಚಾರವ್ಯವಹಾರಗಳೆಲ್ಲ ಹಿಂದೂಗಳ ಶಾಸ್ತ್ರದಲ್ಲಿ ಹೇಗೆ ಹಾಸುಹೊಕ್ಕಾಗಿದೆ ಎಂಬುದನ್ನು ಅರಿಯತೊಡಗಿದೆ. ಜೀವನದಲ್ಲಿ ಮೊದಲು ಮಹಾವ್ಯಕ್ತಿಗಳು ನಮ್ಮಲ್ಲಿ ವ್ಯಕ್ತಿಗತವಾದ ಸಂಬಂಧವನ್ನು ನಾಶಮಾಡುವುದು ವ್ಯಕ್ತಿಗೆ ಅತೀತವಾಗಿರುವ ಅನುಭವವನ್ನು ಕೊಡುವುದಕ್ಕಾಗಿ ಎಂಬುದನ್ನು ಅರಿಯತೊಡಗಿದೆ.



೭

## ಆತ್ಮಲೋಕದಲ್ಲಿ ದಾರಿಪ್ರಕಾಶ

ಇಂತಹ ಅನುಭವ ಇದೊಂದೆ ಅಲ್ಲ. ಆದರೆ ನಾನು ಸಾಂಗವಾಗಿ ವಿವರಿಸಬೇಕೆಂದಿರುವುದು ಇದೊಂದನ್ನೆ. ಈ ಘಟನೆಯಿಂದ ಪೌರಾತ್ಯ ಗುರು ಶಿಷ್ಯನಿಂದ ಏನನ್ನು ನಿರೀಕ್ಷಿಸುವನು ಎಂಬುದನ್ನು ನೋಡುವೆವು. ಎಲ್ಲಕ್ಕಿಂತ ಮೊದಲು ವಿಧೇಯತೆ ಶಿಷ್ಯನಲ್ಲಿರಬೇಕು. ಗುರು ಶುಶ್ರೂಷೆಯೂ ಇರಬೇಕು ಎಂಬುದನ್ನು ಕೇಳಿರುವೆನು. ಇಂತಹ ವಾತಾವರಣದಲ್ಲಿ ಶ್ರೀ ಗುರುವಿನ ಭಾವನೆಗಳು ಶಿಷ್ಯನ ಹೃದಯದಲ್ಲಿ ಬೀಜದಂತೆ ಮೊಳೆಯುವುವು. ನಾನು ಇದನ್ನು ವಿವರಿಸಲಾರೆ. ಈ ಕ್ಷೇತ್ರದಲ್ಲಿ ನಾನು ಮಾಡಿದ ಸೇವೆ ಅತ್ಯಲ್ಪ. ಪೆನ್ನನ್ನೊ ಸೂಜಿಯನ್ನೊ ತಂದುಕೊಡು ಎಂದು ಮಾತ್ರ ಯಾವಾಗಲಾದರೊಮ್ಮೆ ನನ್ನನ್ನು ಕೇಳುತ್ತಿದ್ದರು. ಮಗಳು ಎಂದಿಗೂ ತಂದೆಯ ಮನೆಯಲ್ಲಿ ಕೆಲಸಮಾಡಕೂಡದು. ಅವನ ಮನೆಯಲ್ಲಿ ಆಳುಗಳಿಗೆ ಅಭಾವವೆ! ಆದರೂ ಕೂಡ ನಮಗಿಂತ ಹಿರಿಯರ ಸೇವೆಯನ್ನು ಮಾಡಿದರೆ ಅವರ ಭೌತಿಕ ಮತ್ತು ಆಧ್ಯಾತ್ಮಿಕ ಅನುಭವಗಳಿಗೆ ನಾವೂ ಕೂಡ ಪಾಲುದಾರರಾಗಿ ನಮಗೂ ಆ ಲಭ್ಯ ಲಭಿಸುವುದೆಂದು ನಾನು ನಂಬುತ್ತೇನೆ.

ಪಾಶ್ಚಾತ್ಯದೇಶದಲ್ಲಿ ಕೆಲವು ಪಂಗಡದ ಜನರು ಚರ್ಚನ್ನು ಯಾವ ಶ್ರದ್ಧೆ ಮತ್ತು ಭಕ್ತಿಯಿಂದ ಕಾಣುತ್ತಾರೊ ಅದೇ ದೃಷ್ಟಿಯಲ್ಲಿ ಪೌರಾತ್ಯ ದೇಶದಲ್ಲಿ ಶಿಷ್ಯ ಗುರುವನ್ನು ಕಾಣಬೇಕಾಗಿದೆ. ಗುರುವಿನ ಸಾಧನೆ ಮತ್ತು ಸಿದ್ಧಿಗಳೆ ಅವನ ಅನುಯಾಯಿಗಳ ಹಿಂದೆ ಇರುವ ಶಕ್ತಿ. ಯಾರು ಇದನ್ನು ಒಪ್ಪಿಕೊಳ್ಳುವುದಿಲ್ಲವೊ ಅವರು ಪಾಷಂಡರು. ಶ್ರೇಷ್ಠತಮ ಗುರುವೆ ಶಿಷ್ಯನಿಗೆ ಸ್ವಾತಂತ್ರ್ಯದ ಆವಶ್ಯಕತೆಯನ್ನು ಅರಿಯುವನು. ಆದರೂ ಶಿಷ್ಯನಲ್ಲಿ ಗುರುಭಕ್ತಿ ತುಂಬಿ ತುಳುಕಾಡುತ್ತಿರಬೇಕು. ಕೇವಲ ತತ್ತ್ವದ ಮೇಲೆ ಮಾತ್ರ ನಿಂತರೆ ಆಧ್ಯಾತ್ಮಿಕ ಜೀವನ ಶುಷ್ಕವಾಗುವುದು.

ನಾವು ಇಷ್ಟು ಹೊತ್ತಿಗೆ ಆತ್ಮವಿಕಾಸಕ್ಕೆ ಮೌನ ಅತ್ಯಾವಶ್ಯಕ ಎಂದು ಪರಿಗಣಿಸಲ್ಪಡುವ ಪಂಗಡಕ್ಕೆ ಸೇರಿಹೋಗಿದ್ದೆವು. ಪೌರ ಮತ್ತು ಪಾಶ್ಚಾತ್ಯರ ವಿಭಿನ್ನ ದೃಷ್ಟಿಯನ್ನು ಈ ನಿದರ್ಶನಕ್ಕಿಂತ ಮತ್ತಾವುದೂ ಚೆನ್ನಾಗಿ ವ್ಯಕ್ತಗೊಳಿಸಲಾರದು. ಐರೋಪ್ಯರಲ್ಲಿ ಒಬ್ಬ ಇಪ್ಪತ್ತು ವರುಷ

ಗಳು ಒಬ್ಬನೇ ಇದ್ದರೆ ಹುಚ್ಚನಾಗಿ ಹೋಗುವನು ಎಂದು ಭಾವಿಸುವರು. ಆದರೆ ಪೌರಾತ್ಯರಲ್ಲಿ ಒಬ್ಬ ಇಪ್ಪತ್ತು ವರುಷಗಳು ಏಕಾಂಗಿಯಾಗಿ ಇರುವ ತನಕ ಅವನನ್ನು ಮನೋಜಿತನೆಂದು ಕರೆಯಲಾಗುವುದಿಲ್ಲ. ಆದರ್ಶಗಳ ಭಿನ್ನತೆಯನ್ನು ವಿವರಿಸುವಾಗ ಸ್ವಲ್ಪ ಅತಿಶಯೋಕ್ತಿಯನ್ನು ಉಪಯೋಗಿಸಿದ್ದರೂ ಮೂಲ ವಿಷಯ ಸತ್ಯ. ಮೌನ ಮತ್ತು ಏಕಾಂತದಲ್ಲಿರುವಾಗಲೆ ಒಬ್ಬನಿಗೆ ಅವ್ಯಕ್ತ ಆತ್ಮಾನುಭವ ಸಾಧ್ಯ ಎಂದು ಹಿಂದೂಗಳು ಹೇಳುವರು. ಅಂತರಾತ್ಮನ ವಿಕಾಸದಿಂದ ನಮ್ಮ ವ್ಯಕ್ತಿತ್ವದಲ್ಲಿರುವ ಕುಂದುಕೊರತೆಗಳೆಲ್ಲ ಕ್ರಮೇಣ ಮಾಯವಾಗುವುವು. ಆದಕಾರಣವೆ ನಿರ್ಯಾಣಮುಖರಾದ ಬುದ್ಧರ ಮುಖಕಮಲವೆಲ್ಲ ಪ್ರಶಾಂತಿಯಿಂದ ತುಂಬಿರುವುದು. ಪ್ರಪಂಚದಲ್ಲಿರುವ ವಸ್ತುಗಳು ಮತ್ತು ಅವುಗಳ ಸಂಬಂಧವೆಲ್ಲ ಒಂದು ಹುಡುಗಾಟಿಕೆ ಅಷ್ಟೆ. ಇವುಗಳ ಹಿಂದೆಲ್ಲ ನಾವು ವ್ಯಕ್ತಗೊಳಿಸಲಾರದ ಪೂರ್ಣವಿದೆ. ನಮಗೆ ಕಾಣುವುದು ವಕ್ರವಾಗಿರುವುದು, ಕೆಲಸಕ್ಕೆ ಬಾರದುದು. ಯಾರು ಎಲ್ಲಾ ಸಂಬಂಧಗಳಿಗೂ ಮೂಲದಲ್ಲಿರುವ ಸತ್ಯದಲ್ಲಿ ಮಗ್ನರಾಗುವರೊ ಅವರನ್ನು ವೈವಿಧ್ಯತೆಯಿಂದ ಕೂಡಿದ ಮಾನವ ಸಂಬಂಧದೆಡೆಗೆ ಸೆಳೆಯುವುದಕ್ಕೆ ಸಾಧ್ಯವಿಲ್ಲ. ಆ ಪರಮಸತ್ಯವನ್ನು ನಾವು ಇಲ್ಲಿ ಕಲ್ಪಿಸಿಕೊಳ್ಳುವುದಕ್ಕೆ ಆಗುವುದಿಲ್ಲ. ಅದನ್ನು ಪ್ರೀತಿ, ದಯೆ, ಶೌರ್ಯ ಎಂಬ ಭಾವನೆ ಮೂಲಕ ಕಲ್ಪಿಸಿಕೊಳ್ಳಬಹುದು. ಅದನ್ನು ಪಡೆಯುವುದಕ್ಕೆ ಇವುಗಳೆಲ್ಲವೂ ದಾರಿಯಾದರೂ ಆ ಏಕತ್ವದ ಆದರ್ಶವೊಂದೇ ಗುರಿ. ಆದಕಾರಣವೇ ಹಿಂದೂಗಳಲ್ಲಿ ಸ್ಥಿರತೆ, ಮೌನ, ತನ್ನನ್ನು ತಾನು ಮರೆಯುವುದು ಇವು ಮುಖ್ಯವಾದ ಆದರ್ಶಗಳಾಗಿವೆ. ಆದರೆ ಪೌರಾತ್ಯರಾದರೊ ಕಾರ್ಯ ತತ್ಪರತೆ, ಮೇಲೆ ಬಿದ್ದುಹೋಗಬೇಕು ಎನ್ನುವ ಸ್ವಭಾವವನ್ನು ಕೊಂಡಾಡುವರು. ನಾನು ಒಂದು ವ್ಯಕ್ತಿಯಾದರೂ ನನಗೆ ಸಂಬಂಧಿಸಿದುದನ್ನೆಲ್ಲಾ ಎಷ್ಟುಮಟ್ಟಿಗೆ ಉದಾಸೀನ ದೃಷ್ಟಿಯಿಂದ ನೋಡುವನೊ ಅಷ್ಟೂ ನನಗೇ ಅನುಕೂಲ.

ಇಂತಹ ಭಾವನೆಗಳು ನಮ್ಮ ಮನಸ್ಸಿನಲ್ಲಿ ಪ್ರಮುಖವಾಗಿರುವಾಗ ೧೮೯೮ನೇ ಮನೋಹರವಾದ ಬೇಸಗೆಯ ಕಾಲದಲ್ಲಿ ನಮಗೆ ಕಂಡ ಅವತಾರಗಳೆಲ್ಲರಿಗಿಂತಲೂ ಜನರ ಕಣ್ಣುಮುಂದೆ ಬರದೆಹೋದ ಮಹಾತ್ಮರು ಶ್ರೇಷ್ಠತಮರೆಂದು ಗೊತ್ತಾಯಿತು. ಅವರು ನಿರಾಕಾರರಾಗಿ, ಅವ್ಯಕ್ತರಾಗಿ ಮತ್ತೊಮ್ಮೆ ಪ್ರಪಂಚಕ್ಕೆ ಬರುವುದಿಲ್ಲವೆಂದು ಹೊರಟುಹೋದರು.

ಸ್ವಾಮಿಜಿ ಮಧ್ಯೆಮಧ್ಯೆ ದೇವರನ್ನು ಕುರಿತು ಯೋಚಿಸುವುದು ಕೂಡ ಪಾಪ, ನಮ್ಮ ಶಕ್ತಿಯನ್ನು ವ್ಯಕ್ತಗೊಳಿಸುವುದು ತಪ್ಪು ಎನ್ನುತ್ತಿದ್ದರು. ಬುದ್ಧನ ಭೂತದಯೆಯ ಹಿಂದೆಯೂ ವ್ಯಕ್ತಿಯ ನೆನಹು ಇತ್ತು. . ಕ್ರೈಸ್ಥನ ಪವಿತ್ರತೆಯ ಹಿಂದೆಯೂ ವ್ಯಕ್ತಿಛಾಯೆಯಿತ್ತು.

ಭರತಖಂಡದ ಸಾಧುಗಳಲ್ಲೆಲ್ಲ ಈ ಕೊನೆಯ ಭಾವನೆ ಸರ್ವ ಸಾಮಾನ್ಯವೆಂದು ಗೊತ್ತಾಯಿತು. ಒಂದು ಸಲ ನಮ್ಮ ಡೇರೆಗಳನ್ನು ಗೊತ್ತಿಲ್ಲದೆ ಯಾತ್ರಿಕರ ಮಧ್ಯೆ ಕಟ್ಟಿದರು. ಹಲವು ಜನ ಇದನ್ನು ಒಪ್ಪ ಲಿಲ್ಲ. ಸ್ವಾಮಿಜಿ ಅವರ ಹತ್ತಿರ ದೂರು ಹೇಳಲು ಹೋದರು. ಆದರೂ ಸ್ವಾಮಿಜಿ ಆ ಸ್ಥಳದಿಂದ ಡೇರೆಯನ್ನು ಬಿಚ್ಚಲು ಸಮ್ಮತಿ ಈಯಲಿಲ್ಲ. ಅಲ್ಲಿಗೆ ಒಬ್ಬ ಅಪರಿಚಿತ ಸಾಧು ಬಂದು, "ಸ್ವಾಮಿಜಿ ನಿಮಗೆ ಹೀಗೆ ಮಾಡುವುದಕ್ಕೆ ಶಕ್ತಿ ಇದೆ. ಆದರೆ ಅವನ್ನು ವ್ಯಕ್ತಗೊಳಿಸಬಾರದು" ಎಂದು ವಿನಯದಿಂದ ಕೇಳಿಕೊಂಡರು. ತಕ್ಷಣ ಸ್ವಾಮಿಜಿ ತಮ್ಮ ಡೇರೆ ಯನ್ನು ಬೇರೆ ಕಡೆಗೆ ವರ್ಗಾಯಿಸಿದರು.

ಸಾಕ್ಷಾತ್ಕಾರ, ಶಾಂತಿ ಮತ್ತು ನಿವೃತ್ತಿಯ ಮೂಲಕ ವ್ಯಕ್ತವಾಗು ವುದು ಎನ್ನುವುದಕ್ಕೆ ಸಾಕಾದಷ್ಟು ನಿದರ್ಶನಗಳನ್ನು ನೋಡಬಹು ದಾಗಿತ್ತು. ಸ್ವಾಮಿಜಿ ಅನೇಕವೇಳೆ ಇದ್ದಕ್ಕೆ ಇದ್ದಂತೆಯೇ ಹೊರಟು ಹೋಗಿಬಿಡುತ್ತಿದ್ದರು. ಅನಿರೀಕ್ಷಿತವಾಗಿ ಪುನಃ ಬರುತ್ತಿದ್ದರು. ಇತರ ರೊಂದಿಗೆ ಇರುವುದು ಒಂದು ಯಾತನೆ ಎಂಬಂತೆ ಅವರು ಭಾವಿಸುತ್ತಿ ದ್ದರು. ಇವರ ಪ್ರಖ್ಯಾತಿಯನ್ನು ಕೇಳಿ ಇವರ ದರ್ಶನಾರ್ಥವಾಗಿ ಬರುವ ಜನರನ್ನು ನೋಡಿದಾಗ ಅವರಿಗೆ ಬೇಜಾರಾಗುತ್ತಿತ್ತು. ದರ್ಶನಾರ್ಥಿಗಳು ಇವರ ದೋಣಿಗೆ ಬಂದು ಇವರೆದುರಿಗೆ ಸುಮ್ಮನೆ ಬಹಳಕಾಲ ಕುಳಿತು ಕೊಳ್ಳುತ್ತಿದ್ದರು. ಸ್ವಲ್ಪವೂ ಇವರ ಏಕಾಂತಕ್ಕೆ ಅವಕಾಶವೇ ಇರುತ್ತಿರ ಲಿಲ್ಲ. ಪ್ರೇಯಕ ತನ್ನ ಪ್ರೇಯಸಿಯನ್ನು ನೆನಸಿಕೊಳ್ಳುವಂತೆ, ಮೌನವಾಗಿ ಅನಾಮಧೇಯನಾಗಿ ಗೈರಿಕವಸನಧಾರಿಯಾಗಿ ಅಲೆಯುತ್ತಿರುವ ಅಥವಾ ಗೋಪ್ಯದಲ್ಲಿರುವ ಜೀವನವನ್ನು ಮನನಮಾಡುತ್ತಿದ್ದರು. ಇಂದೋ ನಾಳೆಯೋ ಅವರು ಎಂದೆಂದಿಗೂ ಹೊರಟುಹೋಗುತ್ತಾರೆ; ಇದೇ ಕೊನೆಯಸಲ ನಾವು ಅವರನ್ನು ಕೇಳುತ್ತಿರುವುದು ಎಂದು ಯಾರಾದರೂ ಹೇಳಿದ್ದರೆ ಅದೇನೂ ಆಶ್ಚರ್ಯವಾಗಿ ಕಾಣುತ್ತಿರಲಿಲ್ಲ. ಅವರು ಮತ್ತು ಎಲ್ಲಕ್ಕೂ ಅವರನ್ನೇ ನೆಚ್ಚಿದ ನಾವುಗಳೆಲ್ಲ ನಿತ್ಯಾತ್ಮನೆಂಬ ಗಂಗಾಪ್ರವಾಹದ

ಮೇಲೆ ಕೊಚ್ಚಿ ಹೋಗುತ್ತಿರುವ ಹುಲ್ಲಿನೆಸಳಿನಂತೆ ಇದ್ದರು. ಯಾವ ಕ್ಷಣದಲ್ಲಿ ಬೇಕಾದರೆ ಅದು ಅವರಿಗೆ ಮೌನದಂತೆ ವ್ಯಕ್ತವಾಗುವುದು. ಯಾವ ಕ್ಷಣದಲ್ಲಿ ಬೇಕಾದರೂ ಪ್ರಪಂಚದ ಅವರ ಬಾಳು ಕೊನೆಗಾಣಬಹುದಾಗಿತ್ತು.

ಯೋಜನೆ ಇಲ್ಲದೆ ಇರುವುದು ಅವರಿಗೊಂದು ಆಕಸ್ಮಿಕವಾಗಿರಲಿಲ್ಲ. ಕೆಲವು ವರುಷಗಳಾದ ಮೇಲೆ ಸ್ವಾಮಿಜಿ ಯಾರದೊ ಪತ್ರಕ್ಕೆ ಉತ್ತರ ಬರೆದು ನನಗೆ ತೋರಿಸಲು ಬಂದಾಗ ಅವರಿಗೆ ಪ್ರಾಪಂಚಿಕ ದೃಷ್ಟಿಯ ಬುದ್ಧಿವಾದವನ್ನು ಇತ್ತೆ. ಆಗ ಸ್ವಾಮಿಜಿ "ಯೋಜನೆ, ಯೋಜನೆ" ಎಂದು ರೇಗಿ ಬಿದ್ದರು. "ಆದಕಾರಣವೆ ಪಾಶ್ಚಾತ್ಯರಾದ ನೀವು ಯಾವ ಧರ್ಮವನ್ನೂ ಸೃಷ್ಟಿಸಲಾರಿರಿ. ನಿಮ್ಮಲ್ಲಿ ಯಾರಾದರೂ ಅದನ್ನು ಮಾಡಿದ್ದರೆ ಅದೇ ಯಾವ ಯೋಜನೆಯೂ ಇಲ್ಲದ ಕ್ಯಾಥೊಲಿಕ್ ಸಾಧುಗಳು. ಯೋಜನಾಬದ್ಧ ಜೀವಿಗಳೆಂದೂ ಧರ್ಮವನ್ನು ಸಾರಲಾರರು" ಎಂದರು.

ನಾವು ಜೀಲಂ ನದಿಯ ಮೇಲೆ ಬೇಸಗೆಯ ಹಿತಕರವಾದ ಪ್ರಯಾಣದಲ್ಲಿದ್ದಾಗ ಆಳು, "ಸ್ವಾಮಿಜಿಯವರ ದೋಣಿ ಒಂದು ಗಂಟೆಗೆ ಮುಂಚೆ ಎಲ್ಲಿಯೋ ಹೋಯಿತು ಅವರಿಂದು ಬರುವುದು ಕಾಣೆ" ಎಂದು ಹೇಳುವ ಸುದ್ದಿಯನ್ನು ಕೇಳುವುದಕ್ಕೆ ನಾವು ಸದಾ ಸಿದ್ಧರಾಗಿರಬೇಕಾಗಿತ್ತು. ಅವರು ಒಂದು ದಿನವೊ ಹಲವು ದಿನವೊ ಗೈರು ಹಾಜರ್ ಆಗಿರುತ್ತಿದ್ದರು. ಅದು ನಮಗೆ ಗೊತ್ತಾಗುತ್ತಲೇ ಇರಲಿಲ್ಲ. ಆದರೆ ಅವರು ಯಾವಾಗಲೂ ಇಂತಹ ಏಕಾಂತದಿಂದ ಹಿಂತಿರುಗಿ ಬಂದಾಗ ಅವರ ಮುಖದಲ್ಲಿ ಶಾಂತಿ ಕಾಂತಿಗಳು ತಾಂಡವಾಡುತ್ತಿದ್ದವು. ಮಾತಿನಲ್ಲಿ ಅತಿ ಗಹನವಾದ ಆಳವಾದ ಭಾವನೆಗಳು ಉಕ್ಕುತ್ತಿದ್ದವು. ಶ್ರೀರಾಮಕೃಷ್ಣರ ಶಿಷ್ಯರಿಗೆಲ್ಲಾ ಅನೂಚಾನವಾಗಿ ಬಂದ ಧಾರ್ಮಿಕ ಆಚಾರಗಳಲ್ಲಿ ಬಹಳ ವಿಶ್ವಾಸ. ರೋಮಿನಲ್ಲಿ ನಡೆಯುವ ಒಂದು ಉತ್ಸವವನ್ನು ನೋಡಿದಾಗ ನಮ್ಮ ಭಕ್ತಿ ಉಕ್ಕುವಂತೆ ಇತ್ತು ಎಂದಿರುವರು ಅವರಲ್ಲಿ ಒಬ್ಬ ಶಿಷ್ಯರು. ಭಕ್ತರ ಪ್ರತಿಯೊಂದು ಅನುಷ್ಠಾನವಲ್ಲಿಯೂ ಭಾಗಿಯಾಗುವುದು ಸಂಘದ ಆದರ್ಶ. ನನ್ನ ಗುರುದೇವ ತೀರ್ಥಸ್ಥಳಗಳಿಗೆ ಹೋದಾಗ ಹಾಗೆಯೇ ಆಚರಿಸಿದ್ದುದನ್ನು ನಾನು ನೋಡಿರುವೆನು. ಇತರರಂತೆ ತಾವೂ ಹಾಲು ಅನ್ನವನ್ನು ನೈವೇದ್ಯಕ್ಕೆ ಕೊಡುತ್ತಿದ್ದರು. ಏನೂ ಅರಿಯದ ಹೆಂಗಸು ಜಪಮಾಡುವಂತೆ ಸ್ವಾಮಿಜಿ ಅವರೂ ಮಾಡುತ್ತಿದ್ದರು. ಇಂತಹ ಪ್ರಸಂಗಗಳಲ್ಲಿ

ಎಲ್ಲ ವಿಧದ ವಾಡಿಕೆ ಮತ್ತು ಧಾರ್ಮಿಕ ಆಚಾರಗಳನ್ನು ವಿವರವಾಗಿ ಪರಿಪಾಲಿಸುತ್ತಿದ್ದರು. ಸ್ವಾಮಿಜಿ ತಮ್ಮ ಮಹತ್ವಶಿಖರಕ್ಕೆ ಏರುವುದಕ್ಕೆ ಮುಂಚೆ ತಾವು ಎಲ್ಲರೊಡನೆ ಒಂದು ಎಂದು ಭಾವಿಸತೊಡಗಿದರು.

ಕಾಶ್ಮೀರದಲ್ಲಿ ಎರಡು ಸ್ಥಳಗಳು ಬಹಳ ಪವಿತ್ರ ಎಂದು ಪರಿಗಣಿಸಲ್ಪಟ್ಟವೆ. ಒಂದು ಕ್ಷೀರಭವಾನಿ. ಇಲ್ಲಿ ನೈಸರ್ಗಿಕ ಚಿಲುಮೆಯ ಹತ್ತಿರ ಜಗನ್ಮಾತೆಯನ್ನು ಪೂಜಿಸುವರು. ಮತ್ತೊಂದೆ ಅಮರನಾಥ, ಹಿಮಾಲಯದ ಗಿರಿಗುಹೆಯಲ್ಲಿರುವ ಹಿಮಲಿಂಗ. ನಮ್ಮ ಬೇಸಗೆಯ ಪರ್ಯಟನದಲ್ಲಿ ಪ್ರಮುಖ ಘಟನೆಗಳೇ ಈ ಎರಡು ತೀರ್ಥಸ್ಥಳಗಳನ್ನೂ ಸಂದರ್ಶಿಸಿದ್ದು. ಆದರೆ ನಮ್ಮಲ್ಲಿ ಹಿರಿಯಾಸೆಗಳೂ ಇದ್ದವು. ಕ್ರಮವಾಗಿ ಧ್ಯಾನಮಾಡುವುದನ್ನು ಕಲಿಯಬೇಕೆಂದು ಆಸೆ ಇತ್ತು. ಒಂದು ಏಕಾಂತ ಸ್ಥಳದಲ್ಲಿ ಸ್ವಾಮಿಜಿಯವರ ನಿರ್ದಿಷ್ಟಸಲಹೆಯಮೇರೆಗೆ ಮೌನವಾಗಿರಬೇಕೆಂದು ಬೇರೆ ಆಶಿಸಿದೆವು. ಇದಕ್ಕಾಗಿ ಸೆಪ್ಟೆಂಬರ್ ಪ್ರಾರಂಭದಲ್ಲಿ ಆಚ್‌ಬಾಲ್ ಎಂಬಲ್ಲಿ ಅರಣ್ಯಸಮಿಾಪದಲ್ಲಿ ಡೇರೆಯನ್ನು ಹೂಡಿದೆವು. ಆಗಸ್ಟ್ ಪ್ರಾರಂಭದಲ್ಲಿ ಅಮರನಾಥ ಯಾತ್ರೆಯನ್ನು ಪೂರೈಸಿದ್ದೆವು. ಸೆಪ್ಟೆಂಬರ್ ೧೩ನೇ ತೇದಿ ಸ್ವಾಮಿಜಿ ಕ್ಷೀರಭವಾನಿಗೆ ತೆರಳಿದರು. ಕೊನೆಗೆ ನಾವು ಅವರನ್ನು ಬಾರಾಮುಲ್ಲ ಎಂಬ ಕಡೆ ಅಕ್ಟೋಬರ್ ಹನ್ನೆರಡನೇ ತೇದಿ ಬೀಳ್ಕೊಟ್ಟೆವು.

ನಮಗಾದ ಅನುಭವಗಳಲ್ಲಿ ಹಿರಿಯದಾದುದೇ ನಾವು ಯಾವ ಜ್ಞಾನಜ್ಯೋತಿಯ ಸಮಿಾಪದಲ್ಲಿದ್ದೆವೊ ಅದರಿಂದ ಸತತ ನಮ್ಮ ಮೇಲೆ ಮಿಂಚುತ್ತಿದ್ದ ಕಾಂತಿ. ಒಂದುಸಲಿ ಅವರು ಬಹಳ ದಿನಗಳಾದಮೇಲೆ ಬಂದರು. ಅವರು ಆಗ ಭಕ್ತಿಯ ವಿಷಯವನ್ನು ಮಾತನಾಡತೊಡಗಿದರು. ಆ ಸಮಯದಲ್ಲಿ ಊಟಕ್ಕೆ ಅಣಿಯಾಗಿದೆ ಎಂದು ಆಳು ಹೇಳಲು ಬಂದ. ಆದರೆ ಭಗವಂತನ ಭಕ್ತಿಯ ವಿಷಯದಲ್ಲೆ ತನ್ಮಯರಾಗಿದ್ದ ಅವರಿಗೆ ಊಟದ ಮಾತನ್ನು ಸಹಿಸುವುದಕ್ಕೆ ಆಗಲಿಲ್ಲ. ಮತ್ತೊಂದುದಿನ ಸಂಜೆ ಸ್ಥಿರಮಾತಾ ಎಂಬ ನಮ್ಮ ಅಭ್ಯಾಗತರ ದೋಣಿಯಲ್ಲಿ ಕುಳಿತುಕೊಂಡು ಮೆಲ್ಲಗೆ ಮಾತನಾಡುತ್ತಿದ್ದೆವು. ಆಗ ತಕ್ಷಣ ಸ್ವಾಮಿಜಿ ಬಂದು ನಮ್ಮೊಡನೆ ಕೆಲವು ನಿಮಿಷ ಕಳೆದರು. ಮಾತು ಇನ್ನೇನು ಯೂರೋಪಿಗೆ ಹೋಗುವ ವಿಚಾರವಾಗಿತ್ತು. ಅದೂ ಕೊನೆಗೊಂಡಿತು. ಅನಂತರ ಇತರರು ಯೂರೋಪಿಗೆ ಹೊರಟುಹೋದರೆ ಯಾರು ಹಿಂದೆ ಉಳಿಯಬೇಕಾಗುವುದೋ

ಅವರು ತಾನೊಬ್ಬಳೆ ಇರಬೇಕಾಗುವುದು, ಎಲ್ಲರೂ ಹೊರಟುಹೋಗುವರು ಎಂದು ಖಿನ್ನಳಾದಳು. ಸ್ವಾಮಿಜಿ ಅಪೂರ್ವವಾದ ಮಾರ್ದವದೊಡನೆ ಆಕೆಯನ್ನು ನೋಡಿ ಹೀಗೆಂದರು: "ಏತಕ್ಕೆ ಇಷ್ಟು ಖಿನ್ನಳಾಗಿರುವೆ. ಹಸ್ತಲಾಘವಕೊಟ್ಟು ಏತಕ್ಕೆ ನಗುಮುಖದಿಂದ ಕಳುಹಿಸಬಾರದು? ಪಾಶ್ಚಾತ್ಯರದು ಯಾವಾಗಲೂ ಗೋಳು ಮುಖವೇ. ನೀವು ದುಃಖವನ್ನು ಆರಾಧಿಸುತ್ತೀರಿ. ನಿಮ್ಮ ದೇಶದಲ್ಲೆಲ್ಲ ನಾನು ಇದನ್ನು ನೋಡಿದೆ. ಪಾಶ್ಚಾತ್ಯ ಸಮಾಜದಲ್ಲಿ ಹೊರಗೆ ನಗುವೋನಗು; ಆದರೆ ಒಳಗೆ ಗೋಳು. ಎಲ್ಲಾ ದುಃಖದಲ್ಲಿ ಪರ್ಯವಸಾನವಾಗುವುದು. ತಮಾಷೆ ಹಾಸ್ಯ ಎಲ್ಲಾ ಹೊರಗೆ, ಆದರೆ ಒಳಗೆ ನಿಜವಾಗಿಯೂ ದುಃಖ ಬೇಯುತ್ತಿರುವುದು. ಆದರೆ ಇಲ್ಲಿ [ಭರತಖಂಡದಲ್ಲಿ] ಹೊರಗೆ ವ್ಯಸನ, ಮಂಕು ಕವಿದಿದೆ. ಆದರೆ ಒಳಗೋ ಆನಂದ ಸ್ವಚ್ಛಂದ."

"ವಿಶ್ವ ಭಗವಂತನ ಆವಿರ್ಭಾವ ಎಂಬ ಸಿದ್ಧಾಂತ ನಮ್ಮಲ್ಲಿದೆ. ಕೇವಲ ಲೀಲೆಗಾಗಿ ಅವತಾರಗಳು ಪ್ರಪಂಚಕ್ಕೆ ಬರುವುದು. ಎಲ್ಲಾ ಆಟ, ಬರೀ ಆಟ. ಕ್ರಿಸ್ತನನ್ನು ಶಿಲುಬೆಗೆ ಏತಕ್ಕೆ ಏರಿಸಿದರು? ಇದು ಬರೀ ಆಟ. ಇದರಂತೆಯೇ ಜೀವನ. ಸುಮ್ಮನೆ ಭಗವಂತನೊಂದಿಗೆ ಆಡಿ. ಇದೆಲ್ಲಾ ಆಟ ಆಟ ಎನ್ನಿ. ನೀವು ಏನಾದರೂ ಮಾಡುತ್ತೀರೇನು?" ಮರು ಮಾತಾಡದೆ ತಾರಾಖಚಿತ ನಿಶೆಯಲ್ಲಿ ಹೊರಟು ತಮ್ಮ ದೋಣಿಯನ್ನು ಸೇರಿದರು. ನಾವು ಕೂಡ ನದಿಯ ಮೌನದಲ್ಲಿ ಅವರನ್ನು ಬೀಳ್ಕೊಟ್ಟೆವು.

ಒಂದು ದಿನ ಸಾಯಂಕಾಲ ನಾವು ಏಕಾಂತದಲ್ಲಿದ್ದ ಕಾಲದಲ್ಲಿ ನದಿಯ ತೀರದಲ್ಲಿದ್ದ ಹಿರಿಯಮರಗಳ ಕೆಳಗೆ ಕುಳಿತೆವು. ನಾಯಕನ ವಿಷಯವಾಗಿ ಅವರು ಮಾತನಾಡಿದರು. ಆಗಿನ ಕೆಲವು ಸಂಸ್ಥೆಯ ವಿಷಯ ವನ್ನು ಕುರಿತು ಮಾತನಾಡತೊಡಗಿದರು. ಅದರಲ್ಲಿ ಒಂದು, ಸಂಘ ಸ್ಥಾಪಕರ ಕಾಲದಲ್ಲೆ ಸುವ್ಯವಸ್ಥಿತನಾಗಿ ಹಲವು ಜನಗಳನ್ನೊಳಗೊಂಡು ಕ್ರಮೇಣ ವಿಕಾಸವಾಗುತ್ತಿತ್ತು. ಆದರೆ ಮತ್ತೊಂದಾದರೊ ಛಿದ್ರಛಿದ್ರ ವಾಗುತ್ತಿತ್ತು. ಕೊನೆಗೆ ಅವರು ಹೀಗೆಂದರು: "ಒಂದು ಜನ್ಮದಲ್ಲೆ ನಾಯಕನಾಗಲಾರ ಎಂದು ನಾನು ನಂಬತೊಡಗಿರುವೆ. ನಾಯಕನಾ ಗಿಯೇ ಒಬ್ಬ ಹುಟ್ಟಬೇಕಾಗುವುದು. ಯೋಜನೆಗಳನ್ನು ಮಾಡುವುದು, ವ್ಯವಸ್ಥೆ ನಡೆಸುವುದೆಲ್ಲ ಕಷ್ಟ. ನಿಜವಾದ ನಾಯಕನ ರಹಸ್ಯವಿರುವುದೇ ಭಿನ್ನಭಿನ್ನ ಪ್ರಕೃತಿಯವರನ್ನು ಅವರಲ್ಲಿ ಸರ್ವಸಾಮಾನ್ಯನಾಗಿರುವ

ವಿಶ್ವಾಸದ ಮೂಲಕ ಒಟ್ಟಿಗೆ ಸೇರಿಸುವುದರಲ್ಲಿದೆ. ಇದನ್ನು ನಾವು ಪ್ರಯತ್ನಪೂರ್ವಕ ಸಾಧಿಸುವುದು ಅಸಾಧ್ಯ. ಅನೈಚ್ಛಿಕವಾಗಿ ಇದು ಆಗಬೇಕಾಗಿದೆ."

ಇದಾದ ನಂತರ ಮಾತು ಹೇಗೊ ಪ್ಲೇಟೊ ಕಡೆಗೆ ತಿರುಗಿತು. ಯಾರೋ ಪ್ಲೇಟೋನ ಭಾವನಾ ಸಿದ್ಧಾಂತವನ್ನು ಕೇಳಿದರು. ಇದನ್ನು ಸ್ವಾಮಿಜಿ ವಿವರಿಸಿ ತಮ್ಮ ಸುತ್ತಲಿದ್ದವರಲ್ಲಿ ಯಾರೋ ಒಬ್ಬರ ಕಡೆ ನೋಡಿ ಹೇಳಿದರು: "ಆದಕಾರಣವೆ ಇದೆಲ್ಲ ಆ ಭಾವವನ್ನು ವ್ಯಕ್ತಗೊಳಿಸಲು ಮಾಡಿದ ಅಲ್ಪಪ್ರಯತ್ನ. ಆ ಭಾವವೊಂದೆ ಸತ್ಯ ಮತ್ತು ಪರಿಪೂರ್ಣ. ಎಲ್ಲೊ ಒಂದು ಆದರ್ಶವಿದೆ. ನೀವು ಇಲ್ಲಿ ಅದನ್ನು ವ್ಯಕ್ತಗೊಳಿಸಲು ಪ್ರಯತ್ನಮಾಡುತ್ತಿರುವಿರಿ. ಎಷ್ಟೋ ವಿಧದಲ್ಲಿ ನಮ್ಮ ಪ್ರಯತ್ನ ವ್ಯರ್ಥ ವಾಗುವುದು. ಆದರೂ ಪ್ರಯತ್ನಿಸುತ್ತಾ ಹೋಗಿ. ಒಂದಲ್ಲ ಒಂದು ದಿನ ನೀವು ಅದನ್ನು ವ್ಯಕ್ತಗೊಳಿಸುವಿರಿ."

"ಹಿಂದೂಗಳಂತೆ ನಾನು ಸಂಸಾರದಿಂದ ಪಾರಾಗಲು ಇಚ್ಛೆಯಿಲ್ಲ" ಎಂದರು ಯಾರೋ ಒಬ್ಬರು ಸ್ವಾಮಿಜಿ ಸಂಸಾರಬಂಧನದಿಂದ ಪಾರಾಗಿ ಎಂದು ಹೇಳಿದಾಗ. ಮುಕ್ತಿಯನ್ನು ಪಡೆಯುವುದಕ್ಕಿಂತ ನನಗೆ ಯಾವ ಕೆಲಸ ಇಷ್ಟವೊ ಅದನ್ನು ಮಾಡಲು ಪ್ರಪಂಚಕ್ಕೆ ಬರಲಾಸೆ" ಎಂದರು. ಸ್ವಾಮಿಜಿ ತಕ್ಷಣ ಉತ್ತರವಿತ್ತರು: "ಅದಕ್ಕೆ ಕಾರಣ ನೀನು ಪ್ರಗತಿ ಎಂಬ ಭಾವದಿಂದ ಪಾರಾಗದೆ ಇರುವುದು. ಆದರೆ ಪರಿಸ್ಥಿತಿ ಏನೂ ಉತ್ತಮವಾಗುವುದಿಲ್ಲ. ಅವುಗಳಲ್ಲಿ ಮಾಡುವ ಬದಲಾವಣೆಗಳಿಂದ ನಾವು ಮೇಲಾಗುವವರು."

ಈ ಕೊನೆಯ ವಾಕ್ಯ ನನಗೆ ವೇದಸಮಾನವಾಗಿದೆ. "ಮಾಡುವ ಬದಲಾವಣೆಯಿಂದ ಉತ್ತಮರಾಗುವವರು ನಾವು." ನಾವು ಆಲ್ಮೋರಾ ದಲ್ಲಿದ್ದಾಗ ಸ್ವಭಾವತಃ ಸ್ನೇಹಪರನಾದವನೊಬ್ಬನು ಸ್ವಾಮಿಜಿ ಅವರನ್ನು ಕರ್ಮದ ವಿಷಯವಾಗಿ ಪ್ರಶ್ನಿಸಲು ಬಂದನು. ಬಲಾಢ್ಯರು ಬಲಹೀನರನ್ನು ಸದೆಬಡಿಯುವುದನ್ನು ನೋಡುವ ಕರ್ಮ ನಮ್ಮದಾಗಿರು ವಾಗ ಏನುಮಾಡಬೇಕು ಎಂದು ಕೇಳಿದನು. ಸ್ವಾಮಿಜಿ ಕೋಪದಿಂದ ಅವನ ಕಡೆ ತಿರುಗಿ ಹೀಗೆ ಹೇಳಿದರು: "ಏತಕ್ಕೆ? ಬಲಾಢ್ಯನನ್ನು ಸದೆಬಡೆಯ ಬೇಕು! ಈ ಕರ್ಮದಲ್ಲಿ ನಿನ್ನ ಪಾತ್ರದ ಕೆಲಸವನ್ನೇ ನೀನು ಮರೆತಿರುವೆ. ದಂಗೆ ಏಳಲು ನಿನಗೆ ಯಾವಾಗಲೂ ಅಧಿಕಾರವಿದೆ."

---

೮

## ಅಮರನಾಥ

ಒಂದು ದಿನ ನಾವು ಆಚ್‌ಬಾಲ್ ಎಂಬಲ್ಲಿ ಮೊಗಲ ತೋಟದಲ್ಲಿ ಹೊರಗೆ ಊಟಕ್ಕೆ ಕುಳಿತಾಗ ಸ್ವಾಮಿಜಿ ಇದ್ದಕ್ಕೆ ಇದ್ದಂತೆಯೆ ತಾವು ಯಾತ್ರಿಕರೊಡನೆ ಅಮರನಾಥಕ್ಕೆ ಹೋಗುವುದಾಗಿ ಹೇಳಿದರು. ಜೊತೆಗೆ ತಮ್ಮ ಮಗಳನ್ನೂ ಕರೆದುಕೊಂಡು ಹೋಗುತ್ತೇನೆ ಎಂದರು. ನಮ್ಮವರೆಲ್ಲ ನನ್ನನ್ನು ಇದಕ್ಕಾಗಿ ಅಭಿನಂದಿಸಿದರು. ಅದೃಷ್ಟಶಾಲಿಗೆ ಯಾವ ವಿಘ್ನವನ್ನೂ ಯಾರೂ ತಂದೊಡ್ಡಲಿಲ್ಲ. ಇದರಿಂದ ಮತ್ತು ಯಾತ್ರೆಯ ವಿಚಾರವನ್ನು ನೋಡಿಕೊಳ್ಳುತ್ತಿದ್ದ ಪ್ರಾಂತ್ಯಾಧಿಕಾರಿಯ ಸಹಾಯದಿಂದ ಒಂದು ಅಪೂರ್ವ ಅನುಭವವನ್ನು ನೀಡುವ ಯಾತ್ರೆಗೆ ಸನ್ನಾಹಗಳು ಪ್ರಾರಂಭವಾದವು.

ಆ ಕಾಲದಲ್ಲಿ ಕಾಶ್ಮೀರ ಯಾತ್ರಾರ್ಥಿಗಳಿಂದ ತುಂಬಿ ತುಳುಕಾಡುವಂತೆ ಇತ್ತು. ನಾವು ಯಾತ್ರೆಗೆ ಅಣಿಯಾಗಲು ಆಚ್‌ಬಾಲನ್ನು ಬಿಟ್ಟು ಇಸ್ಲಾಮಾಬಾದಿಗೆ ಬಂದೆವು. ಎಲ್ಲೆಲ್ಲಿಯೂ ಸಂಚರಿಸುತ್ತಿರುವ ಯಾತ್ರಿಕರ ತಂಡವೇ ಕಾಣುತ್ತಿತ್ತು. ಇವರಲ್ಲಿ ಯಾವ ಸದ್ದು ಗದ್ದಲವೂ ಇರಲಿಲ್ಲ; ಒಂದು ಕ್ರಮವಿತ್ತು. ನೋಡುವುದಕ್ಕೆ ದೃಶ್ಯ ಅಂದವಾಗಿ ಕಾಣುತ್ತಿತ್ತು. ಎರಡುಮೂರು ಸಾವಿರ ಜನ ರಾತ್ರಿ ಒಂದು ಬಯಲಿನಲ್ಲಿ ತಂಗುವರು. ಬೆಳಿಗ್ಗೆ ಅಷ್ಟುಹೊತ್ತಿಗೇ ಎದ್ದು ಹೊರಡುತ್ತಿದ್ದರು. ನೆನ್ನೆ ಅವರು ಅಲ್ಲಿ ತಂಗಿದ್ದರು ಎಂಬುದಕ್ಕೆ ಅವರು ಬಿಟ್ಟ ಒಲೆ ಬೂದಿಯಲ್ಲದೆ ಮತ್ತೇನೂ ಅಲ್ಲಿ ಕಾಣುತ್ತಿರಲಿಲ್ಲ. ಅವರ ಜೊತೆಯಲ್ಲೆ ಒಂದು ಅಂಗಡಿ ಬೀದಿಯೇ ಹೋಗುತ್ತಿತ್ತು. ತಂಗುವ ಕಡೆಯಲ್ಲೆಲ್ಲ ಡೇರೆಯನ್ನು ಹೂಡಿ ಅಂಗಡಿಯನ್ನು ಅಷ್ಟು ಶೀಘ್ರದಲ್ಲಿ ತೆಗೆದುಬಿಡುತ್ತಿದ್ದರು. ಇಂತಹ ಒಂದು ವ್ಯವಸ್ಥೆ ಅವರೊಡನೆ ಜನ್ಮತಃ ಬಂದಂತೆ ಇತ್ತು. ಶಿಬಿರದ ಮಧ್ಯಭಾಗದಲ್ಲಿ ದೊಡ್ಡದೊಂದು ರೋಡು ಇರುತ್ತಿತ್ತು. ಪಕ್ಕದಲ್ಲಿದ್ದ ಅಂಗಡಿಯಲ್ಲಿ ಒಣಗಿದ ಹಣ್ಣು, ಹಾಲು, ಬೇಳೆ, ಅಕ್ಕಿ ಮೊದಲಾದುವನ್ನು ಕೊಳ್ಳಬಹುದಾಗಿತ್ತು. ಯಾವುದಾದರೊಂದು ಎತ್ತರವಾದ ಕಡೆ ತಹಶೀಲ್‌ದಾರ್ ಮತ್ತು ಅವರ ಎಡಬಲಗಳಲ್ಲಿ ನನ್ನ ಮತ್ತು ಸ್ವಾಮಿಜಿ ಡೇರೆಯನ್ನು

ಹೂಡುತ್ತಿದ್ದರು. ಇಲ್ಲಿ ಜನರು ನೆರೆಯಲು ಮಾತುಕತೆಯಾಡಲು ಅವಕಾಶವಾಗುತ್ತಿತ್ತು.

ಎಲ್ಲಾ ಪಂಥಗಳಿಗೆ ಸೇರಿದ ಸಾವಿರಾರು ಸಾಧುಗಳಿದ್ದರು. ಎಲ್ಲರಿಗೂ ಗೈರಿಕ ವಸನದ ಡೇರೆ. ಕೆಲವರ ಡೇರೆಯಂತೂ ಛತ್ರಿಗಿಂತ ಸ್ವಲ್ಪ ದೊಡ್ಡದಾಗಿತ್ತು. ಸಾಧುಗಳಮೇಲೆ ಸ್ವಾಮಿಜಿ ಅವರ ಪ್ರಭಾವ ಅದ್ಭುತವಾಗಿತ್ತು. ಇವರಲ್ಲಿ ಹೆಚ್ಚು ಬುದ್ಧಿವಂತರಾದವರು ಪ್ರತಿಯೊಂದು ತಂಗುವ ಕಡೆಯೂ ಸ್ವಾಮಿಜಿ ಡೇರೆಗೆ ಹೋಗುತ್ತಿದ್ದರು. ಬೆಳಕಿರುವ ತನಕ ಅವರೊಡನೆ ಸಂಭಾಷಣೆಯಲ್ಲಿ ನಿರತರಾಗಿರುತ್ತಿದ್ದರು. ಅನಂತರ ಸ್ವಾಮಿಜಿ ಹೇಳಿದರು ಅವರು ಮಾತನಾಡುತ್ತಿದ್ದುದೆಲ್ಲ ಶಿವನಿಗೆ ಸಂಬಂಧಪಟ್ಟದ್ದು ಎಂದು. ಸ್ವಾಮಿಜಿ ವಿಶಾಲಜಗತ್ತನ್ನು ನೋಡಿ ತಮ್ಮ ದೃಷ್ಟಿಯನ್ನು ವಿಶಾಲಗೊಳಿಸಿಕೊಳ್ಳಬೇಕೆಂದಾಗ ಅವರು ಒಪ್ಪುತ್ತಿರಲಿಲ್ಲ. ಪರದೇಶೀಯರೂ ಮನುಷ್ಯರೆ ಎನ್ನುತ್ತಿದ್ದರು ಅವರು. ಆದರೆ ಸ್ವದೇಶಿ ಎಂಬ ಭೇದಭಾವನೆ ಏಕೆ? ಅವರಲ್ಲಿ ಹಲವರು ಸ್ವಾಮಿಜಿಗೆ ಮಹಮ್ಮದೀಯರ ಮೇಲೆ ಇದ್ದ ಪ್ರೀತಿ ವಿಶ್ವಾಸವನ್ನು ಮೆಚ್ಚುತ್ತಿರಲಿಲ್ಲ. ಸ್ವದೇಶಿ ವಿದೇಶೀಯರನ್ನು ಒಪ್ಪಿಕೊಳ್ಳುವ ಇವರ ಪರಲೋಕದೃಷ್ಟಿಯಲ್ಲಿ, ಹಿಂದುಗಳು ಮತ್ತು ಮಹಮ್ಮದೀಯರು ವಿರುದ್ಧ ಎಂದು ಭಾವಿಸುತ್ತಿದ್ದರೇ ಹೊರತು ಇವರಿಬ್ಬರೂ ಐಕ್ಯರಾಗಿರಬಲ್ಲರು ಎಂಬುದು ಅವರ ಭಾವನೆಗೇ ನಿಲುಕದ ವಸ್ತುವಾಗಿತ್ತು. ಪಂಜಾಬು ಧರ್ಮಕ್ಕಾಗಿ ಸತ್ತವರ ರಕ್ತದಿಂದ ಶೋಷಿತವಾಗಿದೆ ಎಂದು ಅವರು ವಾದಿಸುತ್ತಿದ್ದರು. ಇಲ್ಲಿಯಾದರೂ ಸ್ವಲ್ಪ ಮತಾಂಧತೆಯನ್ನು ಅಭ್ಯಾಸಮಾಡಲಿ! ಭವಿಷ್ಯದಲ್ಲಿ ಇದು ಸುಳುವಿಲ್ಲದೆ ಹೋಗುವುದೆಂದು ಅರಿತ ಸ್ವಾಮಿಜಿ ತತ್ಕಾಲಕ್ಕೆ ಕೆಲವು ರಿಯಾಯಿತಿಗಳನ್ನು ತೋರಿದರು. ಅವರಿಗೆ ತಮ್ಮ ಸಹೋದರರಮೇಲೆ ಇದ್ದ ವಿಶ್ವಾಸವನ್ನು ಇದು ತೋರುವುದು. ಇದರಿಂದ ತಮ್ಮ ಭಾವನೆಗಳನ್ನು ಹೆಚ್ಚು ಪ್ರಭಾವಕಾರಿಯಾಗಿ ಅವರಿಗೆ ತಿಳಿಸಲು ಸಾಧ್ಯವಾಯಿತು. ಸ್ವಾಮಿಜಿ ತಮ್ಮ ಸಂಭಾಷಣೆಯ ವಿಷಯವನ್ನು ಕುರಿತು ನಮಗೆ ಹೇಳಿದಾಗ ಈ ಸಂಭಾಷಣೆಯ ಅಸಂಬದ್ಧತೆಯನ್ನು ನೋಡಿ ನಮಗೆ ನಗುಬರದೆ ಇರಲಿಲ್ಲ. ನಮ್ಮ ಜೊತೆಯಲ್ಲಿ ಬರುತ್ತಿದ್ದ ತಹಶೀಲ್‌ದಾರ್ ಮತ್ತು ಹಲವು ಜನ ಉದ್ಯೋಗಸ್ಥರೆಲ್ಲ ಮಹಮ್ಮದೀಯರಾಗಿದ್ದರು. ಹಿಂದೂ ಯಾತ್ರಿಕರೊಡನೆ ಇವರು ಕೊನೆಗೆ ಶಿವನ ಗುಹೆಯೊಳಗೆ ಪ್ರವೇಶಮಾಡಿದರೆ ಯಾರೂ ಇವರನ್ನು ವಿರೋಧಿಸು

ತ್ತಿರಲಿಲ್ಲ. ಕೊನೆಗೆ ತಹಶೀಲದಾರರು ಕೆಲವು ಸ್ನೇಹಿತರೊಡನೆ ಸ್ವಾಮಿಜಿಯವರ ಬಳಿಗೆ ಬಂದು ತಮ್ಮನ್ನು ಶಿಷ್ಯರನ್ನಾಗಿ ಸ್ವೀಕರಿಸಬೇಕೆಂದು ಕೇಳಿಕೊಂಡರು. ಯಾರಿಗೂ ಇದರಲ್ಲಿ ಯಾವ ಅಸಮಂಜಸವಾಗಲಿ ವಿಚಿತ್ರವಾಗಲಿ ಕಾಣಲಿಲ್ಲ.

ನಾವು ಇಸ್ಲಾಮಾಬಾದನ್ನು ಬಿಟ್ಟಮೇಲೆ ಯಾತ್ರಿಕರನ್ನು ಭವನ್ ಎಂಬ ಕಡೆ ಪುನಃ ಸಂಧಿಸಿದೆವು. ಇದು ಹಲವು ತೀರ್ಥಗಳಿಗೆ ಪ್ರಖ್ಯಾತವಾದ ಸ್ಥಳ. ರಾತ್ರಿ ಆ ಕೊಳದ ಶುಭ್ರವಾದ ನೀರಿನಲ್ಲಿ ಪ್ರತಿಬಿಂಬಿಸುತ್ತಿದ್ದ ದೀಪದ ಕಾಂತಿ, ದೇವಸ್ಥಾನದಿಂದ ದೇವಸ್ಥಾನಕ್ಕೆ ಗುಂಪುಗುಂಪಾಗಿ ಹೋಗುತ್ತಿದ್ದ ಯಾತ್ರಿಕರ ತಂಡ, ಇನ್ನೂ ನನ್ನ ಕಣ್ಣಿಗೆ ಕಟ್ಟಿದಂತೆ ಇದೆ.

ಪಹಿಲ್‌ಗಾಮ್ ಎಂಬುದು ಕುರುಬರ ಒಂದು ಗ್ರಾಮ. ಅಂದು ಏಕಾದಶಿಯಾದುದರಿಂದ ಅಲ್ಲೇ ಯಾತ್ರಿಕರು ಅಂದು ತಂಗಿದ್ದರು. ಇದೊಂದು ಸುಂದರವಾದ ಬೆಟ್ಟದ ಕೊರಕಲು ಪ್ರದೇಶದಲ್ಲಿತ್ತು. ಮೇಲಿನ ಬೆಟ್ಟದಿಂದ ನದಿಯೊಂದು ಹರಿದು ಬರುತ್ತಿತ್ತು. ಅದರಲ್ಲಿ ಮಧ್ಯೆ ಮಧ್ಯೆ ಮರಳು ದಿಬ್ಬಗಳ ದ್ವೀಪಗಳು. ನದಿಯ ಕೆಳಗಾದರೊ ಮೇಲಿಂದ ಹರಿದು ಬಂದ ನುಣುಪಾದ ಕಲ್ಲಿನ ರಾಶಿ. ಅದರ ತೀರದಲ್ಲಿದ್ದ ಬೆಟ್ಟವಂತೂ ಪೈನ್ ಮರಗಳಿಂದ ತುಂಬಿಹೋಗಿ ಕಪ್ಪಾಗಿತ್ತು. ಸೂರ್ಯಾಸ್ತಮಯದ ಸಮಯದಲ್ಲಿ ಬೆಟ್ಟದಮೇಲೆ ನೋಡಿದಾಗ ಇನ್ನೂ ಪೂರ್ಣವಾಗಿಲ್ಲದ ಚಂದ್ರ ಪ್ರಕಾಶಿಸುತ್ತಿದ್ದ. ನಾರ್ವೆ ಮತ್ತು ಸ್ವಿಟ್ಸರ್ಲೆಂಡ್ ದೇಶಗಳ ಅತಿ ಸುಂದರವಾದ ಪ್ರಶಾಂತವಾದ ದೃಶ್ಯಗಳಂತೆ ಇತ್ತು ಇದು. ಇಲ್ಲಿಯೇ ಮಾನವರ ಕೊನೆಯ ಮನೆಗಳನ್ನು ನೋಡಿದೆವು. ಸೇತುವೆ, ಒಂದು ತೋಟದ ಮನೆ, ಸುತ್ತಲೂ ಉತ್ತ ಹೊಲ, ಮತ್ತು ಅಲ್ಲೊಂದು ಇಲ್ಲೊಂದು ಗುಡಿಸಲುಗಳು ಇದ್ದವು. ಇಲ್ಲೆ ಒಂದು ಹುಲ್ಲು ಬೈಲಿನ ಮೂಲಕ ಮುಂದುವರಿದಾಗ ಯಾತ್ರಿಕರ ತಂಡವನ್ನು ಹಿಂದೆಯೇ ಬಿಟ್ಟು ಹೊರಟೆವು.

ಅವರ್ಣನೀಯವಾದ ನೈಸರ್ಗ ಸೌಂದರ್ಯದಲ್ಲಿ ಮೂರು ಸಾವಿರ ಯಾತ್ರಿಕರು ತಮ್ಮ ಮುಂದಿರುವ ಕಣಿವೆಯಲ್ಲಿ ಮುಂದುವರಿದರು. ಮೊದಲನೆದಿನ ನಾವು ಪೈನ್ ಮರಗಳ ನಡುವೆ ಶಿಬಿರ ಮಾಡಿದೆವು. ಎರಡನೆದಿನ ಹಿಮಪಂಕ್ತಿಗಳನ್ನು ದಾಟಿ ಒಂದು ಘನೀಭೂತವಾದ ನದೀ ತೀರದಲ್ಲಿ ಡೇರೆಯನ್ನು ಹೂಡಿದೆವು. ಅಂದು ರಾತ್ರಿ ಶಿಬಿರಧ್ವನಿಯನ್ನು

ಜ್ಯೂನಿಪರ್ ಗಿಡಗಳಿಂದ ಮಾಡಿದರು. ಮಾರನೆದಿನ ಇನ್ನೂ ಮೇಲೆ ಶಿಬಿರವಾಯಿತು. ಅಂದು ಆ ಗಿಡಗಳನ್ನು ಆಳುಗಳು ಹುಡುಕಿಕೊಂಡು ತುಂಬಾ ಅಲೆದಾಡಿ ಕೊನೆಗೆ ಸ್ವಲ್ಪ ತಂದು ಬೆಂಕಿ ಹಚ್ಚಿದರು. ಮುಂದೆ ರಸ್ತೆ ಕೊನೆಗೊಂಡಿತು. ಕಾಡುದಾರಿಯಲ್ಲಿ ಕಡಿದಾದ ಸ್ಥಳದಲ್ಲಿ ಸ್ವಲ್ಪ ದೂರ ನಡೆದುಕೊಂಡು ಹೋದಮೇಲೆ ಗುಹೆ ಇರುವ ಒಂದು ಕಣಿವೆ ಯೊಳಗೆ ಬಂದೆವು. ನಾವು ಇಲ್ಲಿ ಮುಂದುವರಿದು ಹೋದಂತೆ ಬೆಟ್ಟಗಳು ಹೊಸದಾಗಿ ಬಿದ್ದ ಮಂಜಿನಿಂದ ಸಿಂಗರಿಸಿಕೊಂಡಂತೆ ಕಂಡವು. ಅನಂತರ ದೊಡ್ಡದೊಂದು ಗುಹೆಗೆ ಹೋದೆವು. ಅಲ್ಲಿ ಸೂರ್ಯರಶ್ಮಿ ಎಂದಿಗೂ ಬರ ಲಾರದು. ಅಲ್ಲೆ ಒಂದು ಮೂಲೆಯಲ್ಲಿ ದೊಡ್ಡದೊಂದು ಹಿಮಲಿಂಗ ಕಂಡಿತು. ಮೊದಲು ಇದನ್ನು ಕಂಡ ಕುರುಬರಿಗೆ ದೇವರೇ ಇವರಿಗಾಗಿ ಕಾಯುತ್ತಿದ್ದಂತೆ ಕಂಡಿರಬಹುದು.

ಯಾತ್ರಿಕರು ಏನುಮಾಡಬೇಕೊ ಅದನ್ನೆಲ್ಲಾ ಸ್ವಾಮಿಜಿ ನೆರವೇರಿಸಿ ದರು. ಜಪಮಾಡಿದರು, ಉಪವಾಸವಿದ್ದರು, ಹತ್ತಿರ ಹರಿಯುತ್ತಿದ್ದ ಹಿಮಝರಿಯ ಪಂಚನದಿಗಳಲ್ಲಿ ಸ್ನಾನಮಾಡಿದರು. ಈಗ ಗುಹೆ ಯನ್ನು ಪ್ರವೇಶಮಾಡಿದಮೇಲೆ ಶಿವನೇ ಅವರಿಗೆ ಕಂಡಂತೆ ಇತ್ತು. ಯಾತ್ರಿಕರ ಗುಜುಗುಂಪು, ಮೇಲೆ ಹಾರಾಡುತ್ತಿದ್ದ ಪಾರಿವಾಳಗಳು ಇವು ಗಳ ನಡುವೆ ಸ್ವಾಮಿಜಿ ಯಾರಿಗೂ ಗೋಚರವಾಗದಂತೆ ಎರಡುಮೂರು ವೇಳೆ ಶಿವನಿಗೆ ನಮಸ್ಕರಿಸಿದರು. ಅನಂತರ ಎಲ್ಲಿ ಭಾವವಶನಾಗುವೆನೋ ಎಂದು ಅಂಜಿ ಎದ್ದು ಮೌನವಾಗಿ ಹೊರಗೆ ಹೊರಟರು. ಈ ಅಲ್ಪ ಸಮಯದಲ್ಲಿ ಶಿವ ಇವರಿಗೆ ಅಮರನಾಗುವ ವರ ಕೊಟ್ಟನೆಂದು ಹೇಳುತ್ತಿ ದ್ದರು. ಎಂದರೆ ತಾವೇ ಇಚ್ಛಿಸಿದಾಗ ಮಾತ್ರ ಸಾಯುವುದು. ಬಾಲ್ಯ ದಿಂದಲೂ ಅವರಲ್ಲಿ ತಾವೊಂದು ಶಿವ ದೇವಾಲಯದಲ್ಲಿ ಪ್ರಾಣಬಿಡುತ್ತೇ ನೆಂಬ ಭಾವನೆ ಬಂದು ಹೋಗಿತ್ತು. ಇದರಿಂದ ಆ ಭಾವನೆ ಈಡೇರಿತೊ ವಿಫಲವಾಯಿತೊ ಗೊತ್ತಿಲ್ಲ.

ಗುಹೆಯ ಹೊರಗೆ ಪುರೋಹಿತರ ಕಾಟವಿರಲಿಲ್ಲ. ಅಮರನಾಥ ಗುಹೆ ಸರಳವಾಗಿದೆ. ನೈಸರ್ಗಿಕ ಸೌಂದರ್ಯದ ಪಕ್ಕದಲ್ಲೆ ಇದೆ. ಪೂರ್ಣಿಮೆ ರಕ್ಷಾಬಂಧನದ ದಿನ. ಅಂದೇ ಯಾತ್ರೆ ಕೊನೆಗೊಳ್ಳುವುದು. ನಮ್ಮ ಕೈಗೆ ಕೆಂಪು ಮತ್ತು ಹಳದಿಯ ಪವಿತ್ರದಾರಗಳನ್ನು ಕಟ್ಟಿಕೊಂಡೆವು.

ಅನಂತರ ನಮ್ಮ ಡೇರೆಗೆ ಬರುವುದಕ್ಕೆ ಮುಂಚೆ ಝರಿಯ ಹತ್ತಿರದ ಒಂದು ಬಂಡೆಯ ಮೇಲೆ ಊಟಮಾಡಿ ಸ್ವಲ್ಪ ವಿಶ್ರಮಿಸಿಕೊಂಡೆವು.

ಸ್ವಾಮಿಜಿಯವರಂತೂ ಆ ಸ್ಥಳದ ವಿಷಯವಾಗಿಯೆ ತನ್ಮಯರಾಗಿ ಹೋಗಿದ್ದರು. ಇಷ್ಟೊಂದು ರಮ್ಯವಾದ ಸ್ಥಳಕ್ಕೆ ತಾವೆಂದೂ ಹಿಂದೆ ಹೋಗಿರಲಿಲ್ಲವೆಂದು ಭಾವಿಸಿದರು. ಬಹಳ ಹೊತ್ತು ಮೌನವಾಗಿ ಕುಳಿತರು. ಅನಂತರ ಮೆಲ್ಲಗೆ ಹೀಗೆ ಹೇಳತೊಡಗಿದರು: "ಈ ಗುಹೆಯನ್ನು ಮೊದಲು ಹೇಗೆ ಕಂಡುಹಿಡಿದರು ಎಂಬುದನ್ನು ನಾನು ಚೆನ್ನಾಗಿ ಕಲ್ಪಿಸಿಕೊಳ್ಳಬಲ್ಲೆ. ಬೇಸಗೆಯಲ್ಲಿ ಒಂದು ಸಲ ಕುರಿಗಳ ಮಂದೆ ತಪ್ಪಿಸಿಕೊಂಡಿರಬಹುದು. ಕುರುಬರು ಅದನ್ನು ಹುಡುಕಿಕೊಂಡು ಇಲ್ಲಿಗೆ ಬಂದಿರಬಹುದು. ಅನಂತರ ಅವರು ಮನೆಗೆ ಹಿಂತಿರುಗಿದ ಮೇಲೆ ಸಾಕ್ಷಾತ್ ಮಹಾದೇವನೇ ತಮಗೆ ಕಂಡನೆಂದು ನೆರೆಯವರಿಗೆ ಹೇಳಿರಬಹುದು."

ಹೇಗಾದರೂ ಇರಲಿ, ನನ್ನ ಗುರದೇವನ ಜೀವನದಲ್ಲಾದರೂ ಈ ಕಥೆ ನಿಜವೆಂದು ಕಾಣುವುದು. ಆ ಶಿವಲಿಂಗದ ಪವಿತ್ರತೆ ಮತ್ತು ಅದರ ಧವಳ ಕಾಂತಿಗೆ ಇವರು ಮಾರುಹೋಗಿ ತನ್ಮಯರಾದರು. ಕೈಲಾಸದ ರಹಸ್ಯವೇ ಅವರಿಗೆ ಗುಹೆಯಲ್ಲಿ ವ್ಯಕ್ತವಾದಂತೆ ಇತ್ತು. ಅನಂತರ ತಾವು ಬದುಕಿರುವ ಪರಿಯಂತರ ಅವರು ಆ ಬೆಟ್ಟದ ಗುಹೆಯನ್ನು ಹೇಗೆ ಪ್ರವೇಶಮಾಡಿದರು, ಸಾಕ್ಷಾತ್ ಮಹದೇವನನ್ನು ಕಂಡರು ಎಂಬುದನ್ನು ಮರೆಯಲಿಲ್ಲ.

---

೯

## ಕ್ಷೀರ ಭವಾನಿ

ಅಮರನಾಥದ ಯಾತ್ರೆ ಆಗುವವರೆಗೆ ನಮ್ಮ ಮನಸ್ಸೆಲ್ಲ ಶಿವನ ಭಾವನೆಯಿಂದ ತುಂಬಿತುಳುಕಾಡುತ್ತಿತ್ತು. ಹಿಮಾಲಯದಲ್ಲಿ ನಾವು ಎಷ್ಟುಮುಂದೆ ಹೋದರೆ ಅಷ್ಟು ಅವನ ಹತ್ತಿರ ಬಂದಂತೆ ಆಗುತ್ತಿತ್ತು. ಹಿಮಾಲಯವೆ ಅವನ ಮನೆ ಮತ್ತು ಪ್ರತೀಕ. ರಾತ್ರಿವೇಳೆ ಅರ್ಧಚಂದ್ರ ಹಿಮಪ್ರವಾಹದ ತೀರದಲ್ಲಿ ಒಯ್ಯೊಯ್ಯನೆ ಓಲಾಡುತ್ತಿರುವ ಪೈನ್ ಮರಗಳ ಮೇಲೆ ನೀಲಿ ಯಾಗಸದಲ್ಲಿ ಬೆಳಗುತ್ತಿದ್ದನು. ಇದು ಆ ಮಹಾದೇವನ ಹುಬ್ಬಿನಂತೆ ನಮ್ಮನ್ನು ಆಕರ್ಷಿಸುತ್ತಿತ್ತು. ಎಲ್ಲಕ್ಕಿಂತಲೂ ಹೆಚ್ಚಾಗಿ ನಾವು ಧ್ಯಾನದ ಹೊರವಲಯದಲ್ಲಿದ್ದೆವು. ಅದರ ಕೇಂದ್ರದಲ್ಲಿ ಗುಣಾತೀತನಾದ ಭಾವಾತೀತನಾದ ಪರಮಶಿವ ಮೌನದಲ್ಲಿ ಧ್ಯಾನತನ್ಮಯನಾಗಿದ್ದನು. ಹಿಂದೂ ಜನಾಂಗದ ಶಿವನ ಭಾವನೆ, ಮುಮುಕ್ಷುವಾದವನು ಕಲ್ಪಿಸಿಕೊಳ್ಳುವಂತಹ ಶ್ರೇಷ್ಠತಮಭಾವನೆ. ಪರಿಶುದ್ಧಾತ್ಮರಿಗೆ ಅಂತರತಮನಾಗಿರುವ ದೇವನೆ ಇವನು.

ನಾವು ಪರಮಜ್ಞಾನವನ್ನು ಅನ್ವೇಷಣೆ ಮಾಡುತಿರುವಾಗ ಅರೂಪಕ್ಕೆ ಒಂದು ರೂಪನ್ನು ಕೊಡುತ್ತೇವೆ. ಇದಾದನಂತರ ಇದಕ್ಕೆ ವಿರುದ್ಧವಾದ ಸೃಷ್ಟಿಯ ಪ್ರತಿಯೊಂದು ವಸ್ತುವಿನ ಹಿಂದೆಯೂ ಇರುವ ಶಕ್ತಿಯ ಭಾವನೆ ಪ್ರಾಯಶಃ ಬರುವುದೇನೊ. ಯಾರು ಇವೆರಡನ್ನೂ ಚೆನ್ನಾಗಿ ನೋಡಿರುವರೊ ಅವರು ಭಗವಂತನಿಗೆ ಸಂಬಂಧಪಟ್ಟ ಪ್ರತಿಯೊಂದು ಮಾನವೀಯ ಚಿಹ್ನೆಯ ಪ್ರಾಮುಖ್ಯತೆಯನ್ನು ತಿಳಿದುಕೊಳ್ಳಬಹುದು. ಏಕೆಂದರೆ ಯಾವ ಧಾರ್ಮಿಕ ಚಿಹ್ನೆಯಾದರೂ ಆಗಲಿ, ಅವು ಇವೆರಡರಲ್ಲಿ ಒಂದಾಗಿರಬೇಕು. ಮಾನವ ಆ ಪರಾತ್ಪರ ವಸ್ತುವನ್ನು ಭಾವಿಸುವುದಾದರೆ ಅದನ್ನು ಅಂತರಾತ್ಮನಂತೆಯೊ ಅನಂತ ಶಕ್ತಿಯಂತೆಯೊ ಭಾವಿಸಲುಮಾತ್ರಸಾಧ್ಯ. ಈ ಪ್ರಪಂಚದ ಹಿಂದೆ ಅಂತಹ ಒಂದು ನಿಯಮ ಇದೆಯೊ ಇಲ್ಲವೊ. ಅದೊಂದು ಊಹೆ ಮಾತ್ರ. ಅಂತೂ ಹೇಗೊ ನಮಗೆ ವಿವರಿಸಲಾಗದ ರೀತಿಯಲ್ಲಿ ಸ್ವಾಮಿಜಿ ಮನಸ್ಸು ಆಗಸ್ಟ್ ತಿಂಗಳಿಂದ ಶಿವನಿಂದ ಶಕ್ತಿಯ ಕಡೆ ಹರಿಯತೊಡಗಿತು. ಯಾವಾಗಲೂ ರಾಮಪ್ರಸಾದರ ಹಾಡನ್ನು ಹಾಡುತ್ತಿದ್ದರು. ತಾವು ಮಗು ಎಂಬ ಭಾವನೆಯಲ್ಲಿ ಓತಪ್ರೋತರಾಗು

ವುದಕ್ಕೆ ಯತ್ನಿಸುತ್ತಿದ್ದರು. ನಮ್ಮಲ್ಲಿ ಕೆಲವರಿಗೆ ಅವರೊಮ್ಮೆ "ಎಲ್ಲಿ ನೋಡಲಿ ಅಲ್ಲಿ ತಾಯಿ ಇರುವಂತೆ, ಒಂದು ಕೋಣೆಯಲ್ಲಿ ಕುಳಿತು ಕೊಂಡಿರುವಂತೆ ಭಾಸವಾಗುತ್ತಿದೆ" ಎಂದರು. ಯಾವಾಗಲೂ "ತಾಯಿ, ತಾಯಿ" ಎನ್ನುವುದು ಅವರ ಸ್ವಭಾವವಾಗಿ ಹೋಗಿತ್ತು. ನಮ್ಮ ಗುಂಪಿನಲ್ಲಿದ್ದ ಕೆಲವು ಹಿರಿಯರಿಗೂ ಈ ಅಭ್ಯಾಸ ತಾಕಿತು. ಅವರು ತಮಗೆ ಇಷ್ಟವಾದ ಏನನ್ನಾದರೂ ತ್ಯಜಿಸಬೇಕಾಗಿ ಬಂದಾಗ, "ಆಗಲಿ, ತಾಯಿಗೆ ಗೊತ್ತಿದೆ ಯಾವುದು ನಮಗೆ ಒಳ್ಳೆಯದು ಎಂಬುದು" ಎಂದು ಹೇಳುತ್ತಿದ್ದರು.

ಕ್ರಮೇಣ ಸ್ವಾಮಿಜಿ ಅವರ ತನ್ಮಯತೆ ಮತ್ತೂ ಗಾಢವಾಗತೊಡ ಗಿತು. ನಿದ್ರೆ ವಿಶ್ರಾಂತಿಗೂ ಅವಕಾಶಕೊಡದಂತೆ ಈ ಆಲೋಚನಾ ಜ್ವರ ಹೇಗೆ ತಮ್ಮನ್ನು ಪೀಡಿಸುತ್ತಿದೆ, ಕೆಲವು ವೇಳೆ ಮಾನವನ ಧ್ವನಿಯಂತೆ ಅವು ತಮ್ಮನ್ನು ಹೇಗೆ ಬಲಾತ್ಕರಿಸುತ್ತಿವೆ ಎಂಬುದನ್ನು ಹೇಳಿಕೊಳ್ಳು ತ್ತಿದ್ದರು. ಸುಖದುಃಖ, ಪಾಪಪುಣ್ಯಗಳೆಂಬ ದ್ವಂದ್ವದಿಂದ ಪಾರಾಗುವ ಆದರ್ಶವನ್ನು ಅವರು ನಮಗೆ ಒತ್ತಿ ಒತ್ತಿ ಹೇಳುತ್ತಿದ್ದರು. ಪಾಪಭಾವನೆ ಯಿಂದ ಪಾರಾಗುವುದಕ್ಕೆ ಹಿಂದೂಗಳು ನೀಡುವ ಒಂದು ಪರಿಹಾರ ಇದು. ಆದರೆ ಈಗ ಅವರು ತಮ್ಮ ಮನಸ್ಸನ್ನೆಲ್ಲಾ ಅಂಧಕಾರದಕಡೆ, ದುಃಖದ ಕಡೆ, ನಿಗೂಢದಕಡೆ ಇಟ್ಟರು. ಇದರ ಮೂಲಕ ಪ್ರಕೃತಿಯ ಹಿಂದೆ ಇರುವ ಸತ್ಯವನ್ನು ಅರಿಯಬೇಕೆಂದು ಸಂಕಲ್ಪಿಸಿಕೊಂಡರು. ಅವರು ಕಾಶ್ಮೀರಕ್ಕೆ ತಾವು ಬಂದ ಉದ್ದೇಶ ಈಡೇರಲಿಲ್ಲ†

ರುದ್ರೋಪಾಸನೆಯೇ ಅವರ ಪಲ್ಲವಿಯೂ ಆಯಿತು. ಅನಾರೋಗ್ಯ ವಾಗಲಿ ಯಾತನೆಯಾಗಲಿ "ಅವಳೇ ದೇಹ, ಈ ನೋವು ಅವಳದೇ, ಇದನ್ನು ಕೊಡುವವಳೂ ಅವಳೇ, ಕಾಳಿ, ಕಾಳಿ!" ಎನ್ನುತ್ತಿದ್ದರು.

ಒಂದುದಿನ ಅವರು ತಮ್ಮ ಮೆದುಳು ಆಲೋಚನೆಯಿಂದ ತುಂಬಿ ತುಳುಕಾಡುತ್ತಿದೆ ಅದನ್ನು ಬರೆಯುವವರೆಗೆ ಅವರ ಕೈ ಸುಮ್ಮನಿರಲಾರದು

---

† ಮಹಾರಾಜರ ಕೋರಿಕೆಯ ಮೇಲೆ ಸ್ವಾಮಿ ವಿವೇಕಾನಂದರು ಶ್ರೀನಗರಕ್ಕೆ ಬಂದದ್ದು. ಅಲ್ಲಿ ಒಂದು ಮಠ ಮತ್ತು ಸಂಸ್ಕೃತ ಪಾಠಶಾಲೆ ತೆರೆಯುವುದಕ್ಕೆ ಭೂಮಿಯನ್ನು ಪಡೆಯಬೇಕೆಂದು ಇದ್ದರು. ಆದರೆ ಅಲ್ಲಿಯ ಕೌನ್ಸಿಲಿನಲ್ಲಿ ಆಗ ರೆಸಿಡೆಂಟರಾಗಿದ್ದ ಸರ್ ಆಡರ್ ಬರ್ಸ್ಟ್‌ಥಾಲ್ ಬಾಟ್ ಎಂಬುವನು ಎರಡು ವೇಳೆಯೂ ಅವಕಾಶ ಕೊಡಲಿಲ್ಲ.

ಎಂದರು. ಸಾಯಂಕಾಲ ನಾವು ಎಲ್ಲೊ ಹೊರಗೆ ಹೋಗಿದ್ದವರು ದೋಣಿ ಮನೆಗೆ ಬಂದೆವು. ಸ್ವಾಮಿಜಿ ಅವರು ಸ್ವಲ್ಪ ಹೊತ್ತಿಗೆ ಮುಂಚೆ ಅಲ್ಲಿಗೆ ಬಂದು Kali the Mother ( ತಾಯಿ ಕಾಳಿ) ಎಂಬ ಪದ್ಯವನ್ನು ಅಲ್ಲಿ ಬಿಟ್ಟು ಹೋಗಿದ್ದರು. ಸ್ಫೂರ್ತಿಯ ಉದ್ವೇಗದಲ್ಲಿ ಬರೆದಾದಮೇಲೆ ಅವರಿಗೇ ಸಾಕಾಗಿ ನೆಲದಮೇಲೆ ಬಿದ್ದುಬಿಟ್ಟರು, ತಮ್ಮ ಭಾವದ ಉದ್ವೇಗ ದಲ್ಲಿ ತಾವೆ ದಣಿದುಹೋಗಿದ್ದರು ಎಂದು ಯಾರೊ ಅನಂತರ ಹೇಳಿದರು.

### KALI THE MOTHER

The Stars are blotted out
The clouds are covering clouds,
It is darkness vibrant, Sonant.
In the roaring whirling wind,
Are the Souls of a million lunatics,
Just loosed from the Prison—House,
Wrenching trees by the roots
Sweeping all from the Path.
The Sea has joined the fray
And swirls up mountain waves,
To reach the pitchy sky.
The flash of a lurid light
Reveals on every side
A thousand, thousand shades
of death, begrimed and black.
Scattering Plagues and Sorrows,
Dancing mad with joy,
Come, Mother, Come!
For terror is thy name.
Death is in thy breath.
And every Shaking Step
Destroys a world for ever.
Thou "Time" the all destroyer!
Come, o, mother, Come!
Who dares misery love,

**Dance in destruction's dance**
**And hug the form of death—**
**To him the Mother comes**

[ ಆಗಸದಲ್ಲಿ ತಾರೆಗಳೆಲ್ಲ ಅಳಿಸಿಹೋಗಿವೆ. ಮೋಡಗಳಮೇಲೆ ಮೋಡಗಳು ಕವಿದಿವೆ. ಕತ್ತಲೆ ಘನೀಭೂತವಾಗಿ ಸ್ಪಂದಿಸುವಂತೆ ಇದೆ. ಭೋರ್ಗರೆದು ಬೀಸುತ್ತಿರುವ ಚಂಡಮಾರುತನಲ್ಲಿ ಹುಚ್ಚರ ಆಸ್ಪತ್ರೆಯಿಂದ ಈಗತಾನೆ ಹೊರಗೆ ಬಂದ ಕೋಟ್ಯಂತರ ಜೀವಿಗಳ ಆತ್ಮ ಸೇರಿದಂತೆ ಇವೆ. ಆ ಬಿರುಗಾಳಿ ಗಿಡಮರಗಳನ್ನು ಬೇರು ಸಹಿತ ಕಿತ್ತುಹಾಕುತ್ತಿದೆ. ದಾರಿಯಲ್ಲಿ ರುವುದನ್ನೆಲ್ಲಾ ಧೂಳೀಪಟಗೈಯುತ್ತಿದೆ. ಸಾಗರ ಫೇನಮಯವಾಗಿ ಮೇಲಿನ ಕಾರ್ಮುಗಿಲನ್ನು ಆಲಂಗಿಸಲು ಪರ್ವತೋಪಮಯ ಅಲೆಗಳನ್ನು ಎಬ್ಬಿಸುತ್ತಿದೆ. ಮಧ್ಯೆಮಧ್ಯೆ ಝುಳಿಪಿಸುತ್ತಿರುವ ಮಿಂಚು ಸುತ್ತಲೂ ನೃತ್ಯ ಮಾಡುತ್ತಿರುವ ನೂರಾರು ಆಕಾರಗಳನ್ನು ತಾಳಿರುವ ಕರಾಳಮೃತ್ಯುಮುಖ ವನ್ನು ತೋರುತ್ತಿದೆ.

ದುಃಖ ಮತ್ತು ವ್ಯಾಧಿಗಳನ್ನು ಸುತ್ತಲೂ ಹರಡುತ್ತ, ಆನಂದದಿಂದ ಉನ್ಮತ್ತಳಾಗಿ ನೃತ್ಯಮಾಡುತ್ತ, ಬಾ, ತಾಯಿ ಬಾ! ನಿನ್ನ ಹೆಸರೆ ರುದ್ರಾಣಿ. ನಿನ್ನ ಉಸಿರಿನಲ್ಲೆ ಸಾವು ಹುದುಗಿದೆ. ನೀನು ಇಡುವ ಅಡಿಗ ಳೊಂದೊಂದೂ ಪೃಥ್ವಿಯನ್ನು ಚೂರ್ಣೀಭೂತ ಮಾಡುವುದು. ತಾಯಿ, ನೀನೇ "ಮಹಾಕಾಲ" ಸರ್ವವನ್ನೂ ನಾಶಮಾಡುವವಳು, ಬಾ, ತಾಯಿ ಬಾ!

ಯಾರು ದುಃಖವನ್ನು ಪ್ರೀತಿಸಬಲ್ಲರೊ, ಪ್ರಳಯತಾಂಡವನೊಂದಿಗೆ ನೃತ್ಯ ಮಾಡಬಲ್ಲರೊ, ಮೃತ್ಯುವನ್ನು ಬಾಚಿ ಅಪ್ಪಬಲ್ಲರೊ, ಅವರೆಡೆಗೆ ತಾಯಿ ಬರುವಳು.]

ಸ್ವಾಮಿಜಿ ಈ ಸಮಯದಲ್ಲಿ ತಮ್ಮ ದೋಣಿಯನ್ನು ನಮ್ಮಿಂದ ಬೇರೆ ಕಡೆಗೆ ಒಯ್ದಿದ್ದರು. ಆ ಬೇಸಗೆಯಲ್ಲಿ ಸ್ವಾಮಿಜಿಯವರೊಡನೆ ಇರುತ್ತಿದ್ದ ಒಬ್ಬ ತರುಣ ಬ್ರಂಹೊ ವೈದ್ಯನಿಗೆಮಾತ್ರ ಸ್ವಾಮಿಜಿ ಎಲ್ಲಿರುವರು, ಅವರಿಗೆ ಏನುಬೇಕಾಗಿದೆ ಎಂಬುದು ಗೊತ್ತಾಗುತ್ತಿತ್ತು. ಈತನಿಗೆ ಸ್ವಾಮಿಜಿ ಮೇಲೆ ಇದ್ದ ಭಕ್ತಿ ವಿಶ್ವಾಸಗಳಿಗೆ ಒಂದು ಮೇರೆಯಿರಲಿಲ್ಲ. ಮಾರನೆದಿನ ಸಾಯಂಕಾಲ ಡಾಕ್ಟರ್ ಎಂದಿನಂತೆ ಸ್ವಾಮಿಜಿಯನ್ನು ನೋಡಲು ಹೋದರು. ಆದರೆ ಸ್ವಾಮಿಜಿ ಯಾವುದೋ ಚಿಂತನೆಯಲ್ಲಿ ತನ್ಮಯ

ರಾಗಿದ್ದುದರಿಂದ ಅವರೊಡನೆ ಮಾತನಾಡದೆ ಹಾಗೆಯೇ ಬಂದರು. ಮಾರನೆದಿನ ಸೆಪ್ಟೆಂಬರ್ ಮೂವತ್ತನೆ ತಾರೀಖು ಸ್ವಾಮಿಜಿ ಕ್ಷೀರಭವಾನಿಗೆ ಹೋಗಿದ್ದರು. ಯಾರೂ ತಮ್ಮನ್ನು ಅನುಸರಿಸಕೂಡದೆಂದು ತಿಳಿಸಿದ್ದರು. ಸ್ವಾಮಿಜಿ ಅಂದಿನಿಂದ ಅಕ್ಟೋಬರ್ ಆರನೇ ತಾರೀಖಿನವರೆಗೆ ಹೊರಗೆ ಹೋಗಿದ್ದರು.

ಅಕ್ಟೋಬರ್ ಆರನೇ ಮಧ್ಯಾಹ್ನ ಸ್ವಾಮಿಜಿ ಅವರು ನಮ್ಮನ್ನು ನೋಡಲು ನದಿಯ ಮೇಲುಗಡೆಯಿಂದ ಬುತ್ತಿದ್ದರು. ಅವರು ದೋಣಿಯ ಮುಂದೆ ನಿಂತಿದ್ದರು. ಒಂದು ಕೈಯಲ್ಲಿ ದೋಣಿಯ ಚಾವಣಿಯನ್ನು ಹಿಡಿದುಕೊಂಡಿದ್ದರು. ಮತ್ತೊಂದು ಕೈಯಲ್ಲಿ ಹಳದಿ ಬಣ್ಣದ ಹೂವಿನ ಗೊಂಚಲುಗಳು ಇತ್ತು. ಅವರು ನಮ್ಮ ದೋಣಿಯ ಮನೆಯೊಳಗೆ ಪ್ರವೇಶ ಮಾಡಿದರು. ಅವರ ವ್ಯಕ್ತಿತ್ವ ಸಂಪೂರ್ಣವಾಗಿ ಮಾರು ಓಗಿತ್ತು. ಮೌನದಿಂದ ನಮ್ಮೆಲ್ಲರನ್ನೂ ಆಶೀರ್ವದಿಸುತ್ತ ಹೂವನ್ನು ನಮ್ಮ ತಲೆಯ ಮೇಲೆ ಇಡುತ್ತ ಬಂದರು. ಕೊನೆಗೆ ಹೂವಿನಹಾರವನ್ನು ನಮ್ಮವರೊಬ್ಬರಿಗೆ ಕೊಟ್ಟು, ಇವುಗಳನ್ನೆಲ್ಲಾ ನಾನು ಜಗನ್ಮಾತೆಗೆ ಅರ್ಪಿಸಿದ್ದೆ ಎಂದು ಹೇಳಿ ಕುಳಿತರು. ಇನ್ನುಮೇಲೆ "ಹರಿ ಓಂ ಇಲ್ಲ, ಎಲ್ಲಾ ತಾಯಿ" ಎಂದರು ನಸುನಗುತ್ತ. ನಾವೆಲ್ಲಾ ಮೌನವಾಗಿ ಕುಳಿತೆವು. ನಾವು ಮಾತನಾಡಲು ಪ್ರಯತ್ನಿಸಿದ್ದರೆ ಅದು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ಆಗ ವಾತಾವರಣ ಆಲೋಚನೆ ಮಾಡುವುದಕ್ಕೆ ಕೂಡ ಸಾಧ್ಯವಲ್ಲದಷ್ಟು ಗಭೀರವಾಗಿತ್ತು. ಪುನಃ ಸ್ವಾಮಿಜಿ ಮಾತನಾಡತೊಡಗಿದರು: "ನನ್ನ ದೇಶಭಕ್ತಿ ಯೆಲ್ಲಾ ಹೋಯಿತು. ಸರ್ವವೂ ಹೋಯಿತು. ಈಗೆಲ್ಲಾ ತಾಯೊಬ್ಬಳೇ, ತಾಯೊಬ್ಬಳೇ!"

ಸ್ವಲ್ಪ ಹೊತ್ತು ನೀರವವಾಗಿದ್ದು ಪುನಃ ಹೇಳಿದರು: "ನಾನು ತುಂಬಾ ತಪ್ಪು ತಿಳಿದುಕೊಂಡಿದ್ದೆ. ತಾಯಿ ಹೇಳಿದಳು, ಶ್ರದ್ಧಾವಿಹೀನರು ನನ್ನ ದೇವಸ್ಥಾನಕ್ಕೆ ಪ್ರವೇಶಿಸಿ ನನ್ನ ವಿಗ್ರಹವನ್ನು ಅಪವಿತ್ರಗೊಳಿಸಿದರೇನಂತೆ? ಅದರಿಂದ ನಿನಗೇನು? ನೀನೊ ನನ್ನನ್ನು ರಕ್ಷಿಸುವುದು ನಾನೊ ನಿನ್ನನ್ನು ರಕ್ಷಿಸುವುದು ಎಂದಳು. ಆದಕಾರಣ ಇನ್ನುಮೇಲೆ ದೇಶಭಕ್ತಿ ಯಾವುದೂ ಇಲ್ಲ. ನಾನೊಂದು ಎಳೆ ಹಸುಳೆ."

ಅನಂತರ ಕಲ್ಕತ್ತೆಗೆ ಹಿಂತಿರುಗುವ ವಿಚಾರ ಮುಂತಾದ ಗೌಣ ವಿಷಯಗಳ ಮೇಲೆ ಮಾತನಾಡತೊಡಗಿದರು. ಆದಷ್ಟು ಬೇಗ ಕಲ್ಕತ್ತೆಗೆ

ಹಿಂತಿರುಗಬೇಕೆಂದರು. ಕಳೆದ ವಾರದ ಮನಸ್ಸಿನ ಅನುಭವಗಳೆಲ್ಲ ಇವರ ದೇಹದ ಆರೋಗ್ಯವನ್ನು ಕೆಡಿಸಿತ್ತು. ಅವರು ಹೋಗುವುದಕ್ಕೆ ಮುಂಚೆ ಹೇಳಿದರು: "ಈಗ ನಾನು ಹೆಚ್ಚು ಏನನ್ನೂ ಹೇಳಲಾರೆ. ಇದು ಸರಿಯಲ್ಲ. ಆದರೆ ಆಧ್ಯಾತ್ಮಿಕ ದೃಷ್ಟಿಯಿಂದ ನಾನು ಎಂದಿಗೂ ಬದ್ಧನಾಗಿರಲಿಲ್ಲ."

ಮುಂದಿನ ಕೆಲವು ದಿನಗಳಲ್ಲಿ ಸ್ವಾಮಿಜಿ ನಮಗೆ ಅಷ್ಟು ಕಾಣಲಿಲ್ಲ. ಮಾರನೆ ದಿನ ತಿಂಡಿಯ ಸಮಯದಲ್ಲಿ ನಮ್ಮಲ್ಲಿ ಇಬ್ಬರು ಸ್ವಾಮಿಜಿಯವರೊಡನೆ ನದೀ ತೀರದಲ್ಲಿದ್ದೆವು. ಆಗ ಒಬ್ಬ ಕ್ಷೌರಕನನ್ನು ನೋಡಿ ಇದೆಲ್ಲಾ ಹೋಗಬೇಕೆಂದು ಕ್ಷೌರಮಾಡಿಸಿಕೊಳ್ಳಲು ಹೋದರು. ಅರ್ಧ ಗಂಟೆಯಾದಮೇಲೆ ತಲೆಯನ್ನು ಮುಂಡನಮಾಡಿಸಿಕೊಂಡು ಬಂದರು. ಕಳೆದ ವಾರ ಸ್ವಾಮಿಜಿಗೆ ಆದ ಅನುಭವ ನಡೆನುಡಿಯ ಮೂಲಕ ವಿವರಿಸಲಾಗದ ರೀತಿಯಲ್ಲಿ ಅದು ಹೇಗೊ ವ್ಯಕ್ತವಾಗುತ್ತಿತ್ತು. ಆಗ ಅವರು ಏನುಮಾಡಿದರು ಎಂಬುದನ್ನು ಊಹಿಸಿಕೊಳ್ಳಬಹುದಾಗಿತ್ತು. ಉಪವಾಸ, ಪ್ರತಿ ದಿನ ಕ್ಷೀರಭವಾನಿಯ ತೀರ್ಥಕ್ಕೆ ಹಾಲು ಅನ್ನ ಬಾದಾಮಿಯನ್ನು ನೈವೇದ್ಯ ಮಾಡುವುದು, ಬ್ರಾಹ್ಮಣ ಪಂಡಿತನ ಕಿರಿಯ ಮಗಳನ್ನು ಉಮಾಕುಮಾರಿ ಎಂದು ಪೂಜಿಸುವುದು—ಇವುಗಳನ್ನೆಲ್ಲ ಸಂಪೂರ್ಣ ಆತ್ಮತ್ಯಾಗದ ದೃಷ್ಟಿಯಿಂದ ಮಾಡಿದರು. ಯಾರು ಎಂತಹ ದ್ರೋಹವಮಾಡಲಿ ಅವರ ಮೇಲೆ ಸ್ವಲ್ಪವೂ ಅಸಮಾಧಾನವಿರಲಿಲ್ಲ.

ಒಂದು ದಿನ ಒಬ್ಬರು ಸ್ವಾಮಿಜಿ ಅವರನ್ನು ಪ್ರಶ್ನಿಸಲು ಬಂದರು. ಸ್ವಾಮಿಜಿ ಮುಂಡನಮಾಡಿಸಿಕೊಂಡು ಕಾವಿಯ ಬಟ್ಟೆ ತೊಟ್ಟು ಒಳಗೆ ಪ್ರವೇಶಿಸಿದರು. "ಧರ್ಮರಕ್ಷಣೆಗಾಗಿ ಒಬ್ಬ ಸಾವನ್ನು ಎದುರಿಸಬೇಕೆ ಅಥವಾ ಗೀತೆಯಲ್ಲಿ ಹೇಳಿರುವಂತೆ ಪ್ರತಿಭಟಿಸದೆ ಸುಮ್ಮನೆ ಇರಬೇಕೆ?" ಎಂಬುದೇ ಪ್ರಶ್ನೆ. ಸ್ವಾಮಿಜಿ ಮೆಲ್ಲನೆ ಮಾತನಾಡುತ್ತ, "ನಾನು ಯಾವ ಪ್ರತಿಭಟನೆಯನ್ನು ಮಾಡುವುದಿಲ್ಲ" ಎಂದರು. ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಅನಂತರ ಹೇಳಿದರು: "ಆದರೆ ಇದು ಸನ್ಯಾಸಿಗಳ ಆದರ್ಶ. ಗೃಹಸ್ಥರು ಆತ್ಮರಕ್ಷಣೆ ಮಾಡಿಕೊಳ್ಳಬೇಕು."

ಸ್ವಾಮಿಜಿ ಅವರ ಸ್ವಭಾವ ದಿನ ಕಳೆದಂತೆ ಗಭೀರವಾಗುತ್ತ ಬಂತು. ಇದೊಂದು ತಮ್ಮ ಜೀವನದ ಸಂಧಿಕಾಲವೆಂದು ಅವರೇ ಅನಂತರ ಒಮ್ಮೆ ಹೇಳಿದರು. "ತಾಯಿ ತೊಡೆಯಮೇಲೆ ಕುಳಿತ ಮಗು ನಾನು, ಅವಳು ನನ್ನ ಮೈದಡವುತ್ತಿರುವಳು" ಎಂದು ಹೇಳಿದರು. ಆದರೆ ಅವರು ನಮಗೆ

ಹೇಳದೇ ಇದ್ದರೂ, ತಾಯಿ ಕೊಡುವ ಚುಂಬನ ದುಃಖ ಮಯವಾಗಿದ್ದರೂ ಅದನ್ನು ಸಾನಂದದಿಂದ ಸ್ವೀಕರಿಸುತ್ತಿದ್ದರು ಎಂದು ಕಂಡಿತು. "ವ್ಯಥೆ ಯಲ್ಲಿಯೂ ಒಂದು ಆನಂದವಿದೆ" ಎಂದು ಅವರೇ ಒಮ್ಮೆ ಹೇಳಿದ್ದರಲ್ಲವೆ?

ಸಾಧ್ಯವಾದಷ್ಟು ಬೇಗ ನಾವು ಬಾರಾಮುಲ್ಲಕ್ಕೆ ಹೊರಟೆವು. ಅಕ್ಟೋಬರ್ ಹನ್ನೊಂದನೇ ತಾರೀಖು ಮಂಗಳವಾರ ಸಾಯಂಕಾಲ ಆ ಊರನ್ನು ಸೇರಿದೆವು. ಮಾರನೆದಿನ ಮಧ್ಯಾಹ್ನ ಇವರು ಲಾಹೋರಿಗೆ ಹೋಗುವುದಾಗಿ ಮತ್ತು ನಾವು ಇನ್ನೂ ಕೆಲವುದಿನಗಳು ಇಲ್ಲೇ ಇರುವು ದಾಗಿ ಗೊತ್ತಾಯಿತು. ನಾವು ಬಾರಾಮುಲ್ಲಕ್ಕೆ ಹೋಗುತ್ತಿದ್ದಾಗ ನಮಗೆ ಸ್ವಾಮಿಜಿಯ ಭೇಟಿ ಹೆಚ್ಚಾಗಿ ಆಗುತ್ತಿರಲಿಲ್ಲ. ಸಂಜೆಹೊತ್ತು (ದೋಣಿ ನಿಂತಾಗ) ಅವರು ಮೌನವಾಗಿಯೇ ಇರುತ್ತಿದ್ದರು. ನದೀ ತೀರದಲ್ಲಿ ಒಬ್ಬರೇ ದೂರ ನಡೆದುಕೊಂಡು ಹೋಗುತ್ತಿದ್ದರು. ಒಂದು ಕ್ಷಣವಾದರೂ ಅವರು ನಮ್ಮ ದೋಣಿ ಒಳಗೆ ಪ್ರವೇಶಮಾಡಲಿಲ್ಲ. ಭರತಖಂಡಕ್ಕೆ ಹಿಂತಿರುಗಿ ಬಂದ ಮೇಲೆ ಮಾಡಿದಕೆಲಸ, ಮತ್ತು ಈಗ ತಾನೆ ಅವರಿಗೆ ಆದ ಆಧ್ಯಾತ್ಮಿಕ ಅನುಭವದಿಂದ ಶರೀರದ ಮೇಲೆ ಆದ ಪ್ರತಿಕ್ರಿಯೆ ಅವರ ಆರೋಗ್ಯದ ಹದಗೆಡಿಸಿತ್ತು. ದೇಹಾಲಸ್ಯ ಒಂದು ಮೇರೆಯನ್ನು ಮೀರಿದರೆ ಅನುಭವಿಸುವುದಕ್ಕೆ ಕಷ್ಟವಾಗುವುದು. ಇದರಂತೆಯೇ ದೇಹ ಕೂಡ ಆಧ್ಯಾತ್ಮಿಕ ಅನುಭವವನ್ನು ದೀರ್ಘಕಾಲ ಇಲ್ಲಿ ರಕ್ಷಿಸಲು ನಿರಾಕರಿಸು ವುದು. ಅದು ಹೋಗುವಾಗ ತಾವು ನಿರೀಕ್ಷಿಸಿದುದಕ್ಕಿಂತ ಹೆಚ್ಚು ದುರ್ಬಲರನ್ನಾಗಿ ಮಾಡಿತು. ಇವುಗಳಿಂದ ಈಗ ಸ್ವಾಮಿಜಿ ನಮ್ಮಿಂದ ಎಷ್ಟು ಕಾಲ ಅಗಲಿರುವರು ಎಂಬುದನ್ನು ನಮ್ಮಲ್ಲಿ ಯಾರೂ ಹೇಳುವಂತೆ ಇರ ಲಿಲ್ಲ. ಬಹುಶಃ ಇದಕ್ಕೇ ಇರಬೇಕು ಸ್ವಾಮಿಜಿ ಅವರು ನಮಗೆ ತಾವು ಹೋಗುತ್ತೇವೆ ಎಂಬುದನ್ನು ಹೇಳಲು ಬುಧವಾರ ಬೆಳಿಗ್ಗೆ ನಾವು ತಿಂಡಿ ತಿಂದು ಕುಳಿತಾಗ ಬಂದರು. ಸ್ವಾಮಿಜಿ ಅವರನ್ನು ದೋಣಿಯಲ್ಲೆ ಕುಳಿತು ಮಾತನಾಡುವಂತೆ ಕೇಳಿಕೊಂಡೆವು.

ಅಂದಿನ ಬೆಳಿಗ್ಗೆ ಗಂಟೆಗಳಾದಮೇಲೆ ಗಂಟೆಗಳು ಆಗಿ ಹೋದುವು. ಆ ದಿನದ ವಿವರಗಳನ್ನೆಲ್ಲಾ ಕೊಡುವುದಕ್ಕಿಂತ ಸಾಮಾನ್ಯವಾಗಿ ಯಾವ ಪ್ರತಿಕ್ರಿಯೆ ನಮ್ಮ ಮನಸ್ಸಿನ ಮೇಲೆ ಆಯಿತೊ ಅದನ್ನು ಕೊಡಬಹುದು. ಕೇಳಿದ ನಮಗೆ ಅವರ ಹೃದಯದ ಗರ್ಭಗುಡಿಯನ್ನು ಪ್ರವೇಶಮಾಡಿದಂತೆ ಇತ್ತು. ಕೆಲವು ವೇಳೆ ಯಾವುದಾದರೊಂದು ಭಕ್ತಿ ಗೀತೆಯನ್ನು ಹೇಳಿ

ಅದನ್ನು ಭಾಷಾಂತರ ಮಾಡುತ್ತಿದ್ದರು. ಯಾವಾಗಲೂ ಈ ಹಾಡುಗಳು ತಾಯಿಗೆ ಸಂಬಂಧಪಟ್ಟದ್ದಾಗಿತ್ತು. ತನ್ನ ಭಕ್ತರ ಹೃದಯದ ಮೇಲೆ ನಿಂತು ನಲಿಯುತ್ತಿರುವ ಕಾಳಿ ನಮಗೆ ಬರಬರುತ್ತ ಸ್ಪಷ್ಟವಾಗತೊಡಗಿತು. ಅವರು ಇನ್ನೂ ಬೇರೆ ವಿಷಯಗಳನ್ನೂ ಹೇಳಿದರು. ತಾಯಿ ಜಗದ ಸಂತೆಯಲ್ಲಿ ಕುಳಿತು ಆಡುವವರೊಡನೆ ಆಡುತ್ತಿರುವಳು. ಅವಳು ಪಟಗಳನ್ನು ಆಡಿಸುತ್ತಿರುವಳು. ಸಹಸ್ರಾರು ಪಟಗಳಲ್ಲಿ ಒಂದರದೊ ಎರಡರದೊ ದಾರವನ್ನು ಕತ್ತರಿಸುವಳು.

ಸ್ವಾಮಿಜಿ ತಮ್ಮ ಪದ್ಯದಿಂದಲೇ ಉದಾಹರಿಸತೊಡಗಿದರು "ದುಃಖವ್ಯಾಧಿಗಳನ್ನು ಸುತ್ತ ಹರಡುತ್ತ, ಆನಂದೋನ್ಮಾದದಲ್ಲಿ ಕುಣಿಯುತ್ತ, ಬಾ ತಾಯಿ, ಬಾ. ನಿನ್ನ ಹೆಸರೆ ರುದ್ರಾಣಿ! ನಿನ್ನ ಉಸಿರಿನಲ್ಲೆ ಮೃತ್ಯು ಇರುವದು. ನೀನಿಡುವ ಅಡಿಯೊಂದು ಒಂದು ಲೋಕವನ್ನು ಚೂರ್ಣೀ ಭೂತಮಾಡುವುದು." ಇವರೇ ಅನಂತರ ಹೇಳಿದರು ಇದರಲ್ಲಿರುವ ಪ್ರತಿಯೊಂದೂ ಸತ್ಯವಾಗತೊಡಗಿತು ಎಂದು. "ಯಾರು ದುಃಖವನ್ನು ಪ್ರೀತಿಸುವರೋ, ಪ್ರಳಯತಾಂಡವನೊಂದಿಗೆ ನಾಟ್ಯವಾಡುವರೊ, ಮೃತ್ಯುವನ್ನೇ ಬಾಚಿ ತಬ್ಬಿಕೊಳ್ಳಬಲ್ಲರೊ, ಅವರಿಗೆ ತಾಯಿ ನಿಜವಾಗಿ ಪ್ರತ್ಯಕ್ಷಳಾಗುವಳು. ನಾನು ಇದನ್ನು ಸಮರ್ಥಿಸಬಲ್ಲೆ. ಏಕೆಂದರೆ ನಾನೆ ಮೃತ್ಯುವನ್ನು ಅಪ್ಪಿರುವೆನು."

ಅವರು ತಮ್ಮ ಭವಿಷ್ಯವನ್ನು ಕುರಿತು ಹೇಳಿದರು. ಅವರಿಗೆ ಇನ್ನೇನೂ ಬೇಕಾಗಿರಲಿಲ್ಲ. ಗಂಗಾತೀರದಲ್ಲಿ ಮೌನವಾಗಿ ಬೆತ್ತಲೆ ಅಲೆಯುತ್ತಿದ್ದರೆ ಸಾಕು. "ಸ್ವಾಮಿಜಿ" ನಾಶವಾಗಿ ಹೋಗಿದ್ದರು. "ಪ್ರಪಂಚಕ್ಕೆ ಬೋಧಿಸುವ ಜವಾಬ್ದಾರಿ ತನ್ನದು ಎನ್ನುವುದಕ್ಕೆ ನಾನಾರು? ಇದೆಲ್ಲಾ ಬರೀ ಗಲಾಟೆ, ಭ್ರಮೆ. ತಾಯಿಗೆ ನಾನು ಬೇಕಾಗಿಲ್ಲ, ಆದರೆ ನನಗೆ ಅವಳು ಬೇಕು. ಇದನ್ನರಿತ ಮೇಲೆ ಕರ್ಮಕೂಡ ಒಂದು ಕನಸಿನಂತೆ ತೋರುವುದು."

ಪ್ರೀತಿವಿನಃ ಬೇರೆ ದಾರಿಯೇ ಇಲ್ಲ. ಇತರರು ನಮಗೆ ವಿರೋಧವಾಗಿ ವರ್ತಿಸಿದರೂ ನಾವು ಅವರನ್ನು ಪ್ರೀತಿಸಬೇಕು; ಆ ಪ್ರೀತಿಯನ್ನು ತಡೆಯುವುದಕ್ಕೆ ಅವರಿಗೆ ಆಗದಂತೆ ಇರಬೇಕು. ಇದೊಂದೇ ದಾರಿ. ನಾನು ಇವುಗಳನ್ನು ಬರೆಯುತ್ತಿರುವಾಗ ಇದರ ಹಿಂದೆ ಇರುವ ಹೃದಯದ ವೈಶಾಲ್ಯತೆಯನ್ನು ವಿವರಿಸಲಾರೆ ಎಂಬುದು ಗೊತ್ತಿದೆ. ಪ್ರಪಂಚದಲ್ಲಿ

ಯಾರಿಗೆ ಪೆಟ್ಟುಬೀಳಲಿ ಅದು ನನ್ನ ಗುರುದೇವನ ಮೇಲೆ ತನ್ನ ಪ್ರಭಾವ ವನ್ನು ಬೀರದೆ ಇರಲಿಲ್ಲ. ಯಾರಿಗಾದರೂ ವ್ಯಥೆಯಾಗಿರಲಿ, ಕೊನೆಗೆ ಮೃತ್ಯುವಿಗೇ ಸಂಕಟ ಬಂದಿದ್ದರೂ ಅವನನ್ನೂ ಇವರು ಆಶೀರ್ವದಿಸುತ್ತಿದ್ದರು; ಅವನನ್ನೂ ಇವರು ಪ್ರೀತಿಸುತ್ತಿದ್ದರು.

ವಸಿಷ್ಠ ಮತ್ತು ವಿಶ್ವಾಮಿತ್ರರ ಕಥೆಯನ್ನು ಅವರು ನಮಗೆ ಹೇಳಿದರು. ವಸಿಷ್ಠನ ನೂರು ಮಕ್ಕಳೂ ಕಾಲವಾಗಿದ್ದರು. ರಾಜ್ಯವಿಲ್ಲದೆ ಸಿಂಹಾಸನವಿಲ್ಲದೆ ಇವನೊಬ್ಬನೇ ಉಳಿದುಕೊಂಡಿದ್ದನು. ಅರಣ್ಯದಲ್ಲಿ ಒಂದು ಕುಟೀರದಲ್ಲಿ ತನ್ನ ಸತಿಯೊಡನೆ ವಾಸಮಾಡುತ್ತಿದ್ದ ವಸಿಷ್ಠನ ಚಿತ್ರವನ್ನು ನಮಗೆ ವಿವರಿಸಿದರು. ಅಂದು ಬೆಳದಿಂಗಳ ರಾತ್ರಿ. ವಸಿಷ್ಠ ತನ್ನ ವೈರಿ ವಿಶ್ವಾಮಿತ್ರ ಬರೆದ ಒಂದು ಗ್ರಂಥದ ಮುಖ್ಯವಾದ ಭಾಗವನ್ನು ಓದುವುದರಲ್ಲಿ ತಲ್ಲೀನನಾಗಿರುವನು. ಆಗ ಅವನ ಹೆಂಡಿತಿ ಹತ್ತಿರ ಬಂದು ಅವನ ಭುಜದ ಮೇಲೆ ಕೈಯಿಟ್ಟು, "ನೋಡಿ ಹೊರಗೆ ಇಂದು ಚಂದ್ರ ಇಷ್ಟೊಂದು ಪ್ರಕಾಶಮಾನವಾಗಿ ಬೆಳಗುತ್ತಿರುವನು" ಎಂದಳು. ವಸಿಷ್ಠ ಅತ್ತಕಡೆ ನೋಡದೆ "ಆದರೆ, ಪ್ರಿಯೆ, ಚಂದ್ರನಿಗಿಂತ ಹತ್ತು ಸಾವಿರ ಪಾಲು ಪ್ರಕಾಶಮಾನವಾಗಿದೆ ವಿಶ್ವಾಮಿತ್ರನ ಬುದ್ಧಿ!" ಎಂದನು.

ಎಲ್ಲಾ ಮರೆತುಬಿಟ್ಟಿದ್ದನು! ತನ್ನ ನೂರು ಮಕ್ಕಳ ಸಾವು, ಕಷ್ಟ ನಷ್ಟ ಎಲ್ಲವನ್ನೂ ಮರೆತುಬಿಟ್ಟಿದ್ದನು. ತನ್ನ ವೈರಿಯ ಪ್ರತಿಭೆಗೆ ಮಾರು ಓಗಿದ್ದನು! ನಮ್ಮ ಪ್ರೀತಿಯೂ ಕೂಡ ವಸಿಷ್ಠನಿಗೆ ವಿಶ್ವಾಮಿತ್ರನ ಮೇಲೆ ಇದ್ದಂತೆ ಇರಬೇಕು. ಸ್ವಲ್ಪವಾದರೂ ದ್ವೇಷದ ಛಾಯೆಯೂ ಇರಲಿಲ್ಲ ಅಲ್ಲಿ.

ಆ ಸಮಯಕ್ಕೆ ಸರಿಯಾಗಿ ಆಳು ನಾವೆಲ್ಲಾ ಕುಳಿತು ಮಾತನಾಡುತ್ತಿದ್ದ ಮೇಜಿನ ಮೇಲೆ ಒಂದು ಹೂ ಗೊಂಚಲನ್ನು [ Pear blossom ] ತಂದಿಟ್ಟನು. ನಮ್ಮಲ್ಲಿ ಒಬ್ಬರು ಅದನ್ನು ಕೈಗೆ ತೆಗೆದುಕೊಂಡು "ಸ್ವಾಮಿಜಿ ಇದನ್ನು ಪೂಜೆಗಾಗಿ ಮಾಡಿದಂತೆ ಇದೆ. ಇದರಲ್ಲಿ ಹಣ್ಣು ಬಿಡುವುದಿಲ್ಲ" ಎಂದರು. ಸ್ವಾಮಿಜಿ ಮಂದಹಾಸದಿಂದ ಆಕೆಯನ್ನು ನೋಡಿದರು. ಸ್ವಾಮಿಜಿಗೆ ಅದನ್ನು ಕೊಟ್ಟು ಆ ಸಮಯದ ಗಭೀರ ವಾತಾವರಣವನ್ನು ಕೆಡಿಸಲು ಇಚ್ಛಿಸಲಿಲ್ಲ.

ಸ್ವಾಮಿಜಿ ಅನಂತರ ಹೊರಟರು. ಆಳುಗಳು, ದೋಣಿಯವರು, ಸ್ನೇಹಿತರು, ಶಿಷ್ಯರು, ಮಕ್ಕಳು ಅವರ ತಂದೆತಾಯಿಗಳು ಸ್ವಾಮಿಜಿಯನ್ನು

ಬೀಳ್ಕೊಡಲು ದಾರಿಯ ಪಕ್ಕದಲ್ಲಿದ್ದ ಟಾಂಗಾಗಾಡಿಯವರೆಗೆ ನಡೆದು ಕೊಂಡುಹೋದೆವು. ದೋಣಿಯ ಮುಖ್ಯಸ್ಥನ ನಾಲ್ಕು ವರುಷದ ಹುಡುಗಿ ಯೊಬ್ಬಳಿಗೆ ಸ್ವಾಮಿಜಿಯ ಮೇಲೆ ಇದ್ದ ಅಮಿತ ವಿಶ್ವಾಸವನ್ನು ನೋಡಿದ್ದೆವು. ಆ ಹುಡುಗಿ ತನ್ನ ಕಪ್ಪು ಕೂದಲಿನ ತಲೆಯ ಮೇಲೆ ಸ್ವಾಮಿಜಿಗೆ ಹಣ್ಣಿನ ತಟ್ಟೆಯನ್ನು ಹೊತ್ತುಕೊಂಡು ಅವರ ಪಕ್ಕದಲ್ಲಿ ನಡೆದುಹೋಗುತ್ತಿದ್ದಳು. ಸ್ವಾಮಿಜಿ ಗಾಡಿಯಲ್ಲಿ ಹೋಗುತ್ತಿದ್ದಾಗ ಈ ಹುಡುಗಿ ಅವರನ್ನು ಬೀಳ್ಕೊಡು ವಾಗ ನಗುತ್ತ ನಿಂತಳು. ಈ ಮಗುವಿಗಿಂತ ಕಡಿಮೆ ಏನು ನಮಗೆ ದುಃಖ ವಾಗಲಿಲ್ಲ. ಆದರೆ ವಯಸ್ಸಾದ ನಮ್ಮ ಭಾವ ಮತ್ತು ಆಲೋಚನೆಗಳು ಆ ಸಣ್ಣ ಮಗುವಿನಷ್ಟು ನಿಸ್ವಾರ್ಥವಾಗಿಲ್ಲ ಎನ್ನಿಸಿತು. ನಾವು ಇನ್ನು ಯಾವಾಗ ಅವರನ್ನು ನೋಡುವೆವು ಎಂದುಕೊಂಡೆವು. ನಾವು ಅಂದು ಅವರೊಡನೆ ಕಳೆದ ಕೆಲವು ಗಂಟೆಗಳು ನಾವು ಬದುಕಿರುವ ತನಕ ಮರೆಯು ವಂತಹವಲ್ಲ ಎಂಬುದನ್ನು ಆಲೋಚಿಸದೆ ಇರಲಾಗಲಿಲ್ಲ.



## ೧೦

## ಕಲ್ಕತ್ತ ಮತ್ತು ಸ್ತ್ರೀ ಭಕ್ತಪರಿವಾರ

ಸ್ವಾಮಿಜಿಯವರಲ್ಲಿ ಒಂದು ಅದ್ಭುತ ಸ್ವಭಾವವಿತ್ತು. ಅವರ ಸುತ್ತ ಮುತ್ತ ಇರುವವರಲ್ಲೆಲ್ಲ ಮಹಾವ್ಯಕ್ತಿಗಳು ತಾವು ಎಂಬ ಭಾವ ಮೂಡುವಂತೆ ಮಾಡುತ್ತಿದ್ದರು ಅವರು. ಅವರ ಸಮೀಪದಲ್ಲಿರುವವರಿಗೆ ಒಬ್ಬ ತಾನು ವ್ಯಕ್ತಗೊಳಿಸದ ಜೀವನದ ಪರಮಾದರ್ಶವನ್ನೆ ಕಂಡು ಪ್ರೀತಿಸುತ್ತಿದ್ದನು. ಅವನಲ್ಲಿ ಲೋಪದೋಷಗಳು ಕಂಡರೂ ಅವು ಸರಿ ಎಂದೇ ಭಾಸವಾಗುತ್ತಿತ್ತು. ನಾವು ಒಂದೇ ವಸ್ತುವನ್ನು ನೋಡುತ್ತಿದ್ದರೂ ನಿಜವಾಗಿ ಹಲವು ದೃಷ್ಟಿಭೇದಗಳಿವೆ. ಕೆಲವರಿಗೆ ಮತ್ತೊಬ್ಬರು ಹೊರಗೆ ಮಾಡುವುದೊಂದೇ ಕಾಣುವುದು. ಮತ್ತೆ ಕೆಲವರು ಅವರ ಸ್ವಭಾವವನ್ನು ಒಳಹೊಕ್ಕು ಒಂದು ಕೇಂದ್ರ ಆದರ್ಶಕ್ಕೆ ಹೋಲಿಸಿ, ಅವನ ವ್ಯಕ್ತಿತ್ವದಲ್ಲಿ ಆ ಆದರ್ಶ ಎಷ್ಟು ಮಟ್ಟಿಗೆ ವ್ಯಕ್ತವಾಗಿದೆ ಎಂದು ನೋಡುವರು. ಮತ್ತೆ ಕೆಲವರಿಗೆ ಅವ್ಯಕ್ತವಾದ ಒಂದು ಮಹಾಕಾರಣ ವ್ಯಕ್ತಿಯ ಹಿಂದೆ ಗೋಚರವಾಗಿ ಈಗಿನ ಜೀವನ ಅದರ ಸಣ್ಣ ಒಂದು ಪ್ರತಿ ಕ್ರಿಯೆಯಂತೆ ಕಾಣುವುದು. ನಮ್ಮ ಮಾತು ಮತ್ತು ನಡತೆ ಹಿಂದೆ ಇರುವ ಉದ್ದೇಶಗಳು ನಮಗೇ ಸರಿಯಾಗಿ ಅರಿವಾಗುವುದಿಲ್ಲ.

ನಾನು ಸ್ವಾಮಿಜಿ ಶಿಷ್ಯೆಯಾಗಿ ೧೮೯೮ ನೇ ನವೆಂಬರ್ ಪ್ರಾರಂಭದಲ್ಲಿ ಬಂದಾಗ ಮೇಲಿನಂತಹ ಒಂದು ಆದರ್ಶ ನನ್ನ ಜೀವನದ ಮೇಲೆ ತನ್ನ ಪ್ರಭಾವವನ್ನು ಬೀರತೊಡಗಿತು. ಅಂದಿನಿಂದ ಬರುವ ಜುಲೈ ತಿಂಗಳವರೆಗೆ ಸ್ವಾಮಿಜಿ ತಮ್ಮ ಜನರಿಂದ ಪರಿವೃತರಾಗಿದ್ದುದನ್ನು ನೋಡಿದೆನು. ಯಾವ ಹೊರಗಿನ ಐರೋಪ್ಯ ಮನೆಯವರ ಸಂಪರ್ಕವೂ ಇರಲಿಲ್ಲ. ನಾನು ಕೂಡ ಇವರಂತೆಯೇ ಒಬ್ಬಳಾದೆ. ಸ್ವಾಮಿಜಿಯವರ ಅದ್ಭುತ ಪ್ರತಿಭೆಯ ವಾತಾವರಣದಲ್ಲಿ ಜೀವಿಸತೊಡಗಿದೆ. ಸ್ವಾಮಿಜಿ ವಿವರಣೆ, ಅವರಿಗೆ ಹಿಂದೂ ಜನಾಂಗದ ಮೇಲೆ ಇರುವ ಅದ್ಭುತ ವಿಶ್ವಾಸದ ಪ್ರಭಾವದಲ್ಲಿ ಪರಿವೃತಳಾದೆ. ಅದು ಯಾವುದೋ ದಿವ್ಯ ಸಂಧ್ಯಾಸಮಯದಲ್ಲಿರುವಂತೆ ಕಂಡಿತು. ಅಲ್ಲಿ ಬೀಳುವ ನರನಾರಿಯರ ಛಾಯೆ ದೀರ್ಘವಾಗಿ ಹಬ್ಬಿತ್ತು.

ಸಾಧ್ಯವಾದಷ್ಟು ಬೇಗ ನಾನು ಕಲ್ಕತ್ತೆಯಲ್ಲಿ ಒಂದು ಶಾಲೆಯನ್ನು ಬಾಲಕಿಯರಿಗೆ ತೆರೆಯಬೇಕೆಂದು ಮೊದಲಿನಿಂದಲೇ ಗೊತ್ತಿತ್ತು. ಆದರೆ

ಸ್ವಾಮಿಜಿ ಬೇಗ ಈ ಕೆಲಸವನ್ನು ಮಾಡೆಂದು ಒತ್ತಾಯಮಾಡಲಿಲ್ಲ. ಆದರೆ ಪ್ರಯಾಣ ಮಾಡುವುದಕ್ಕೆ, ವಿರಾಮಕ್ಕೆ, ಮನಸ್ಸಿನಲ್ಲಿ ಕೆಲಸ ಮಾಡುವುದಕ್ಕೆ ಅಣಿಯಾಗಲು ನನಗೆ ಬೇಕಾದಷ್ಟುಕಾಲವನ್ನು ಸ್ವಾಮಿಜಿ ಕೊಟ್ಟಿದ್ದರು. ಈ ಶಾಲೆಯನ್ನು ತೆರೆದರೂ ಅದು ತಾತ್ಕಾಲಿಕ ವಾದು ದೆಂಬುದು, ಪ್ರಾಯೋಗಿಕವಾದುದೆಂಬುದೂ ನನಗೆ ಸ್ಪಷ್ಟವಾಗಿಗೊತ್ತಿತ್ತು. ಏನು ಬೇಕಾಗಿದೆ ಎಂಬುದನ್ನು ನಾನು ತಿಳಿದುಕೊಳ್ಳಬೇಕಾಗಿತ್ತು. ನಾನೆಲ್ಲಿರುವೆ, ಯಾರಮೇಲೆ ನನ್ನ ಪ್ರಯೋಗ ಪರಿಣಾಮಕಾರಿಯಾಗ ಬೇಕಾಗಿದೆಯೊ ಅವರ ಸ್ವಭಾವವನ್ನು ನಾನು ಚೆನ್ನಾಗಿ ತಿಳಿಯಬೇಕಾಗಿತ್ತು. ನನಗೆ ಒಂದು ಅಂಶ ಚೆನ್ನಾಗಿ ಗೊತ್ತಿತ್ತು. ಅದೇ ಕಲಿತುಕೊಳ್ಳುವವನು ಯಾವ ಸ್ಥಿತಿಯಲ್ಲಿರುವನೊ ಅಲ್ಲಿಂದ ಶಿಕ್ಷಣದ ಪ್ರಯೋಗ ಪ್ರಾರಂಭವಾಗ ಬೇಕಾಗಿದೆ ಎಂಬುದು. ವಿದ್ಯಾರ್ಥಿ ತನ್ನದೇ ರೀತಿಯಲ್ಲಿ ಬೆಳೆಯಲು ಅವನಿಗೆ ಅವಕಾಶ ಕಲ್ಪಿಸಿಕೊಡಬೇಕು. ನನ್ನಲ್ಲಿ ಯಾವ ಯೋಜನೆಯೂ ಇರಲಿಲ್ಲ; ಯಾವ ನಿರೀಕ್ಷಣೆಯೂ ಇರಲಿಲ್ಲ. ಭಾರತೀಯ ಸ್ತ್ರೀಯರ ಆಧುನಿಕ ವಿದ್ಯಾಭ್ಯಾಸಕ್ಕೆ ಸಹಾಯಕವಾಗಿ ಎಲ್ಲರಿಗೂ ಅನ್ವಯಿಸುವಂತಹ, ಎಲ್ಲರಲ್ಲಿಯೂ ನಿಜವಾಗಿರುವಂತಹ ಕೆಲವು ಶಿಕ್ಷಣಕ್ರಮಗಳನ್ನು ಕಂಡು ಹಿಡಿಯಬೇಕಾಗಿತ್ತು.

ಇದೇ ವಿಷಯದ ಮೇಲೆ ಇತರರು ಇನ್ನೂ ಹೆಚ್ಚು ವಿಶದವಾಗಿ ಆಲೋಚನೆ ಮಾಡಿದ್ದಿರಬಹುದು. ಎಲ್ಲಾ ಸಂಗಡಗಳಿಂದಲೂ ದೂರ ವಿರುವಂತೆ ನನಗೆ ಮೊದಲಿನಿಂದಲೂ ಹಲವರು ಹೇಳಿದ್ದರು. ಆದರೆ ನಾನು ಕಾಶ್ಮೀರದಲ್ಲಿ ವೀರನಾಗದ ಉದ್ಯಾನದಲ್ಲಿದ್ದಾಗ ಸ್ವಾಮಿಜಿ ಒಂದು ದಿನ ಸಂಜೆ ಈ ಸಮಸ್ಯೆಗಳನ್ನೆಲ್ಲಾ ಪರಿಹರಿಸಿಬಿಟ್ಟರು. ಸ್ವಾಮಿಜಿ ಧೂನಿಯ ಸುತ್ತ ಕುಳಿತ ನನ್ನನ್ನು ಮತ್ತು ಇತರರನ್ನು ನೋಡಿ, ಸ್ಕೂಲಿನ ವಿಷಯ ವಾಗಿ ನೀನು ಏನು ಯೋಚಿಸಿರುವೆ ಎಂದು ನನ್ನನ್ನು ಕೇಳಿದರು. ಇತರರ ನೆರವಿನಿಂದ ಪಾರುಮಾಡಿ ನಾನೆ ಸ್ವಲ್ಪ ಕೆಲಸಮಾಡಲು ನನ್ನ ರೀತಿಯನ್ನು ಅವರಿಗೆ ವಿವರಿಸಿದೆ. ನನ್ನ ವಿದ್ಯಾಭ್ಯಾಸದ ದೃಷ್ಟಿಯಲ್ಲಿ ಧಾರ್ಮಿಕಪ್ರಭಾ ವಕ್ಕೆ ಅವಕಾಶವಿರಬೇಕು; ಮತ್ತು ಜಾತಿಯ ಆವಶ್ಯಕತೆಯೂ ಇರಬೇಕು ಎಂದೆ.

ಸ್ವಾಮಿಜಿ ನಾನು ಹೇಳಿದುದನ್ನೆಲ್ಲಾ ಕೇಳಿ ಒಪ್ಪಿ ಕೊಂಡರು. ಸಾಧ್ಯವಾದಷ್ಟು ನಾನು ಹೇಳಿದುದಕ್ಕೆಲ್ಲ ಅವರು ಒಪ್ಪಿಗೆಯಿತ್ತರು. ಇನ್ನು

ಮೇಲೆ ಈ ವಿಷಯದಲ್ಲಿ ನಾನು ಗುರು ಅವರು ಶಿಷ್ಯರು ಎಂತ ಬೇಕಾದರೂ ಹೇಳಬಹುದು ಹಾಗೆ ಆಯಿತು. ಒಂದು ವಿಷಯದಲ್ಲಿ ಮಾತ್ರ ಅವರು ಸ್ವಲ್ಪವೂ ಜಗ್ಗಲಿಲ್ಲ. ತಾವು ಒಪ್ಪಿಗೆ ಈಯುವ ಭಾರತೀಯ ಸ್ತ್ರೀಯರ ವಿದ್ಯಾಭ್ಯಾಸ ಕ್ರಮದಲ್ಲಿ ನಾನು ಅದನ್ನು ಯಾವ ಜಾತಿಯ ದೃಷ್ಟಿಯಿಂದ ಬೇಕಾದರೂ ಮಾಡಬಹುದು ಎಂದರು. ಜಾತಿಯಿಂದ ಜಾತಿಯಿಲ್ಲದೆ ಇರುವ ಕಡೆಗೆ ನಾವು ಹೋಗಬೇಕಾಗಿದೆ ಎಂದು ಮಾತ್ರ ಹೇಳಿದರು ಅವರು. ನನ್ನ ಆಕ್ಷೇಪಣೆಗೆ ಅವರು ಸೂಚಿಸಿದ ಒಬ್ಬ ಭಾರತೀಯ ಸ್ತ್ರೀಯ ಸಹಾಯ ವನ್ನು ನಾನು ಸ್ವೀಕರಿಸಲು ಅನುಮಾನಿಸುವುದನ್ನು ಕಂಡೊಡನೆಯೆ ಅವರು ಅದನ್ನು ಒತ್ತಾಯಮಾಡಲಿಲ್ಲ. ಆದರೆ ನಾನು ಆಗಲೆ ಮಾಡಿಕೊಂಡ ಸ್ನೇಹಿತರಿಂದಲೂ ಸಹಾಯ ಸ್ವೀಕರಿಸುವುದನ್ನು ಅವರು ಒಪ್ಪಲಿಲ್ಲ. ಏಕೆಂದರೆ ಇಲ್ಲಿಯ ಜನರ ಶೀಲಪರಿಚಯ ನನಗೆ ಇನ್ನೂ ಆಗಿಲ್ಲ. ಆದ ಕಾರಣ ಗೊತ್ತಿಲ್ಲದ ಇತರರ ಸಹಾಯವನ್ನು ಸ್ವೀಕರಿಸಿ ತಪ್ಪು ಮಾಡು ವುದಕ್ಕಿಂತ, ಇತರರ ಸಹಾಯವಿಲ್ಲದೆ ನಾನೆ ಮುಂದೆ ಹೋಗುವುದು ಮೇಲು ಎಂದರು.

ನನ್ನ ಯೋಜನೆಯಂತೆ ಕೆಲಸ ಮಾಡಲು ನವೆಂಬರ್ ಮಧ್ಯಭಾಗದಲ್ಲಿ ಒಬ್ಬಳೇ ಕಲ್ಕತ್ತೆಗೆ ಬಂದೆ. ಸ್ಟೇಷನ್ನಿನಿಂದ ಕಲ್ಕತ್ತೆಯ ಉತ್ತರದಿಕ್ಕಿಗೆ ನಾನು ದಾರಿಯನ್ನು ಗೊತ್ತುಮಾಡಿಕೊಂಡೆ. ನಾನು ಅಲ್ಲಿಗೆ ಹೋದಮೇಲೆ ಯಾರಾದರೂ ಸ್ತ್ರೀಯರ ಮನೆಯಲ್ಲಿ ವಾಸಮಾಡಲು ಅವಕಾಶವನ್ನು ಕಲ್ಪಿಸಿಕೊಡಬೇಕೆಂದು ಸ್ವಾಮಿಜಿಯನ್ನು ಕೇಳಿಕೊಂಡೆ. ಆಗ ಸ್ವಾಮಿಜಿ ಕಲ್ಕತ್ತೆಯ ರಾಮಕೃಷ್ಣಮಠಕ್ಕೆ ಸೇರಿದ ಒಂದು ಕೋಣೆಯಲ್ಲಿದ್ದರು. ಅವರ ಮೂಲಕ ನಾನು ಎಲ್ಲಿರಬೇಕೆಂದು ವ್ಯವಸ್ಥೆಮಾಡತೊಡಗಿದರು. ಶ್ರೀರಾಮ ಕೃಷ್ಣರ ಸತಿಯಾದ ಶ್ರೀ ಶಾರದಾದೇವಿಯವರು ಆಗ ಭಕ್ತರೊಡನೆ ನಾವು ಇರುವ ಸ್ಥಳದ ಸಮೀಪದಲ್ಲೇ ಇದ್ದರು. ಆದಿನವೆ ಇರುವುದಕ್ಕೆ ಶಾರದಾ ದೇವಿಯರ ಮನೆಯಲ್ಲೆ ನನಗೊಂದು ಬರಿಯ ಕೋಣೆಯನ್ನು ಕೊಟ್ಟರು.

ಜನರ ಧೈರ್ಯಕ್ಕೆ ಕಾರಣ ಅವರ ಅಜ್ಞಾನ ಎಂಬುದನ್ನು ಮೇಲಿನ ಘಟನೆಯನ್ನು ನೆನೆದುಕೊಂಡಾಗ ಕಾಣುವುದು. ಇಲ್ಲದೇ ಇದ್ದರೆ ಈ ಸಮಸ್ಯೆಯನ್ನು ಹೇಗೆ ಪರಿಹರಿಸುವುದೊ ಅದು ಗೊತ್ತಾಗುವುದಿಲ್ಲ. ನಾನು ದುಡುಕಿಮಾಡಿದ ಕೆಲಸದಿಂದ ನನ್ನನ್ನು ಇಟ್ಟುಕೊಂಡ ಏನೂ ಅರಿಯದ ಮನೆಯ ಯಜಮಾನಿಗೆ ಮತ್ತು ದೂರದ ಹಳ್ಳಿಯಲ್ಲಿರುವ ಅವರ ನೆಂಟ

ರಿಷ್ಟರಿಗೆ ಯಾವ ತೊಂದರೆಯಾಗುವುದು ಎಂಬುದನ್ನು ನಾನು ಯೋಚಿಸಲೇ ಇಲ್ಲ. ಹಾಗೆ ಯೋಚಿಸಿದ್ದರೆ ನಾನು ಅಷ್ಟು ದುಡುಕುತ್ತಿರಲಿಲ್ಲ. ಏನಾದರೂ ಆಗಲಿ ನಾನು ಅಲ್ಲಿರದೆ ಬಂದುಬಿಡುತ್ತಿದ್ದೆ. ಜಾತಿ ಎಂದರೆ ಏನೊ ವ್ಯಕ್ತಿಯ ಒಂದು ಮೂಢಾಚಾರ, ಪರಕೀಯರ ನಡತೆಯಲ್ಲಿ ಮಡಿ ಮೈಲಿಗೆ ಇಲ್ಲ ಎಂದು ಅವರು ಊಹಿಸಿರಬಹುದು; ಆದರೆ ಸ್ವಲ್ಪ ಜ್ಞಾನ ಬಂದರೆ ಎಲ್ಲಾ ಹೊರಟುಹೋಗುವುದು ಎಂದು ಭಾವಿಸಿ, ತಪ್ಪಿನ ಹೊರೆಯನ್ನು ಅವರ ಮೇಲೆ ಹೇರಿ ಧೈರ್ಯವಾಗಿ ಯಜಮಾನಿಯ ಮನೆಗೆ ನುಗ್ಗಿದೆ.

ದೈವವಶಾತ್ ಸ್ವಾಮಿಜಿ ಪ್ರಭಾವ ಇಲ್ಲಿ ಅದ್ಭುತವಾಗಿತ್ತು. ಸಮಾಜ ನನ್ನನ್ನು ಸ್ವೀಕರಿಸಿತು. ಎಂಟು ಹತ್ತು ದಿನದಲ್ಲಿ ಹತ್ತಿರದಲ್ಲೆ ಒಂದು ಮನೆಯನ್ನು ನನಗಾಗಿ ಮಾಡಿದರು. ಆದರೂ ಮಧ್ಯಾಹ್ನವನ್ನೆಲ್ಲಾ ನಾನು ಶ್ರೀಮಾತೆಯವರ ಕೋಣೆಯಲ್ಲಿಯೇ ಕಳೆಯುತ್ತಿದ್ದೆ. ಬೇಸಗೆಕಾಲಬಂದ ಮೇಲೆ ಮಲಗುವುದಕ್ಕೆ ಚೆನ್ನಾಗಿ ಅಣಿಯಾದ ಅವರ ಕೋಣೆಗೇ ಬರುವಂತೆ ಶ್ರೀಮಾತೆಯವರು ನನಗೆ ಒತ್ತಾಯಮಾಡಿದರು. ಅಲ್ಲಿಗೆ ಬಂದಮೇಲೆ ಪ್ರತ್ಯೇಕ ಯಾವ ಕೋಣೆಯನ್ನೂ ತೆಗೆದುಕೊಳ್ಳದೆ ಇತರರು ಇದ್ದ ತಂಪಾದ ನಿರಾಡಂಬರವಾದ ಕೋಣೆಯಲ್ಲೆ ವಾಸಿಸತೊಡಗಿದೆ. ಕೋಣೆಯ ನೆಲವನ್ನು ಕೆಮ್ಮಣ್ಣಿನಿಂದ ಸಾರಿಸಿದ್ದರು; ಕೋಣೆಯ ತುಂಬ ಚಾಪೆ, ದಿಂಬು, ಸೊಳ್ಳೆಪರದೆಗಳಿದ್ದುವು.

ನಾನೀಗ ಇದ್ದ ಮನೆ ಸೋಜಿಗವಾಗಿತ್ತು. ಕೆಳಗೆ ಬಾಗಿಲಿನ ಸಮೀಪದಲ್ಲಿದ್ದ ಪಹರೆಯ ಕೋಣೆಯಲ್ಲಿ ಒಬ್ಬ ಸ್ವಾಮಿಗಳು ಇದ್ದರು. ಇವರು ಬಾಲ್ಯದಿಂದಲೂ ಮಾಡಿದ ಕಠೋರ ತಪಸ್ಸಿನ ಪರಿಣಾಮವಾಗಿ ಯುವಕರಾಗಿರುವಾಗಲೆ ಕ್ಷಯರೋಗಕ್ಕೆ ತುತ್ತಾಗಿದ್ದರು. ನಾನು ಬಂಗಾಳಿ ಕಲಿಯಲು ಅವರ ಕೋಣೆಗೆ ಹೋಗುತ್ತಿದ್ದೆ. ಮನೆಯ ಹಿಂಭಾಗದಲ್ಲಿರುವ ಅಡಿಗೆ ಮನೆಯಲ್ಲಿ ಸ್ವಾಮಿಗಳ ಒಬ್ಬ ಶಿಷ್ಯರು ಮತ್ತು ಅಡಿಗೆಯವನು ಕೆಲಸಮಾಡುತ್ತಿದ್ದರು. ಮಹಡಿಯ ಮೇಲೆ ಮತ್ತು ಮುಂದಿರುವ ಬಿಸಿಲು ಮಂಚ ಎಲ್ಲಾ ಹೆಂಗಸರಿಗೆ ಸೇರಿತ್ತು. ಅಲ್ಲಿ ನಿಂತು ನೋಡಿದರೆ ಎದುರಿಗೆ ಗಂಗಾನದಿ ಕಾಣುತ್ತಿತ್ತು.

ನಮ್ಮ ಮನೆ ಯಜಮಾನಿಯ ವಿಷಯವನ್ನು ಕುರಿತು ಮಾತನಾಡುವುದು ದಾಕ್ಷಿಣ್ಯವಾಗುವುದು. ಅವರ ಜೀವನಚರಿತ್ರೆ ಆಗಲೆ ಎಲ್ಲರಿಗೂ ಗೊತ್ತಿದೆ. ಅವರು ತಮ್ಮ ಐದನೆ ವರುಷದಲ್ಲಿ ಮದುವೆಯಾಗಿದ್ದು, ತಮ್ಮ

ಹದಿನೆಂಟನೆ ವಯಸ್ಸಿನವರೆಗೆ ಇವರ ಪತಿ ಅವರನ್ನು ಮರೆತುಬಿಟ್ಟದ್ದು, ಅನಂತರ ತಮ್ಮ ತಾಯಿಯ ಅನುಮತಿ ಪಡೆದು ನಡೆದುಕೊಂಡು ಗಂಗಾ ತೀರದಲ್ಲಿರುವ ದಕ್ಷಿಣೇಶ್ವರಕ್ಕೆ ತಮ್ಮ ಪತಿಯನ್ನು ನೋಡಲು ಹೋಗಿದ್ದು, ಅವರಿಗೆ ತಾವು ಪತಿ ಎಂಬುದು ಜ್ಞಾಪಕವಾಗಿದ್ದು, ಆದರೆ ಅವರು ಜೀವನ ದಲ್ಲಿ ತಾವು ಸ್ವೀಕರಿಸಿದ ಆದರ್ಶವನ್ನು ಕುರಿತು ಹೇಳಿದ್ದು, ಇವರು ತಮ್ಮ ಪತಿ ತಮ್ಮ ಜೀವಿತದ ಆದರ್ಶದಲ್ಲೆ ಮುಂದುವರಿದುಹೋಗಲು ಒಪ್ಪಿಗೆ ಇತ್ತದ್ದು, ತಮ್ಮನ್ನು ಶಿಷ್ಯೆಯೆಂದು ಪರಿಗ್ರಹಿಸಿದರೆ ಸಾಕು ಎಂದು ಹೇಳಿದ್ದು —ಇವುಗಳನ್ನೆಲ್ಲ ಅವರ ವಿಷಯವಾಗಿ ಹಲವುವೇಳೆ ಹೇಳಿರುವರು. ಅಂದಿ ನಿಂದ ತಮ್ಮ ಪತಿ ಸಮೀಪದಲ್ಲಿಯೇ ಅದೇ ತೋಟದಲ್ಲಿರುವ ಮತ್ತೊಂದು ಮನೆಯಲ್ಲಿ ಹಲವು ವರುಷಗಳ ಕಾಲ ನಿಷ್ಠೆಯಿಂದ ಬಾಳುತ್ತಿದ್ದರು. ಅವರು ಏಕಕಾಲದಲ್ಲೆ ಸತಿ ಮತ್ತು ಸನ್ಯಾಸಿನಿಯಾಗಿದ್ದರು. ಪತಿಯ ಶಿಷ್ಯರಲ್ಲಿ ಇವರು ಪ್ರಪ್ರಥಮರಾದರು. ಪತಿಯ ಕೆಳಗೆ ಶಿಕ್ಷಣ ಕಲಿಯಲು ಪ್ರಾರಂಭ ವಾದಾಗ ಅವರಿಗೆ ಇನ್ನೂ ಸಣ್ಣ ವಯಸ್ಸು. ಕೆಲವುವೇಳೆ ಅವರು ಮಾತ ನಾಡುತ್ತಿದ್ದಾಗ ಎಷ್ಟೊಂದು ವಿಧದಲ್ಲಿ ಶ್ರೀರಾಮಕೃಷ್ಣರು ಅವರನ್ನು ತರ ಬೇತು ಮಾಡಿದರು ಎಂದು ಹೇಳುತ್ತಿದ್ದರು. ಪರಮಹಂಸರು ಎಲ್ಲದ ರಲ್ಲಿಯೂ ಒಂದು ರೀತಿನೀತಿಯನ್ನು ಮೆಚ್ಚುತ್ತಿದ್ದರು. ಹಗಲು ಹೊತ್ತು ದೀಪಕ್ಕೆ ಸೇರಿದ ಉಪಕರಣಗಳನ್ನು ಎಲ್ಲಿ ಇಡುವುದು ಎಂಬುವಂತಹ ಸಣ್ಣ ವಿಷಯಗಳನ್ನು ಕೂಡ ಹೇಳಿಕೊಟ್ಟರು. ಅವರಿಗೆ ಕೊಳೆ ಕಂಡರೆ ಆಗದು. ಅವರು ಅಂತಹ ಕಠೋರಯತಿಗಳಾಗಿದ್ದರೂ ನಡತೆಯಲ್ಲಿ ಒಂದು ನಯ ವಿನಯ ಗಾಂಭೀರ್ಯವನ್ನು ಮೆಚ್ಚುತ್ತಿದ್ದರು. ಅವರ ಜೀವನದಲ್ಲಿ ಈ ಸಮಯಕ್ಕೆ ಸಂಬಂಧಪಟ್ಟ ಒಂದು ಘಟನೆ ಇದೆ. ಒಂದು ದಿನ ಶಾರದಾ ದೇವಿಯವರು ಮಗುವಿನಂತೆ ಸಂತೋಷದಿಂದ ಒಂದು ಬುಟ್ಟಿ ಹಣ್ಣು ಮತ್ತು ತರಕಾರಿಯನ್ನು ಶ್ರೀರಾಮಕೃಷ್ಣರ ಸಮೀಪಕ್ಕೆ ತಂದರು. ಶ್ರೀರಾಮಕೃಷ್ಣರು ಸ್ವಲ್ಪ ಅಸಮಾಧಾನದಿಂದಲೇ ಏತಕ್ಕೆ ಇಷ್ಟು ದುಂದುಗಾರಿಕೆ ಎಂದು ಹೇಳಿದರು.

ಈ ಮಾತನ್ನು ಕೇಳಿದೊಡನೆಯೆ ಶ್ರೀ ಶಾರದಾದೇವಿಯವರಿಗೆ ನಿರಾಶೆ ಯಾಯಿತು. ಸಂತೋಷವೆಲ್ಲ ಮಾಯವಾಯಿತು. ಏನಾದರಾಗಲಿ ಇದು ನನಗೋಸುಗವಲ್ಲವಲ್ಲ ಎಂದುಕೊಂಡು ಮನಸ್ಸಿನಲ್ಲೆ ವ್ಯಥೆಪಡುತ್ತ ಹೋಗುತ್ತಿದ್ದರು. ಆದರೆ ಶ್ರೀರಾಮಕೃಷ್ಣರಿಗೆ ಇದನ್ನು ಸಹಿಸುವುದಕ್ಕೆ

ಆಗಲಿಲ್ಲ. ತಮ್ಮ ಪಕ್ಕದಲ್ಲಿದ್ದ ಶಿಷ್ಯರನ್ನು ನೋಡಿ "ನಿಮ್ಮಲ್ಲಿ ಯಾರಾದರೂ ಒಬ್ಬರು ಹೋಗಿ ಅವರನ್ನು ಕರೆದುಕೊಂಡು ಬನ್ನಿ. ಅವರು ಅಳುವು ದನ್ನು ನೋಡಿದರೆ ನನ್ನ ಭಕ್ತಿಯೆಲ್ಲಾ ಹಾರಿಹೋಗುವುದು" ಎಂದರು.

ಶ್ರೀಮಾತೆ ಅಷ್ಟು ಶ್ರೀರಾಮಕೃಷ್ಣರ ಪ್ರೀತಿಗೆ ಪಾತ್ರರಾಗಿದ್ದರು. ತಾವು ಆರಾಧಿಸುವ ಪತಿದೇವನ ವಿಷಯವನ್ನು ಕುರಿತು ಮಾತನಾಡುವಾಗ ಸ್ವಲ್ಪವಾದರೂ ಅವರ ಮೇಲೆ ಆಸಕ್ತಿಯಿರಲಿಲ್ಲ. ತಮ್ಮ ಪತಿದೇವನ ಆಣತಿ ಯನ್ನು ಪರಿಪಾಲಿಸುವುದಕ್ಕೆ ಸುಖವಾಗಲಿ ದುಃಖವಾಗಲಿ ಮೇರುಪರ್ವತ ದಂತೆ ದೃಢವಾಗಿ ನಿಲ್ಲುವರು. ಅವರು ತಮ್ಮ ಪತಿಯನ್ನು ಗುರುದೇವ ಎಂದು ಕರೆಯುತ್ತಿದ್ದರು. ಅವರಾಡುವ ಒಂದು ಮಾತಿನಲ್ಲಿಯೂ ಪತಿ ನನಗೆ ಮಾತ್ರ ಸೇರಿದವರು ಎಂಬ ಭಾವನೆಯ ಛಾಯೆಯೂ ಇರಲಿಲ್ಲ. ಇವರಿಗೂ ಶ್ರೀರಾಮಕೃಷ್ಣರಿಗೂ ಇರುವ ಸಂಬಂಧದ ಪರಿಚಯವಿಲ್ಲದವರು ಶ್ರೀಮಾತೆಯವರು ತಮ್ಮ ಪತಿಯ ವಿಷಯವಾಗಿ ಆಡುವ ಮಾತನ್ನು ಕೇಳಿ ದಾಗ, ಇವರು ಇತರರಿಗಿಂತ ಶ್ರೀರಾಮಕೃಷ್ಣರಿಗೆ ಹೆಚ್ಚು ಸಮೀಪದಲ್ಲಿರು ವವರೆಂದಾಗಲಿ, ಅವರ ವಿಶ್ವಾಸಕ್ಕೆ ಇವರಿಗೆ ಹೆಚ್ಚು ಅಧಿಕಾರವಿರುವು ದೆಂದಾಗಲಿ ಊಹಿಸುವುದಕ್ಕೂ ಆಗುತ್ತಿರಲಿಲ್ಲ. ತಾವು ಅವರ ಸತಿ ಎಂಬು ದನ್ನು ಎಂದೋ ಮರೆತುಬಿಟ್ಟದ್ದಂತೆ ಕಾಣುತ್ತಿದ್ದರು. ಶಿಷ್ಯನಲ್ಲಿರ ಬೇಕಾದ ಶ್ರದ್ಧಾಭಕ್ತಿಗಳೊಂದೇ ಇವರಲ್ಲಿ ಇದ್ದುದ್ದು. ಆದರೂ ಜನ ಶ್ರೀಮಾತೆಯನ್ನು ಪರಮಪೂಜ್ಯ ದೃಷ್ಟಿಯಿಂದ ನೋಡುತ್ತಿದ್ದರು. ಅವರು ಯಾವಾಗಲಾದರೂ ರೈಲಿನಲ್ಲಿ ಹೋದರೆ ಅವರ ಮೇಲೆ ಇರುವ ಸೀಟಿನಲ್ಲಿ ಯಾರಿಗೂ ಕುಳಿತುಕೊಳ್ಳುವುದಕ್ಕೆ ಮನಸ್ಸಾಗುತ್ತಿರಲಿಲ್ಲ. ಅವರ ಸಾನ್ನಿಧ್ಯವೇ ಪರಮಪವಿತ್ರವಾಗುತ್ತಿತ್ತು.

ಶ್ರೀರಾಮಕೃಷ್ಣರು ಭಾರತೀಯ ನಾರಿಯರ ವಿಚಾರವಾಗಿ ಹೇಳಿದ ಕೊನೆಯಮಾತು ಶ್ರೀಮಾತೆಯವರ ಜೀವನ ಎಂದು ನನಗೆ ತೋರುವುದು. ಆದರೆ ಅವರು ಹಿಂದಿನ ಆದರ್ಶದ ಕೊನೆಯೊ ಅಥವಾ ಬರುವ ಆದರ್ಶದ ನಾಂದಿಯೊ? ಅತ್ಯಂತ ಸರಳ ಸ್ವಭಾವದ ಹೆಂಗಸರು ಕೂಡ ಪಡೆಯಬಹು ದಾದಂತಹ ಮಾಧುರ್ಯ ಮತ್ತು ಪರಿಜ್ಞಾನವನ್ನು ಅವರಲ್ಲಿ ನಾವು ನೋಡು ತ್ತೇವೆ. ನನಗಂತೂ ಅವರ ಚಾರಿತ್ರದ ಪವಿತ್ರತೆಯಷ್ಟೇ ಮುಖ್ಯ ಅವರಲ್ಲಿರುವ ರಾಣಿಯ ಗಾಂಭೀರ್ಯ ಮತ್ತು ಅವರ ಮನಸ್ಸಿನ ಔದಾರ್ಯ. ಅವರಿಗೆ ಎಂತಹ ಹೊಸದಾದ ಜಟಿಲವಾದ ಪ್ರಶ್ನೆಯನ್ನು ಹಾಕಿದರೂ

ಬಹಳ ಉದಾರವಾದ ಅಭಿಪ್ರಾಯಗಳನ್ನು ಕೊಡಲು ಹಿಂದು ಮುಂದು ನೋಡುವುದನ್ನು ನಾನು ಅವರಲ್ಲಿ ಕಾಣೆ. ಅವರ ಜೀವನವೆ ಒಂದು ನಿರಂತರ ನೀರವಧ್ಯಾನದಂತೆ ಇದೆ. ಅವರ ಅನುಭವವೆಲ್ಲ ಆಧ್ಯಾತ್ಮಿಕ ಸಂಸ್ಕೃತಿಗೆ ಸೇರಿದುದು. ಆದರೂ ಅವರು ಪ್ರತಿಯೊಂದು ಸಮಸ್ಯೆಯನ್ನೂ ಇದಿರಿಸಬಲ್ಲವರಾಗಿದ್ದರು. ಅವರ ಸುತ್ತಲಿರುವ ಜನರ ವಕ್ರತೆಗೆ ಈಡಾದರೆ? ಅವರ ಮೊಗದ ಮೇಲೆ ಒಂದು ಮೌನ ಮತ್ತು ಗಭೀರಮುದ್ರೆಯೊಂದನ್ನು ಮಾತ್ರ ನೋಡಬಹುದು. ಅವರ ಅನುಭವಕ್ಕೆ ನಿಲುಕದ ಯಾವುದಾದರೂ ಸಾಮಾಜಿಕ ಕೋಟಲೆಗೆ ತುತ್ತಾದವರು ತಮ್ಮ ವ್ಯಥೆಯನ್ನು ಅವರಿಗೆ ವಿವರಿಸಿದರೆ ಸ್ವಲ್ಪವೂ ಅನುಮಾನಿಸದೆ ಸಮಸ್ಯೆಗೆ ಪರಿಹಾರವನ್ನು ಪ್ರಶ್ನೆ ಕೇಳುವವರಿಗೆ ನೀಡುವರು. ಸ್ವಲ್ಪ ಕಾಠಿಣ್ಯ ತೋರಬೇಕಾದ ಪ್ರಸಂಗ ಬಂದರೆ? ಸ್ವಲ್ಪವೂ ಅನುಮಾನಿಸುತ್ತಿರಲಿಲ್ಲ. ಈಗ ತಾನೆ ಸೇರಿದವನ ನಡತೆ ಅತೃಪ್ತಿಕರವಾಗಿದ್ದರೆ ನೀನು ಕೆಲವು ವರುಷ ಭಿಕ್ಷೆ ಬೇಡಲು ಹೋಗೆಂದು ಕಳುಹಿಸಿದರೆ ಒಂದು ಗಂಟೆಯೊಳಗಾಗಿ ಅವನು ಹೊರಟುಹೋಗುತ್ತಿದ್ದನು. ಯಾರು ಮರ್ಯಾದೆ ಮತ್ತು ಗೌರವವನ್ನು ಅಲ್ಲಗಳೆದಿರುವರೊ ಅವರು ಪುನಃ ಅವರೆದುರಿಗೆ ಮತ್ತೊಮ್ಮೆ ಬರುತ್ತಿರಲಿಲ್ಲ. ಯಾರೊ ಒಬ್ಬ ಶಿಷ್ಯ ಈ ರೀತಿ ತಪ್ಪು ಮಾಡಿದಾಗ ಶ್ರೀರಾಮಕೃಷ್ಣರಿ ಅವನಿಗೆ ಹೀಗೆ ಹೇಳುತ್ತಾರೆ: "ನಿನಗೆ ಕಾಣುವುದಿಲ್ಲವೆ? ಅವರಲ್ಲಿರುವ ಸ್ತ್ರೀತ್ವಕ್ಕೆ ಅಪಮಾನವಾಗಿದೆ. ಇದು ಬಹಳ ಅಪಾಯಕರ!"

ಶ್ರೀಮಾತೆಯವರಿಗೆ ಹಾಡುವುದರ ಮೇಲೆ ಇದ್ದ ಅಭಿಮಾನವನ್ನು ಕಂಡು ಅವರ ಶಿಷ್ಯೆಯೊಬ್ಬಳು ಶ್ರೀಮಾತೆ ಜೀವನವೆ ನಾದಮಯವಾಗಿದೆ ಎನ್ನುತ್ತಿದ್ದರು. ಅವರ ಜೀವನವೆಲ್ಲ ಮಾರ್ದವದಿಂದ ತುಂಬಿತ್ತು, ಹರ್ಷದಿಂದ ನಲಿಯುತ್ತಿತ್ತು. ಇವರು ಪೂಜೆಮಾಡುವ ಕೋಣೆಯಂತೂ ಪ್ರಸನ್ನತೆಯಿಂದ ತುಂಬಿ ತುಳುಕಾಡುತ್ತಿತ್ತು.

ಶ್ರೀಮಾತೆಗೆ ಓದುವುದಕ್ಕೆ ಬರುತ್ತಿತ್ತು. ರಾಮಾಯಣ ಓದುವುದರಲ್ಲೆ ಬಹಳಹೊತ್ತು ಕಳೆಯುತ್ತಿದ್ದರು. ಆದರೆ ಬರೆಯುವುದಕ್ಕೆ ಬಾರದು. ಆದರೂ ಅವರನ್ನು ಅವಿದ್ಯಾವಂತರೆಂದು ಹೇಳಲು ಆಗುವುದಿಲ್ಲ. ಗೃಹಕ್ಕೆ ಮತ್ತು ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಪಟ್ಟ ವಿಷಯದಲ್ಲಿ ಬಹಳಕಾಲ ಕಷ್ಟಪಟ್ಟು ಅನುಭವ ಗಳಿಸಿದ್ದರು. ಭರತಖಂಡದಲ್ಲೆಲ್ಲಾ ಸಂಚರಿಸಿದ್ದರು. ಹಲವು ಮುಖ್ಯ ತೀರ್ಥಸ್ಥಳಗಳನ್ನು ನೋಡಿದರು. ಶ್ರೀರಾಮಕೃಷ್ಣರ

ಪತ್ನಿಯಾಗಿದ್ದುದರಿಂದ ವ್ಯಕ್ತಿತ್ವದ ಬೆಳವಣಿಗೆಗೆ ಬೇಕಾದಷ್ಟು ಅವಕಾಶ ವಿತ್ತು ಎಂಬುದನ್ನು ನಾವು ಮರೆಯಕೂಡದು. ಮಹಾಪುರುಷನ ಸಂಪರ್ಕದ ಪ್ರಭಾವ ಅವರ ಮನಸ್ಸಿನಮೇಲೆ ಪರಿಣಾಮಕಾರಿಯಾಗಿದ್ದುದನ್ನು ನಾವು ನೋಡುತ್ತೇವೆ. ಒಂದು ಹೊಸ ಭಾವ ಮತ್ತು ಹೊಸಧರ್ಮಕ್ಕೆ ಸಂಬಂಧಪಟ್ಟ ವಿಷಯವನ್ನು ತಕ್ಷಣ ಗ್ರಹಿಸಬಲ್ಲವರಾಗಿದ್ದರು. ಇಲ್ಲಿ ಮೇಲಿನ ಪ್ರಭಾವ ಎಲ್ಲಾ ಕಡೆಗಿಂತ ಹೆಚ್ಚಾಗಿ ವ್ಯಕ್ತವಾಗಿದೆ.

ಒಂದುದಿನ ಮಧ್ಯಾಹ್ನ ಈಸ್ಟರ್‌ದಿನದಲ್ಲಿ ನಾವಿದ್ದ ಮನೆಗೆ ಶ್ರೀಮಾತೆಯವರು ಬಂದಾಗ ನನಗೆ ಮೇಲಿನ ಸ್ವಭಾವ ಪ್ರಥಮವಾಗಿ ಪರಿಚಯವಾಯಿತು. ಅದಕ್ಕಿಂತ ಮುಂಚೆ ನಾನು ಅವರೊಡನೆ ಇದ್ದಾಗ ಅವರು ತಮ್ಮ ಆದರ್ಶಕ್ಕೆ ವಿರುದ್ಧವಾದ ಸನ್ನಿವೇಶದಲ್ಲಿ ಹೇಗೆ ಇರುವರು ಎಂಬುದನ್ನು ಗಮನಿಸುವುದರಲ್ಲಿ ನಿರತಳಾಗಿದ್ದೆ. ಆದರೆ ಇಂದು ಶ್ರೀಮಾತೆ ಮತ್ತು ಅವರೊಡನೆ ಬಂದವರು ಮನೆಯನ್ನೆಲ್ಲ ನೋಡಿದ ಮೇಲೆ ದೇವರ ಮನೆಯಲ್ಲಿ ಕುಳಿತುಕೊಳ್ಳುತ್ತೇನೆ ಎಂದರು. ಈಸ್ಟರ್‌ದಿನದ ವಿಶೇಷವನ್ನು ತಿಳಿಯಬೇಕೆಂದು ಕೇಳಿದರು. ಇದನ್ನು ಅವರಿಗೆ ವಿವರಿಸಿದ ಮೇಲೆ ನಮ್ಮ ಹತ್ತಿರ ಇದ್ದ ಒಂದು ಸಣ್ಣ ಫ್ರೆಂಚ್ ವಾದ್ಯದೊಂದಿಗೆ ಅವರಿಗೆ ಈಸ್ಟರ್ ಹಾಡುಗಳನ್ನು ಹೇಳಿದೆವು. ಈಸ್ಟರ್ ಹಾಡುಗಳನ್ನು ಕೇಳಿದೊಡನೆಯೆ ಭಾಷೆ ಮತ್ತು ಅರ್ಥ ಗೊತ್ತಾಗದೆ ಇದ್ದರೂ ತಕ್ಷಣವೇ ಅವರ ಮುಖಚರ್ಯೆ ಬದಲಾಯಿಸಿತು. ಹಾಡಿನ ಅರ್ಥ ಮತ್ತು ಭಾವದಲ್ಲಿ ತನ್ಮಯರಾದಂತೆ ಕಂಡಿತು. ಶ್ರೀಮಾತೆಯ ಆಧ್ಯಾತ್ಮಿಕ ಪ್ರವೃತ್ತಿಯ ಸಂಸ್ಕಾರ ನಮಗೆ ಪ್ರಥಮಬಾರಿ ಸ್ಪಷ್ಟವಾಗಿ ವ್ಯಕ್ತವಾಯಿತು. ಶ್ರೀರಾಮಕೃಷ್ಣರ ಪವಿತ್ರ ಕರಸ್ಪರ್ಶವಾದ ಇವರ ಸುತ್ತಲಿರುವ ಸ್ತ್ರೀಯರಲ್ಲೆಲ್ಲ ನಾವು ಈ ಸ್ವಭಾವವನ್ನು ನೋಡುತ್ತೇವೆ. ಆದರೆ ಶ್ರೀಮಾತೆಯಲ್ಲಿ ಎಲ್ಲರಿಗಿಂತ ಈ ಗುಣ ಅಧಿಕವಾಗಿದೆ. ಆಯಾಧರ್ಮದಲ್ಲಿ ಪರಿಣಿತರಾದವರಲ್ಲಿ ಇರುವಷ್ಟು ನಿಸ್ಸಂದೇಹವಾಗಿ ಇವರಲ್ಲಿತ್ತು.

ಇದೇ ಸ್ವಭಾವ ಮತ್ತೊಂದು ದಿನ ವ್ಯಕ್ತವಾಯಿತು. ಒಂದು ಸಂಜೆ ಅವರೊಡನೆ ಇದ್ದಾಗ ಶ್ರೀಮಾತೆಯವರು ಏರೋಪ್ಯರು ಮದುವೆಯನ್ನು ಹೇಗೆ ಮಾಡುತ್ತಾರೆ ಎಂಬುದನ್ನು ವಿವರಿಸು ಎಂದು ನನ್ನನ್ನೂ ಮತ್ತೊಬ್ಬ ಗುರುಭಗಿನಿಯನ್ನೂ ಕೇಳಿದರು. ನಾವು ಹಾಸ್ಯವಾಗಿ ನಗುತ್ತ ನಮ್ಮಲ್ಲೆ ಒಬ್ಬರು ಪಾದ್ರಿಯಂತೆ ಅನಂತರ ಸತಿಪತಿಯವರಂತೆ ನಟಿಸಿ ತೋರಿಸಿ

ದೆವು. ಆದರೆ ಮದುವೆ ಸಮಯದಲ್ಲಿ ಸತಿಪತಿಗಳಿಬ್ಬರೂ ಮಾಡುವ ಶಪಥ ಎಂತಹ ಅದ್ಭುತ ಪರಿಣಾಮವನ್ನು ಅಲ್ಲಿ ಸೇರಿದವರ ಮೇಲೆ ಉಂಟುಮಾಡು ವುದು ಎಂಬುದಕ್ಕೆ ನಾವು ಸಿದ್ಧರಾಗಿರಲಿಲ್ಲ. "ಒಳ್ಳೆಯದಾಗಲಿ ಕೆಟ್ಟ ದ್ದಾಗಲಿ, ಶ್ರೀಮಂತರಾಗಲಿ ಬಡವರಾಗಲಿ, ಆರೋಗ್ಯದಲ್ಲಿರಲಿ ಅನಾ ರೋಗ್ಯದಲ್ಲಿರಲಿ, ಮರಣಪರಿಯಂತರ ನಾವು ಅಗಲುವುದಿಲ್ಲ." ಇದನ್ನು ಕೇಳಿದಾಗ ಎಲ್ಲರೂ ಮೆಚ್ಚಿದರು. ಆದರೆ ಶ್ರೀಮಾತೆಯವರು ಎಲ್ಲರಿಗಿಂತಲೂ ಹೆಚ್ಚು ಮೆಚ್ಚಿದ್ದರು. ಪುನಃ ಪುನಃ ಶ್ರೀಮಾತೆ ಅದನ್ನು ಹೇಳುವಂತೆ ಕೇಳಿದರು. "ಓ, ಎಂತಹ ಧಾರ್ಮಿಕನುಡಿಗಳಿವು" ಎಂದು ಪದೇಪದೇ ಕೊಂಡಾಡುತ್ತಿದ್ದರು.

ಈ ಕಾಲದಲ್ಲಿ ಶ್ರೀಮಾತೆಯವರೊಂದಿಗೆ ಗೋಪಾಲ್‌ಮಾ, ಯೋಗಿನ್‌ಮಾ, ಗುಲಾಬ್‌ಮಾ ಮತ್ತು ಲಕ್ಷ್ಮೀದೀದಿ ಮತ್ತು ಇತರರು ಇದ್ದರು. ಇವರೆಲ್ಲ ವಿಧವೆಯರು. ಇವರಲ್ಲಿ ಗೋಪಾಲಮಾ ಮತ್ತು ಲಕ್ಷ್ಮೀದೀದಿ ಎಂಬುವರು ಬಾಲವಿಧವೆಯರು. ಇವರೆಲ್ಲ ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿ ಇದ್ದ ಕಾಲದಿಂದಲೂ ಅವರ ಶಿಷ್ಯರಾಗಿದ್ದರು. ಲಕ್ಷ್ಮೀದೀದಿ ಎಂಬುವರು ಶ್ರೀರಾಮಕೃಷ್ಣರ ಸೋದರ ಮಗಳು. ಈಗಲೂ ಆಕೆಗೆ ವಯಸ್ಸೇನೂ ಅಷ್ಟು ಆಗಿಲ್ಲ. ಈಗಲೂ ಕೂಡ ಉಪನ್ಯಾಸ ಭಜನೆ ಮುಂತಾದುವುಗಳಿಗೆ ಆಕೆಯನ್ನು ಅನೇಕರು ಕರೆಯುತ್ತಾರೆ. ಈಕೆ ಸ್ನೇಹ ಪರಳು. ಬೇಕಾದಷ್ಟು ವಿಷಯಗಳು ಗೊತ್ತಿವೆ. ಕೆಲವುವೇಳೆ ಇವರು ಪುಟಗಟ್ಟಲೆ ಯಾವುದಾದರೂ ಪೌರಾಣಿಕ ನಾಟಕಗಳಿಂದ ಸಂಭಾಷಣೆ ಯನ್ನು ಹೇಳುವರು. ಮತ್ತೆ ಕೆಲವುವೇಳೆ ಭಾಗವತವೊ ಅಥವಾ ಮತ್ತಾವು ದಾದರೂ ದೃಶ್ಯವನ್ನೊ ಅಭಿನಯಿಸುವಾಗ, ನೆರೆದವರಿಗೆ ಒಬ್ಬೊಬ್ಬರಿಗೆ ಒಂದೊಂದು ಪಾತ್ರವನ್ನು ಕೊಟ್ಟು ನಗುವಿನಲಹರಿಯಲ್ಲಿ ಮುಳುಗಿಸುವರು. ಅತ್ಯಲ್ಪ ನಾಟಕ ಸಲಕರಣೆಗಳ ಸಹಾಯದಿಂದ ಕಾಳಿ, ಸರಸ್ವತಿ, ಜಗದ್ಧಾತ್ರಿ, ಕದಂಬ ಮರದ ಕೆಳಗೆ ಇರುವ ಕೃಷ್ಣ ಇವರನ್ನು ಅತಿ ಮನೋಹರವಾಗಿ ಅಭಿನಯಿಸುತ್ತಿದ್ದರು.

ಶ್ರೀರಾಮಕೃಷ್ಣರು ಇಂತಹ ಅಭಿನಯವನ್ನೆಲ್ಲ ಮೆಚ್ಚುತ್ತಿದ್ದರು ಎಂದು ಕೇಳಿರುವೆವು. ಕೆಲವುವೇಳೆ ಇವರೇ ಸ್ತ್ರೀಯರ ಕೋರಿಕೆಯಂತೆ ಹಲವು ಗಂಟೆಗಳ ಕಾಲ ಯಾವುದಾದರೂ ಭಕ್ತಿಯ ದೃಶ್ಯಗಳನ್ನು ಅಭಿನಯಿ ಸುತ್ತಿದ್ದರು. ಒಂದೊಂದು ಸಲ ಒಂದೊಂದು ಪಾತ್ರವನ್ನು ತೋರಿ ಆಯಾ

ಪಾತ್ರಗಳು ಹೇಳುವ ಹಾಡು ಮುಂತಾದುವುಗಳಲ್ಲಿ ಹುದುಗಿರುವ ಭಾವ ಎಲ್ಲರ ಮನಮುಟ್ಟುವಂತೆ ಮಾಡುತ್ತಿದ್ದರು.

ಗೋಪಾಲಮಾ ಈಗ ಮುದುಕಿಯಾಗಿದ್ದಳು. ಹದಿನೈದು ಇಪ್ಪತ್ತು ವರುಷಗಳ ಹಿಂದೆಯೆ ಅವರಿಗೆ ವಯಸ್ಸಾಗಿತ್ತು. ಆಗ ಒಂದು ದಿನ ಮಧ್ಯಾಹ್ನ ತಾವು ವಾಸಮಾಡುತ್ತಿದ್ದ ಕಮಾರಹಾಟಿಯಿಂದ ಗಂಗಾತೀರ ದಲ್ಲಿರುವ ದಕ್ಷಿಣೇಶ್ವರಕ್ಕೆ ಶ್ರೀರಾಮಕೃಷ್ಣರನ್ನು ನೋಡಲು ಹೊರಟರು. ಶ್ರೀರಾಮಕೃಷ್ಣರು ತಮ್ಮ ಬಾಗಿಲ ಬಳಿ ನಿಂತುಕೊಂಡು ಇವರನ್ನು ನಿರೀಕ್ಷಿ ಸುತ್ತಿದ್ದರಂತೆ ಎನ್ನುವರು. ಅನಂತರ ಅವರನ್ನು ಸ್ವಾಗತಿಸಿದರು. ಹಲವು ವರುಷಗಳಿಂದ ಗೋಪಾಲ ಅವರ ಇಷ್ಟದೇವತೆಯಾಗಿದ್ದ. ಪರಮಹಂಸರ ಸಮೀಪಕ್ಕೆ ಬಂದಾಗ ಅವರಿಗೆ ಗೋಪಾಲ ಪರಮಹಂಸರಲ್ಲಿ ಕಂಡಂತೆ ಆಯಿತು. ಅವರು ಅಂದಿನಿಂದ ಈ ಅನುಭವದಂತೆ ನಡೆದುಕೊಳ್ಳುತ್ತಿದ್ದರು. ಶ್ರೀರಾಮಕೃಷ್ಣರು ಕೂಡ ಗೋಪಾಲಮಾ ಅವರನ್ನು ತಮ್ಮ ತಾಯಿಯಂತೆ ಭಾವಿಸತೊಡಗಿದರು. ಅವರಿಗೆ ಒಮ್ಮೆಯೂ ಗೋಪಾಲಮಾ ನಮಸ್ಕರಿ ಸುತ್ತಿರಲಿಲ್ಲ. ನಮ್ಮ ಶ್ರೀಮಾತೆಯನ್ನು ತಮ್ಮ ಸೊಸೆ ಅಲ್ಲದೆ ಬೇರೆ ರೀತಿ ಯಲ್ಲಿ ನೋಡುತ್ತಿರಲಿಲ್ಲ.

ನಾನು ಕಲ್ಕತ್ತೆಯಲ್ಲಿ ಶ್ರೀಮಾತೆ ಮತ್ತು ಅವರ ಪರಿವಾರದೊಡನೆ ಹಲವು ತಿಂಗಳು ಕಳೆದೆನು. ಆ ಸಮಯದಲ್ಲಿ ಗೋಪಾಲಮಾ ಕೆಲವು ವೇಳೆ ಕಲ್ಕತ್ತೆಯಲ್ಲಿಯೂ ಮತ್ತೆ ಕೆಲವು ವೇಳೆ ಹಲವುವಾರಗಳು ಕಮಾರ ಹಾಟಿಯಲ್ಲಿಯೂ ಇರುತ್ತಿದ್ದರು. ನಮ್ಮಲ್ಲಿ ಕೆಲವರು ಅವರ ಸ್ಥಳವನ್ನು ನೋಡಲು ಒಂದು ಹುಣ್ಣಿಮೆ ಹೋದೆವು. ದೋಣಿ ಮುಂದೆ ಸಾಗುತ್ತಿದ್ದಂತೆ ಗಂಗಾನದಿ ಎಷ್ಟು ಸುಂದರವಾಗಿ ಕಾಣುತ್ತಿತ್ತು! ತೀರದಿಂದ ಪ್ರಾರಂಭ ವಾಗುವ ಆ ಉದ್ದನೆಯ ಸೋಪಾನಪಂಕ್ತಿಯೂ ಅಷ್ಟೇ ರಮ್ಯ. ಸ್ನಾನದ ದೊಡ್ಡ ಘಾಟಿನಮೂಲಕ ಹೋಗಿ ಪಕ್ಕದ ಹಸರುಗಾವಲನ್ನು ದಾಟಿದರೆ ಮಠದಂತೆ ಇರುವ ವರಾಂಡ ಸಿಕ್ಕುವುದು. ಅದರ ಬಲಗಡೆಯಲ್ಲಿ ಸಣ್ಣ ಕೋಣೆ ಇರುವುದು. ಬಹುಶಃ ಹಿಂದೆ ಅದನ್ನು ಹತ್ತಿರ ಇದ್ದ ದೊಡ್ಡ ಮನೆಯ ಸೇವಕರಿಗಾಗಿ ಕಟ್ಟಿದ್ದರು ಎಂದು ತೋರುವುದು. ಇಲ್ಲಿಯೇ ಗೋಪಾಲಮಾ ಹಲವು ವರ್ಷಗಳು ವಾಸವಾಗಿದ್ದರು, ಇಲ್ಲಿಯೇ ಜಪಮಾಡುತ್ತಿದ್ದರು. ಈಗ ದೊಡ್ಡ ಮನೆ ಖಾಲಿಯಾಗಿತ್ತು. ಅವರ ಸಣ್ಣ ಕೋಣೆಯಲ್ಲಂತೂ ಏನೂ ಇರಲಿಲ್ಲ. ಅವರು ಮಲಗುತ್ತಿದ್ದುದು ಕಲ್ಲಿನಮೇಲೆ, ನೆಲವೂ ಕಲ್ಲೆ.

ದೆವು. ಆದರೆ ಮದುವೆ ಸಮಯದಲ್ಲಿ ಸತಿಪತಿಗಳಿಬ್ಬರೂ ಮಾಡುವ ಶಪಥ ಎಂತಹ ಅದ್ಭುತ ಪರಿಣಾಮವನ್ನು ಅಲ್ಲಿ ಸೇರಿದವರ ಮೇಲೆ ಉಂಟುಮಾಡು ವುದು ಎಂಬುದಕ್ಕೆ ನಾವು ಸಿದ್ಧರಾಗಿರಲಿಲ್ಲ. "ಒಳ್ಳೆಯದಾಗಲಿ ಕೆಟ್ಟ ದ್ದಾಗಲಿ, ಶ್ರೀಮಂತರಾಗಲಿ ಬಡವರಾಗಲಿ, ಆರೋಗ್ಯದಲ್ಲಿರಲಿ ಅನಾ ರೋಗ್ಯದಲ್ಲಿರಲಿ, ಮರಣಪರಿಯಂತರ ನಾವು ಅಗಲುವುದಿಲ್ಲ." ಇದನ್ನು ಕೇಳಿದಾಗ ಎಲ್ಲರೂ ಮೆಚ್ಚಿದರು. ಆದರೆ ಶ್ರೀಮಾತೆಯವರು ಎಲ್ಲರಿಗಿಂತಲೂ ಹೆಚ್ಚು ಮೆಚ್ಚಿದ್ದರು. ಪುನಃ ಪುನಃ ಶ್ರೀಮಾತೆ ಅದನ್ನು ಹೇಳುವಂತೆ ಕೇಳಿದರು. "ಓ, ಎಂತಹ ಧಾರ್ಮಿಕನುಡಿಗಳಿವು" ಎಂದು ಪದೇಪದೇ ಕೊಂಡಾಡುತ್ತಿದ್ದರು.

ಈ ಕಾಲದಲ್ಲಿ ಶ್ರೀಮಾತೆಯವರೊಂದಿಗೆ ಗೋಪಾಲ್‌ಮಾ, ಯೋಗಿನ್‌ಮಾ, ಗುಲಾಬ್‌ಮಾ ಮತ್ತು ಲಕ್ಷ್ಮೀದೀದಿ ಮತ್ತು ಇತರರು ಇದ್ದರು. ಇವರೆಲ್ಲ ವಿಧವೆಯರು. ಇವರಲ್ಲಿ ಗೋಪಾಲಮಾ ಮತ್ತು ಲಕ್ಷ್ಮೀದೀದಿ ಎಂಬುವರು ಬಾಲವಿಧವೆಯರು. ಇವರೆಲ್ಲ ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿ ಇದ್ದ ಕಾಲದಿಂದಲೂ ಅವರ ಶಿಷ್ಯರಾಗಿದ್ದರು. ಲಕ್ಷ್ಮೀದೀದಿ ಎಂಬುವರು ಶ್ರೀರಾಮಕೃಷ್ಣರ ಸೋದರ ಮಗಳು. ಈಗಲೂ ಆಕೆಗೆ ವಯಸ್ಸೇನೂ ಅಷ್ಟು ಆಗಿಲ್ಲ. ಈಗಲೂ ಕೂಡ ಉಪನ್ಯಾಸ ಭಜನೆ ಮುಂತಾದುವುಗಳಿಗೆ ಆಕೆಯನ್ನು ಅನೇಕರು ಕರೆಯುತ್ತಾರೆ. ಈಕೆ ಸ್ನೇಹ ಪರಳು. ಬೇಕಾದಷ್ಟು ವಿಷಯಗಳು ಗೊತ್ತಿವೆ. ಕೆಲವುವೇಳೆ ಇವರು ಪುಟಗಟ್ಟಲೆ ಯಾವುದಾದರೂ ಪೌರಾಣಿಕ ನಾಟಕಗಳಿಂದ ಸಂಭಾಷಣೆ ಯನ್ನು ಹೇಳುವರು. ಮತ್ತೆ ಕೆಲವುವೇಳೆ ಭಾಗವತವೊ ಅಥವಾ ಮತ್ತಾವು ದಾದರೂ ದೃಶ್ಯವನ್ನೊ ಅಭಿನಯಿಸುವಾಗ, ನೆರೆದವರಿಗೆ ಒಬ್ಬೊಬ್ಬರಿಗೆ ಒಂದೊಂದು ಪಾತ್ರವನ್ನು ಕೊಟ್ಟು ನಗುವಿನಲಹರಿಯಲ್ಲಿ ಮುಳುಗಿಸುವರು. ಅತ್ಯಲ್ಪ ನಾಟಕ ಸಲಕರಣೆಗಳ ಸಹಾಯದಿಂದ ಕಾಳಿ, ಸರಸ್ವತಿ, ಜಗದ್ಧಾತ್ರಿ, ಕದಂಬ ಮರದ ಕೆಳಗೆ ಇರುವ ಕೃಷ್ಣ ಇವರನ್ನು ಅತಿ ಮನೋಹರವಾಗಿ ಅಭಿನಯಿಸುತ್ತಿದ್ದರು.

ಶ್ರೀರಾಮಕೃಷ್ಣರು ಇಂತಹ ಅಭಿನಯವನ್ನೆಲ್ಲ ಮೆಚ್ಚುತ್ತಿದ್ದರು ಎಂದು ಕೇಳಿರುವೆವು. ಕೆಲವುವೇಳೆ ಇವರೇ ಸ್ತ್ರೀಯರ ಕೋರಿಕೆಯಂತೆ ಹಲವು ಗಂಟೆಗಳ ಕಾಲ ಯಾವುದಾದರೂ ಭಕ್ತಿಯ ದೃಶ್ಯಗಳನ್ನು ಅಭಿನಯಿ ಸುತ್ತಿದ್ದರು. ಒಂದೊಂದು ಸಲ ಒಂದೊಂದು ಪಾತ್ರವನ್ನು ತೋರಿ ಆಯಾ

ಪಾತ್ರಗಳು ಹೇಳುವ ಹಾಡು ಮುಂತಾದುವುಗಳಲ್ಲಿ ಹುದುಗಿರುವ ಭಾವ ಎಲ್ಲರ ಮನಮುಟ್ಟುವಂತೆ ಮಾಡುತ್ತಿದ್ದರು.

ಗೋಪಾಲಮಾ ಈಗ ಮುದುಕಿಯಾಗಿದ್ದಳು. ಹದಿನೈದು ಇಪ್ಪತ್ತು ವರುಷಗಳ ಹಿಂದೆಯೆ ಅವರಿಗೆ ವಯಸ್ಸಾಗಿತ್ತು. ಆಗ ಒಂದು ದಿನ ಮಧ್ಯಾಹ್ನ ತಾವು ವಾಸಮಾಡುತ್ತಿದ್ದ ಕಮಾರಹಾಟಿಯಿಂದ ಗಂಗಾತೀರ ದಲ್ಲಿರುವ ದಕ್ಷಿಣೇಶ್ವರಕ್ಕೆ ಶ್ರೀರಾಮಕೃಷ್ಣರನ್ನು ನೋಡಲು ಹೊರಟರು. ಶ್ರೀರಾಮಕೃಷ್ಣರು ತಮ್ಮ ಬಾಗಿಲ ಬಳಿ ನಿಂತುಕೊಂಡು ಇವರನ್ನು ನಿರೀಕ್ಷಿ ಸುತ್ತಿದ್ದರಂತೆ ಎನ್ನುವರು. ಅನಂತರ ಅವರನ್ನು ಸ್ವಾಗತಿಸಿದರು. ಹಲವು ವರುಷಗಳಿಂದ ಗೋಪಾಲ ಅವರ ಇಷ್ಟದೇವತೆಯಾಗಿದ್ದ. ಪರಮಹಂಸರ ಸಮೀಪಕ್ಕೆ ಬಂದಾಗ ಅವರಿಗೆ ಗೋಪಾಲ ಪರಮಹಂಸರಲ್ಲಿ ಕಂಡಂತೆ ಆಯಿತು. ಅವರು ಅಂದಿನಿಂದ ಈ ಅನುಭವದಂತೆ ನಡೆದುಕೊಳ್ಳುತ್ತಿದ್ದರು. ಶ್ರೀರಾಮಕೃಷ್ಣರು ಕೂಡ ಗೋಪಾಲಮಾ ಅವರನ್ನು ತಮ್ಮ ತಾಯಿಯಂತೆ ಭಾವಿಸತೊಡಗಿದರು. ಅವರಿಗೆ ಒಮ್ಮೆಯೂ ಗೋಪಾಲಮಾ ನಮಸ್ಕರಿ ಸುತ್ತಿರಲಿಲ್ಲ. ನಮ್ಮ ಶ್ರೀಮಾತೆಯನ್ನು ತಮ್ಮ ಸೊಸೆ ಅಲ್ಲದೆ ಬೇರೆ ರೀತಿ ಯಲ್ಲಿ ನೋಡುತ್ತಿರಲಿಲ್ಲ.

ನಾನು ಕಲ್ಕತ್ತೆಯಲ್ಲಿ ಶ್ರೀಮಾತೆ ಮತ್ತು ಅವರ ಪರಿವಾರದೊಡನೆ ಹಲವು ತಿಂಗಳು ಕಳೆದೆನು. ಆ ಸಮಯದಲ್ಲಿ ಗೋಪಾಲಮಾ ಕೆಲವು ವೇಳೆ ಕಲ್ಕತ್ತೆಯಲ್ಲಿಯೂ ಮತ್ತೆ ಕೆಲವು ವೇಳೆ ಹಲವುವಾರಗಳು ಕಮಾರ ಹಾಟಿಯಲ್ಲಿಯೂ ಇರುತ್ತಿದ್ದರು. ನಮ್ಮಲ್ಲಿ ಕೆಲವರು ಅವರ ಸ್ಥಳವನ್ನು ನೋಡಲು ಒಂದು ಹುಣ್ಣಿಮೆ ಹೋದೆವು. ದೋಣಿ ಮುಂದೆ ಸಾಗುತ್ತಿದ್ದಂತೆ ಗಂಗಾನದಿ ಎಷ್ಟು ಸುಂದರವಾಗಿ ಕಾಣುತ್ತಿತ್ತು! ತೀರದಿಂದ ಪ್ರಾರಂಭ ವಾಗುವ ಆ ಉದ್ದನೆಯ ಸೋಪಾನಪಂಕ್ತಿಯೂ ಅಷ್ಟೇ ರಮ್ಯ. ಸ್ನಾನದ ದೊಡ್ಡ ಘಾಟಿನಮೂಲಕ ಹೋಗಿ ಪಕ್ಕದ ಹಸರುಗಾವಲನ್ನು ದಾಟಿದರೆ ಮಠದಂತೆ ಇರುವ ವರಾಂಡ ಸಿಕ್ಕುವುದು. ಅದರ ಬಲಗಡೆಯಲ್ಲಿ ಸಣ್ಣ ಕೋಣೆ ಇರುವುದು. ಬಹುಶಃ ಹಿಂದೆ ಅದನ್ನು ಹತ್ತಿರ ಇದ್ದ ದೊಡ್ಡ ಮನೆಯ ಸೇವಕರಿಗಾಗಿ ಕಟ್ಟಿದ್ದರು ಎಂದು ತೋರುವುದು. ಇಲ್ಲಿಯೇ ಗೋಪಾಲಮಾ ಹಲವು ವರ್ಷಗಳು ವಾಸವಾಗಿದ್ದರು, ಇಲ್ಲಿಯೇ ಜಪಮಾಡುತ್ತಿದ್ದರು. ಈಗ ದೊಡ್ಡ ಮನೆ ಖಾಲಿಯಾಗಿತ್ತು. ಅವರ ಸಣ್ಣ ಕೋಣೆಯಲ್ಲಂತೂ ಏನೂ ಇರಲಿಲ್ಲ. ಅವರು ಮಲಗುತ್ತಿದ್ದುದು ಕಲ್ಲಿನಮೇಲೆ, ನೆಲವೂ ಕಲ್ಲೆ.

ಬಂದವರು ಕುಳಿತುಕೊಳ್ಳುವುದಕ್ಕೆ ಕೊಟ್ಟ ಚಾಪೆಯನ್ನು ಹತ್ತಿರದ ಗೂಡಿನಿಂದ ತೆಗೆಯಬೇಕಾಯಿತು. ಅವರ ಹತ್ತಿರ ಇದ್ದದ್ದು ಸ್ವಲ್ಪ ಪುರಿ ಮತ್ತು ಬತ್ತಾಸು. ಅದನ್ನು ಒಂದು ಮೂಲೆಯ ನೆಲವಿನಿಂದ ತೆಗೆದು ಬಂದವರಿಗೆ ಕೊಟ್ಟು ಉಪಚರಿಸಿದರು. ಆದರೆ ಕೋಣೆಯಾದರೊ ಅತಿ ಶುಭ್ರವಾಗಿತ್ತು. ತಾನೆ ಹೊತ್ತುತಂದ ನೀರಿನಿಂದ ಕೋಣೆಯನ್ನು ದಿನಕ್ಕೆ ಹಲವು ಬಾರಿ ಸಾರಿಸುತ್ತಿದ್ದರು. ಹತ್ತಿರದಲ್ಲಿದ್ದ ಗೂಡಿನಲ್ಲಿ ಅವರು ಓದುತ್ತಿದ್ದ ರಾಮಾಯಣ ಮತ್ತು ಕನ್ನಡಕಗಳು ಇದ್ದವು. ಪಕ್ಕದಲ್ಲಿ ಜಪಸರವಿದ್ದ ಒಂದು ಸಣ್ಣ ಚೀಲವಿತ್ತು. ಆ ಜಪಮಾಲೆಯಲ್ಲಿ ಜಪ ಮಾಡಿಮಾಡಿಯೆ ಆಕೆ ಮಹಾತ್ಮಳಾಗಿದ್ದಳು! ಗಂಟೆಗಳ ಮೇಲೆ ಗಂಟೆಗಳು, ದಿನಗಳಾದ ಮೇಲೆ ದಿನಗಳು, ಹೀಗೆ ಎಷ್ಟು ವರುಷಗಳು ಹಗಲು ರಾತ್ರಿ ಜಪಮಾಡುವುದರಲ್ಲೆ ತನ್ಮಯರಾಗಿದ್ದರೊ! ಹೊಳೆಯುತ್ತಿರುವ ಆ ಚಂದ್ರಮನಕಾಂತಿ ಹೊರಗಿರುವ ಮರ ಮತ್ತು ಹೂವಿನ ಗಿಡಗಳನ್ನು ಛಾಯೆಯಂತೆ ಮಾಡಿದ್ದವು. ಅಮೃತಶಿಲೆಯಂತಹ ಕನಸಿನ ಲೋಕದಲ್ಲಿ ಅವು ಒಯ್ಯೊಯ್ಯನೆ ಚಲಿಸುತ್ತ ಪಿಸುಮಾತನಾಡುವಂತೆ ಇದ್ದವು. ಆದರೆ ಈ ಜಂಜಡದ ಜಗತ್ತಿನಲ್ಲಿ ಗೋಪಾಲಮಾರ ಪ್ರಶಾಂತಿ ಮಂದಿರದ ಕೋಣೆಯಷ್ಟು ಸ್ವಪ್ನ ಸದೃಶವಾದುದು ಮತ್ತೊಂದು ಇಲ್ಲ ಎನ್ನಬಹುದು. ಸ್ವಾಮಿಜಿ ನಾವು ಗೋಪಾಲಮಾರನ್ನು ನೋಡಲು ಹೋಗಿದ್ದೆವು ಎಂಬುದನ್ನು ಕೇಳಿದಾಗ, "ಓ, ನೀವು ನೋಡಿದ್ದು ಪುರಾತನ ಭರತಖಂಡವನ್ನು. ಪ್ರಾರ್ಥನೆ ಕಂಬನಿ, ಜಾಗರಣೆ, ಉಪವಾಸಗಳ ಪ್ರಪಂಚವನ್ನು. ಅವೆಲ್ಲ ಕಣ್ಮರೆಯಾಗುತ್ತಿವೆ. ಪುನಃ ಬರುವಂತೆ ಇಲ್ಲ" ಎಂದರು.

ಕಲ್ಕತ್ತೆಯಲ್ಲಿ ಅವರು ಇದ್ದಾಗ ಎಲ್ಲರಿಗಿಂತ ಹೆಚ್ಚಾಗಿ ಅವರಿಗೆ ಮನೆಯಲ್ಲಿ ಒಬ್ಬ ಪಾಶ್ಚಾತ್ಯ ಮಹಿಳೆ ಇದ್ದುದರಿಂದ ಮನಸ್ಸಿಗೆ ಧಕ್ಕೆ ಬಂದಿದ್ದಿರಬಹುದು. ಎಂಭತ್ತು ವರುಷಗಳಿಂದ ಬಂದ ಅಭ್ಯಾಸಕ್ಕೆ ತಕ್ಷಣ ಯಾವುದೋ ಅಡಚಣೆಯಾಯಿತು. ಆದರೆ ಒಮ್ಮೆ ಅವರು ಇದರಿಂದ ಪಾರಾದ ಮೇಲೆ ಔದಾರ್ಯವೇ ರೂಪುವೆತ್ತಂತೆ ಇದ್ದರು. ಯಾವಾಗಲೂ ಅವರು ಪೂರ್ವಾಚಾರಪರಾಯಣರೇನೊ ನಿಜ. ಆದರೆ ಎಂದಿಗೂ ಪೂರ್ವಕಲ್ಪಿತ ಅಭಿಪ್ರಾಯದವರಲ್ಲ. ದಿನಚರ್ಯೆಯ ದೃಷ್ಟಿಯಿಂದ ಇವರು ಗಂಗಾತೀರದ ತಮ್ಮ ಕೋಣೆಯಲ್ಲಿದ್ದರೂ ಒಂದೇ, ಅಥವಾ ಶ್ರೀಮಾತೆಯವರ ಮನೆಯಲ್ಲಿದ್ದರೂ ಒಂದೇ. ಸ್ವಲ್ಪವೂ ವ್ಯತ್ಯಾಸವಾಗುತ್ತಿರಲಿಲ್ಲ. ದಿನವೆಲ್ಲ ಶಾಂತಿ

ಮಾಧುರ್ಯದಿಂದ ಕೂಡಿತ್ತು. ಹೊತ್ತಿಗೆ ಮುಂಚೆ ಎಲ್ಲರೂ ಏಳುತ್ತಿದ್ದರು. ಮಲಗಿದ್ದ ಹಾಸಿಗೆ ಹೊದಿಕೆಯನ್ನು ತೆಗೆದಿಟ್ಟಮೇಲೆ ಅದೇ ಚಾಪೆಯ ಮೇಲೆ ಗೋಡೆಯ ಕಡೆ ತಿರುಗಿ ಜಪಕ್ಕೆ ಕುಳಿತುಕೊಳ್ಳುತ್ತಿದ್ದರು. ಅನಂತರ ಮನೆಯನ್ನು ಸಾರಿಸುವುದು ಗುಡಿಸುವುದು ಮತ್ತು ಸ್ನಾನ. ಎಂದಾದರೂ ಪುಣ್ಯದಿನಗಳಲ್ಲಿ ಶ್ರೀಮಾತೆ ಮತ್ತು ಇನ್ನು ಯಾರಾದರೂ ಒಬ್ಬರನ್ನು ಪಲ್ಲಕ್ಕಿಯಲ್ಲಿ ಗಂಗಾಸ್ನಾನಕ್ಕೆ ಕರೆದೊಯ್ಯುತ್ತಿದ್ದರು. ಅವರು ಬರುವ ವರೆಗೆ ರಾಮಾಯಣ ಪಾರಾಯಣಮಾಡುತ್ತಿದ್ದರು.

ಅನಂತರ ಶ್ರೀಮಾತೆಯವರು ತಮ್ಮ ಕೋಣೆಯಲ್ಲಿ ಪೂಜೆಗೆ ಪ್ರಾರಂಭಿಸುತ್ತಿದ್ದರು. ಇತರ ಕಿರಿಯರೆಲ್ಲ ಧೂಪ ದೀಪ ನೈವೇದ್ಯ ಹೂವು ಗಂಗಾ ನೀರು ಇವುಗಳನ್ನು ಅಣಿಮಾಡುವುದರಲ್ಲಿ ನಿರತರಾಗುತ್ತಿದ್ದರು. ಇಂತಹ ಸಮಯದಲ್ಲಿ ಹಣ್ಣುತರಕಾರಿಗಳನ್ನು ಅಣಿಮಾಡಲು ಗೋಪಾಲಮಾ ಸಹಾಯಕ್ಕೆ ಬರುತ್ತಿದ್ದರು. ಮಧ್ಯಾಹ್ನದ ಊಟ, ಅನಂತರ ವಿಶ್ರಾಂತಿ. ಸಂಜೆ ಆಳು ದೀಪವನ್ನು ಹಚ್ಚುತ್ತಾ ಹೋಗುವಾಗ ನಮ್ಮ ಮಾತು ನಿಲ್ಲುತ್ತಿತ್ತು. ನಾವೆಲ್ಲ ಚದರುತ್ತಿದ್ದೆವು. ಪ್ರತಿಯೊಬ್ಬರೂ ವಿಗ್ರಹ ಅಥವಾ ಚಿತ್ರಪಟಗಳಿಗೆ ನಮಸ್ಕರಿಸಿ ಗೋಪಾಲಮಾ ಮತ್ತು ಶ್ರೀಮಾತೆಯವರ ಪಾದಗಳಿಗೆ ಎರಗುತ್ತಿದ್ದೆವು. ದೀಪವಿಟ್ಟ ತುಳಸಿಕಟ್ಟೆ ಹತ್ತಿರ ಶ್ರೀಮಾತೆಯವರೊಡನೆ ಕೆಲವರು ಕುಳಿತುಕೊಳ್ಳುತ್ತಿದ್ದರು. ಸಂಧ್ಯೆಯ ಧ್ಯಾನ ಸಮಯದಲ್ಲಿ ಮಗಳಂತೆ ಹೋಗಿ ಶ್ರೀಮಾತೆಯವರ ಸಮೀಪದಲ್ಲಿ ಕುಳಿತುಕೊಳ್ಳುವುದಕ್ಕೆ ಅವಕಾಶ ಸಿಕ್ಕಿದವರು ಧನ್ಯರು. ಅಲ್ಲಿ ಗುರು ನಮಸ್ಕಾರವೇ ಸರ್ವಪೂಜೆಗಳ ಆದಿ ಮತ್ತು ಅಂತ್ಯ ಎಂಬುದನ್ನು ಅವರಿಂದ ಅರಿಯುವರು.

ಹಿಂದಿನಿಂದ ಬಂದ ಆಚಾರಗಳೆಂಬ ಮಧುರ ಕವನವನ್ನು ಸದಾ ಹಾಡುತ್ತಿರುವಂತೆ ಇದೆ ಭಾರತೀಯರ ಗೃಹ. ಮನೆಗೆ ಸಂಬಂಧಪಟ್ಟ ಪ್ರತಿಯೊಂದು ಕೆಲಸವೂ ಮತ್ತು ವ್ಯಕ್ತಿಯ ಅಭ್ಯಾಸವೂ ನಾವು ಬಾಹ್ಯದಲ್ಲಿ ವ್ಯಕ್ತಗೊಳಿಸಲಾಗದಷ್ಟು ಅಮೂಲ್ಯವಾಗಿದೆ, ಪ್ರಶಸ್ಥವಾಗಿದೆ. ಇದೊಂದು ನಮ್ಮ ದೇಶದ ಸನಾತನ ಆಸ್ತಿ. ಹಿಂದಿನಿಂದ ಬಂದಿದೆ. ಅದನ್ನು ಕುಗ್ಗದಂತೆ ನೋಡಿ ಮುಂದಿನ ಪೀಳಿಗೆಯವರಿಗೆ ನಾವು ಕೊಡಬೇಕಾಗಿದೆ. ಇದರೊಡನೆ ಪವಿತ್ರ ಆದರ್ಶದ ಉತ್ಕಟ ಅನ್ವೇಷಣೆ ಹಾಸುಹೊಕ್ಕಾಗಿ ಹೋಗಿದೆ. ಮಾತೃ ಆರಾಧನೆ ಹಿಂದೂ ಶೀಲವನ್ನೆಲ್ಲಾ ರಕ್ಷಿಸುತ್ತಿರುವುದು, ಅದೇ

ಗುರಿಯೆಡೆಗೆ ಒಯ್ಯುತ್ತಿರುವುದು. ಪೌರಾತ್ಯರು ಸರಳತೆಯ ಉಪಾಸಕರು, ಆದಕಾರಣವೇ ಯಾವ ಪೌರಾತ್ಯನೂ ಅಸಭ್ಯನಾಗಲಾರ.

ಬೇಕಾದ ತಕ್ಷಣ ಇದರ ರಹಸ್ಯವನ್ನು ತಕ್ಷಣ ಯಾರೂ ತೋರುವುದಕ್ಕೆ ಆಗುವುದಿಲ್ಲ. ಏಕೆಂದರೆ ಯಾರೂ ತಮ್ಮ ಮನಸ್ಸನ್ನು ಮೀರಿಹೋಗಿ ಇತರರಿಗೆ ಬೇರೆ ಸಂಸ್ಕಾರಗಳಿವೆ, ಅವರಿಗೇ ಬೇರೆ ಆದರ್ಶಗಳಿವೆ, ಎಂದು ನೋಡುವ ಸ್ಥಿತಿಯಲ್ಲಿ ಇಲ್ಲ. ಅದೃಷ್ಟವಶಾತ್ ಸ್ವಾಮಿಜಿ ಅವರನ್ನು ನೋಡುತ್ತಿದ್ದಾಗ, ಅವರ ಶೀಲದ ವೈವಿಧ್ಯತೆಯನ್ನು ಗಮನಿಸುತ್ತಿದ್ದಾಗ, ಅವರ ಆದರ್ಶದ ರಹಸ್ಯ ನನಗೆ ಹೊಳೆಯಿತು. ಅನಂತರ ಹಲವು ವಿಷಯಗಳು ಸುಲಭವಾದುವು. ಶೀಲವೇ ಸರ್ವಸ್ವ, ಆಚಾರದಲ್ಲಿ ಏನೂ ಇಲ್ಲ ಎಂಬುದು ಸ್ವಾಮಿಜಿಗೆ ಎಲ್ಲರಿಗಿಂತಲೂ ಚೆನ್ನಾಗಿ ತಿಳಿದಿತ್ತು. ಆದರೂ ತಮಗೆ ಕಾಣುವ ಹಿಂದಿನಿಂದ ಬಂದ ಆಚಾರಗಳಲ್ಲಿ ಸುಪ್ತವಾಗಿರುವ ಆದರ್ಶಕ್ಕೆ ಇವರಷ್ಟು ಮಾರುಹೋದವರಿಲ್ಲ. ತಮ್ಮ ಜನರ ಆಚಾರವ್ಯವಹಾರವನ್ನು ಪರಿಶೀಲಿಸುವಾಗ ಕವಿಯ ದೃಷ್ಟಿ ಮತ್ತು ದ್ರಷ್ಟಾರನ ಕಲ್ಪನೆಯನ್ನು ತರುತ್ತಿದ್ದರು. ಹಲವು ಪತಿಗಳನ್ನು ಮದುವೆಯಾಗುವ ಸ್ತ್ರೀಯರಲ್ಲಿ ಪಾತಿವ್ರತ್ಯ ಮತ್ತು ಆದರ್ಶ ಸತೀತ್ವಗಳನ್ನು ನೋಡಿದ್ದರು. ಪಾಶ್ಚಾತ್ಯರ ಸಂಜೆಯ ಉಡುಪಿನಲ್ಲಿರುವ ನಯ ಮತ್ತು ಗಾಂಭೀರ್ಯವನ್ನು ಅರಿತಿದ್ದರು. ಆದಕಾರಣ ಬರೀ ಬಾಹ್ಯ ಆಚಾರಕ್ಕೆ ಅವರು ಅಷ್ಟೊಂದು ಪ್ರಾಶಸ್ತ್ಯ ಕೊಡುತ್ತಿರಲಿಲ್ಲ. ಆದರೂ ತಮ್ಮ ದೇಶದ ಲೋಕಾಚಾರಗಳ ಮೇಲಿರುವ ಗೌರವ ಅವರಿಗೆ ಕಡಿಮೆಯಾಗಿರಲಿಲ್ಲ. ವಿಧವೆ ಉಡುವ ಶ್ವೇತವಸನ ಅವಳ ಪವಿತ್ರತೆಗೆ ಚಿಹ್ನೆ, ಅವಳುಪಡುವ ವ್ಯಸನಕ್ಕೆ ಚಿಹ್ನೆ. ಸನ್ಯಾಸಿನಿಯ ಗೈರಿಕವಸನ, ಮಲಗಲು ಉಪಯೋಗಿಸುವ ಚಾಪೆ, ತಟ್ಟೆಯ ಬದಲು ಬಾಳೆಯ ಎಲೆ ಕೈಯಲ್ಲಿ ಊಟಮಾಡುವುದು, ಅವರ ದೇಶದ ಉಡಿಗೆ ತೊಡಿಗೆ ತೊಡುವುದು ಇವುಗಳೆಲ್ಲ ಅವರಿಗೆ ಪರಮಪವಿತ್ರ ಎಂಬ ಭಾವ ಬಂದುಹೋಗಿತ್ತು. ಪ್ರತಿಯೊಂದೂ ಯಾವುದೋ ಆಧ್ಯಾತ್ಮಿಕ ಆದರ್ಶವನ್ನೊ ಅಥವಾ ಮಾನವೀಯ ಭಾವನೆಯನ್ನೊ ಅವರಿಗೆ ಉಸುರುತ್ತಿತ್ತು. ಇವುಗಳಿಂದಲೇ ಪ್ರಪಂಚವನ್ನು ಗೆಲ್ಲಬಹುದೇನೊ, ಇವುಗಳಿಲ್ಲದೇ ಇದ್ದರೆ ಸರ್ವನಾಶವಾದಂತೆ ಎಂಬುವಂತೆ ಉದ್ವೇಗದಿಂದ ಮಾತನಾಡುತ್ತಿದ್ದರು.

ಸ್ವಾಮಿಜಿ ನನಗೂ ಕೂಡ ಇದನ್ನು ಸಾಧ್ಯವಾದಷ್ಟು ಅಭ್ಯಾಸ ಮಾಡುವಂತೆ ಹೇಳಿದರು. ಇದು ಚೆನ್ನಾಗಿ ನನಗೆ ಸಾಧ್ಯವಿಲ್ಲದೇ ಹೋದರೂ

ಇವರ ಮೂಲಕ ಇಡೀ ಜನಾಂಗದ ಆದರ್ಶ ಮತ್ತು ಅವರ ಹೃದಯ ಎಲ್ಲಿ ಇದೆ ಎಂಬುದು ವ್ಯಕ್ತವಾಯಿತು.

೧೮೯೮ ನೇ ನವೆಂಬರ್‌ನಿಂದ ೧೮೯೯ ನೇ ಜೂನ್ ತಿಂಗಳವರೆಗೆ ಹಲವು ಸಂತೋಷದ ಸವಿನೆನಪುಗಳಿವೆ. ನನ್ನ ಚಿಕ್ಕ ಶಾಲೆ ಕಾಳಿಯ ಪೂಜೆಯ ದಿನ ಪ್ರಾರಂಭವಾಯಿತು. ಶ್ರೀಮಾತೆಯವರೇ ಬಂದು ಪ್ರವೇಶೋತ್ಸವದ ಪೂಜೆಯನ್ನು ನೆರವೇರಿಸಿದರು. ಕೊನೆಯಲ್ಲಿ ಗುಲಾಬ್‌ಮೂ ಮೂಲಕ ಆಶೀರ್ವಾದವನ್ನು ಸೂಚಿಸಿದರು. ಜಗನ್ಮಾತೆಯ ಆಶೀರ್ವಾದ ಈ ಶಾಲೆಯ ಮೇಲಿರಲಿ, ಶಾಲೆಯಿಂದ ಹೋಗುವ ಮಕ್ಕಳು ಆದರ್ಶ ಬಾಲಿಕೆಯರಾಗಲಿ ಎಂದು ಪ್ರಾರ್ಥಿಸಿದರು. ಶ್ರೀಮಾತೆಯವರು ಈ ಉದ್ಯಮಕ್ಕೆ ಹೃತ್ಪೂರ್ವಕ ಪ್ರಾರ್ಥನೆ ಮಾಡಿರುವರು, ಇದನ್ನು ಅವರು ನೆನಪಿನಲ್ಲಿಟ್ಟಿರುವರು ಎಂಬುದನ್ನು ನೆನೆದರೇ ಅದೊಂದು ಮಹಾ ಆಶೀರ್ವಾದವೆಂದು ಭಾವಿಸಿ ಧನ್ಯಳಾಗುತ್ತೇನೆ. ಭರತಖಂಡದ ಭವಿಷ್ಯ ವಿದ್ಯಾಸಂಪನ್ನೆಯರು ಮಹಾ ಆದರ್ಶವನ್ನು ಅನುಸರಿಸುವರು ಎಂಬುದಕ್ಕೆ ಅವರು ನೀಡಿದ ಆಶೀರ್ವಾದಕ್ಕಿಂತ ಮಿಗಿಲಾದ ಶುಭ ಶಕುನವಿಲ್ಲ.

ಸ್ವಾಮಿಜಿ ಸಾಧಾರಣವಾಗಿ ಕಲ್ಕತ್ತೆಗೆ ಐದಾರು ಮೈಲಿ ದೂರದಲ್ಲಿ ಗಂಗಾನದಿಯ ಅತ್ತಕಡೆಯ ದಡದಲ್ಲಿ ಇದ್ದರು. ಅವರು ಕಲ್ಕತ್ತೆಗೆ ಮಧ್ಯೆ ಮಧ್ಯೆ ಬಂದಾಗಲೆಲ್ಲ ನನ್ನನ್ನು ಬರಮಾಡಿಕೊಳ್ಳುತ್ತಿದ್ದರು. ಮಧ್ಯಾಹ್ನ ಅಥವಾ ಸಂಜೆಯ ಊಟಕ್ಕೆ ಅವರೊಡನೆ ಇರುತ್ತಿದ್ದೆನು. ಯಾರು ನನಗೆ ವಿಶ್ವಾಸ ತೋರಿದ್ದರೊ ಅವರು ಬೇಲೂರು ಮಠಕ್ಕೆ ಬಂದಾಗ ವಿಶೇಷವಾಗಿ ಅವರನ್ನು ಸತ್ಕರಿಸುತ್ತಿದ್ದರು.

ಸ್ವಾಮಿಜಿ ಮಾಡುವ ಒಂದು ಸಣ್ಣ ಕೆಲಸ ಕೂಡ ಅರ್ಥಗರ್ಭಿತವಾಗಿರುತ್ತಿತ್ತು. ಇದು ಹೊಸಬರಿಗೆ ಅರಿವಾಗುತ್ತಿರಲಿಲ್ಲ. ಒಂದು ದಿನ ಸ್ವಾಮಿಜಿ ರೋಗಿಗಳಿಗೆ ಬೇಕಾಗುವ ಒಂದು ಅಡುಗೆಯನ್ನು ಮಾಡೆಂದರು. ಅವರು ಹೀಗೆ ಹೇಳಿದ್ದುದರಲ್ಲಿ ಏನೊ ವಿಶೇಷವಿರಬೇಕೆಂದು ಆಗ ನಾನು ಸ್ವಲ್ಪವೂ ಆಲೋಚಿಸಲಿಲ್ಲ. ಅದನ್ನು ಮಾಡಿ ಕಳುಹಿಸಿದ ಮೇಲೆ ತಾವು ಎಲ್ಲೊ ಸ್ವಲ್ಪವನ್ನು ತೆಗೆದುಕೊಂಡು ಉಳಿದುದನ್ನೆಲ್ಲಾ ಇತರರಿಗೆ ಹಂಚಿದರು ಎಂದು ಕೇಳಿದಾಗ ನನಗೆ ನಿರಾಶೆಯಾಯಿತು. ಅವರು ಹೀಗೆ ಮಾಡಿದಾಗ ಅದರ ಹಿಂದೆ ಒಂದು ಪವಿತ್ರ ಉದ್ದೇಶವಿದೆ ಎಂದು ನನಗೆ ಆಗ ಗೊತ್ತಾಗಲಿಲ್ಲ. ಹಿಂದೂ ಸಮಾಜದಲ್ಲಿ ನನಗೊಂದು ಸ್ಥಾನವನ್ನು ಕಲ್ಪಿಸಿ

ಕೊಡಲು ಸ್ವಾಮಿಜಿಯವರು ಮತ್ತು ಅವರ ಕೋರಿಕೆಯ ಮೇಲೆ ಶ್ರೀಮಾತೆ ಯವರು ಎಷ್ಟು ಪ್ರಯತ್ನಪಡುತ್ತಿದ್ದರು ಎಂಬುದು ನನಗೆ ಅನಂತರ ಗೊತ್ತಾಯಿತು. ಕಾಶ್ಮೀರದಲ್ಲಿ ಸ್ವಾಮಿಜಿ ನನಗೆ ಹೇಳಿದಂತೆ ಅವರ ಉದ್ದೇಶವೆಲ್ಲ ಹಿಂದೂ ಧರ್ಮ, ಕ್ರೈಸ್ತ ಇಸ್ಲಾಂ ಧರ್ಮಗಳಂತೆ ವಿಸ್ತಾರ ವಾಗುವಂತೆ ಮಾಡಬೇಕೆಂಬುದು. ತಮ್ಮ ಆದರ್ಶವನ್ನು ಅನುಷ್ಠಾನಕ್ಕೆ ತರಲು ಮಾಡುತ್ತಿದ್ದ ಒಂದು ಪ್ರಯತ್ನ ಇದು.

ಶ್ರೀರಾಮಕೃಷ್ಣ ಸಂಘದ ಉದ್ದೇಶವನ್ನು ವಿವರಿಸುವಾಗಲೂ ಅವರು ಇದೇ ಉದ್ದೇಶವನ್ನೇ ಇಟ್ಟುಕೊಂಡಿದ್ದರು. "ಪೌರ ಮತ್ತು ಪಾಶ್ಚಾತ್ಯ ದೇಶಗಳಲ್ಲಿ ಇರುವ ಶ್ರೇಷ್ಠತಮ ಭಾವನೆಗಳನ್ನು ಒಬ್ಬರು ಮತ್ತೊಬ್ಬರಿಗೆ ಕೊಟ್ಟು ತೆಗೆದುಕೊಳ್ಳಬೇಕು. ಈ ಆದರ್ಶಗಳನ್ನು ಅನುಷ್ಠಾನಕ್ಕೆ ತರ ಬೇಕು. ಭರತಖಂಡದಲ್ಲಿ ಈ ಆದರ್ಶದ ಕಾಲೌಚಿತ್ಯ ಮತ್ತು ಪರಿಪೂರ್ಣತೆ ದಿನ ಕಳೆದಂತೆ ದೃಢವಾಗುತ್ತಾ ಬರುವುದು. ಅವರ ದೃಷ್ಟಿಗೆ ಹಿಂದೂ ಧರ್ಮ ತಾಟಸ್ಥ್ಯವಾಗಿ ನಿಂತ ಒಂದು ಸಿದ್ಧಾಂತವಲ್ಲ; ಆಧುನಿಕ ಪ್ರಗತಿ ಯನ್ನೆಲ್ಲಾ ತೆರೆದ ಬಾಹುಗಳಿಂದ ಸ್ವಾಗತಿಸಲು ಸಿದ್ಧವಾಗಿತ್ತು. ಹಿಂದೂ ಧರ್ಮ ಹಲವು ಪಂಗಡಗಳ ಒಂದು ಮಿಶ್ರವಲ್ಲ, ಒಂದು ಅಖಂಡವಾದ ಸರ್ವಗ್ರಾಹಿಯಾದ ಸಜೀವವಾದ ಧರ್ಮ. ಹಿಂದೆ ತನ್ನಿಂದ ಜನಿಸಿದ ಜಾತಿಮತ ಪಂಥಗಳನ್ನೆಲ್ಲಾ ಒಪ್ಪಿಕೊಳ್ಳುತ್ತ ಹೊಸದಕ್ಕೆ ಅಂಜದೆ, ತನ್ನ ಮಕ್ಕಳು ಎಲ್ಲಿಯಾದರೂ ಇರಲಿ ಅವರ ವಿಶ್ವಾಸದ ಚಿಂತನೆಯಲ್ಲಿ ಉದ್ಯುಕ್ತ ಳಾಗಿರುವಳು. ಯಾವಾಗಲೂ ಪ್ರಾಜ್ಞಳಾಗಿ ದಯಾಮಯಳಾಗಿ ಸ್ವತಂತ್ರ ಳಾಗಿ ಅರಿಯದೆ ಮಾಡಿದ ದೋಷಗಳನ್ನು ಮನ್ನಿಸುತ್ತ ಭಿನ್ನ ಭಿನ್ನ ಮತ ಗಳೊಡನೆ ಸಂಧಾನ ನಡೆಸುತ್ತಿರುವಳು. ಎಲ್ಲಕ್ಕಿಂತ ಹೆಚ್ಚಾಗಿ ಎಲ್ಲರೆದುರಿಗೆ ಒಂದು ಸ್ಪಷ್ಟವಾದ ಆದರ್ಶವನ್ನು ಎತ್ತಿಹಿಡಿದಿರುವಳು; ಇತರ ದೇಶಗಳಿಗೆ ಒಂದು ನಿರ್ದಿಷ್ಟ ಸಂದೇಶವನ್ನು ನೀಡುತ್ತಿರುವಳು. ಇದನ್ನು ಸಮರ್ಥಿಸು ವುದಕ್ಕೆ ಅವರಿಗೆ ಮತ್ತಾವ ಶಕ್ತಿಯೂ ಬೇಕಾಗಿರಲಿಲ್ಲ. ಚಾರಿತ್ರಶಕ್ತಿ ಯೊಂದೇ ಸಾಕಾಗಿತ್ತು. ತಮ್ಮ ಆದರ್ಶದ ದೇಗುಲವನ್ನು ನಿರ್ಮಿಸುವುದು ಎಲ್ಲಕ್ಕಿಂತಲೂ ಪ್ರಮುಖವಾಗಿತ್ತು. ಇದು ಸತ್ಯ. ಆದರೆ ಅದನ್ನು ಸಾಧಿಸುವುದಕ್ಕೆ ಬೇಕಾದಷ್ಟು ಕಾಲವಿತ್ತು. ಇಲ್ಲಿ ಜನರ ಸ್ವಭಾವ ಮತ್ತು ಘಟನೆಗಳು ತಮ್ಮ ಪಾಲಿನದನ್ನು ಧಾರೆ ಎರೆದವು. ಸ್ವಾಮಿಜಿ ಜವಾಬ್ದಾರಿ ದೇಗುಲವನ್ನು ಕಟ್ಟುವುದಕ್ಕೆ ಸರಿಯಾದ ಇಟ್ಟಿಗೆಯನ್ನು ಸಂಗ್ರಹಿಸುವು

ದಾಗಿತ್ತು. ಅವರು ಸಂಗ್ರಹಿಸುವಾಗ ಅವರ ಬುದ್ಧಿಶಕ್ತಿ, ಇತರರನ್ನು ಆಕರ್ಷಿಸುವ ಶಕ್ತಿ— ಇವುಗಳಾವುದನ್ನೂ ಗಮನಿಸದೆ ಸರಳ ಸ್ವಭಾವ ಮತ್ತು ಚಾರಿತ್ರಶುದ್ಧಿಯೊಂದನ್ನೇ ಗಮನಿಸುತ್ತಿದ್ದರು. ಒಮ್ಮೆ ಅವರನ್ನು ಸ್ವೀಕರಿಸಿದ ಮೇಲೆ ಎಲ್ಲರಿಗೂ ಒಂದೇ ಆದರ್ಶವನ್ನು ಕೊಡುತ್ತಿದ್ದರು. ಮುಕ್ತಿಯಲ್ಲ ತ್ಯಾಗ, ಆತ್ಮಸಾಕ್ಷಾತ್ಕಾರವಲ್ಲ ಆತ್ಮವಿಸರ್ಜನೆ ಅವರು ನೀಡುತ್ತಿದ್ದ ಆದರ್ಶ. ದೇವರಿಗಾಗಿ ಅರ್ಪಣೆಯಲ್ಲ, ಮಾನವನಿಗೆ ಅರ್ಪಣೆ. ಮಾನವನ ಉದ್ದೇಶಗಳನ್ನು ಗಮನಿಸುವಂತೆ ತಮ್ಮ ಶಿಷ್ಯರಿಗೆ ಹೇಳುತ್ತಿದ್ದರು. ಬೇಲೂರು ಮಠದಲ್ಲಿ ಅವರು ದೀಕ್ಷೆ ಇತ್ತ ಒಂದು ಪವಿತ್ರದಿನವನ್ನು ಎಂದೆಂದಿಗೂ ಮರೆಯುವಂತೆ ಇಲ್ಲ. ಹೊಸ ಜೀವನದ ಅಧ್ಯಾಯದ ಪ್ರಾರಂಭದಲ್ಲಿ ಶಿವಪೂಜೆಯನ್ನು ಹೇಗೆ ಮಾಡಬೇಕೆಂದು ನನಗೆ ಬೋಧಿಸಿದರು. ಕೊನೆಗೆ ಪೂಜೆ ಸಮಾಪ್ತವಾದದ್ದು ಭಗವಾನ್ ಬುದ್ಧನ ಅಡಿದಾವರೆಗಳಲ್ಲಿ ಪುಷ್ಪವನ್ನು ಅರ್ಪಿಸಿ. ತಮ್ಮೆಡೆಗೆ ಬರುವ ಪ್ರತಿಯೊಂದು ಜೀವರನ್ನೂ ಉದ್ದೇಶಿಸುವಂತೆ ಹೇಳಿದರು: "ಯಾರು ಇತರರ ಉದ್ಧಾರಕ್ಕಾಗಿ ನೂರಾರು ಜನ್ಮಗಳನ್ನು ಬಲಿದಾನಮಾಡಿದನೋ ಅವನನ್ನು ಅನುಸರಿಸು. ಅವನು ಬೌದ್ಧತ್ವ ಪಡೆದನು."



೧೧

## ಸ್ವಾಮಿ ವಿವೇಕಾನಂದರು ಮತ್ತು ಶಕ್ತಿಪೂಜೆ

ಸ್ವಾಮಿಜಿಯವರ ಈ ಕಾಲದ ಸ್ಮೃತಿ ಚಿತ್ರಗಳನ್ನು ವಿವರಿಸುವಾಗ ಅವರ ಶಕ್ತಿಪೂಜೆಗೆ ಸಂಬಂಧಪಟ್ಟ ವಿಷಯಗಳನ್ನು ಹೇಳದೇ ಇದ್ದರೆ ಪೂರ್ಣವಾಗುವುದಿಲ್ಲ. ಅವರಲ್ಲಿ ಎರಡು ವಿಧದ ಸ್ವಭಾವಗಳಿತ್ತೆಂದು ನನಗೆ ಯಾವಾಗಲೂ ಎನ್ನಿಸುವುದು. ಶ್ರೀರಾಮಕೃಷ್ಣರು ಅನೇಕವೇಳೆ ಹೇಳುತ್ತಿದ್ದಂತೆ ಅವರು ನಿಸ್ಸಂದೇಹದಾಗಿ ಆಜನ್ಮಬ್ರಹ್ಮಜ್ಞಾನಿಗಳೇನೊ ಹೌದು. ಸ್ವಾಮಿಜಿ ಅವರಿಗೆ ಎಂಟು ವರುಷವಾದಾಗ ಆಟದಲ್ಲಿರುವಾಗಲೇ ಸಮಾಧಿಪಡೆಯುವ ಶಕ್ತಿಯನ್ನು ಪಡೆದಿದ್ದರು. ಆಧ್ಯಾತ್ಮಿಕ ಪ್ರಪಂಚದಲ್ಲಿ ಅವರು ಸ್ವಾಭಾವಿಕವಾಗಿ ವಾಲುತ್ತಿದ್ದುದು ತಾತ್ತ್ವಿಕವಾದ ನಿರಾಕಾರ ವಿಷಯಗಳು. ಯಾವುದನ್ನು ಸಾಧಾರಣವಾಗಿ ವಿಗ್ರಹಾರಾಧನೆ ಎನ್ನುವೆವೊ ಅದಕ್ಕೆ ವಿರೋಧವಾಗಿದೆ ಇದು. ಯೌವನಾವಸ್ಥೆಯಲ್ಲಿ ಶ್ರೀರಾಮಕೃಷ್ಣರ ಪ್ರಭಾವಕ್ಕೆ ಆಗಲೆ ಒಳಗಾಗಿರುವಾಗಲೇ ಸ್ವಾಮಿಜಿ ಸಾಧಾರಣ ಬ್ರಹ್ಮಸಮಾಜಕ್ಕೆ ಸೇರಿದರು. ಇಂಗ್ಲೆಂಡ್ ಮತ್ತು ಅಮೆರಿಕಾದಲ್ಲಿ ಬೋಧಿಸಿದಾಗ ಅದು ಯಾವ ಆಕಾರವನ್ನೂ ಕುರಿತದ್ದೆ ಆಗಿರಲಿಲ್ಲ. ಬ್ರಹ್ಮಸಾಕ್ಷಾತ್ಕಾರ ಒಂದನ್ನೇ ಅವರು ಒತ್ತಿ ಹೇಳುತ್ತಿದರು. ಅದ್ವೈತ ತತ್ತ್ವವೊಂದೇ ಅವರ ಸಿದ್ಧಾಂತವಾಗಿತ್ತು. ವೇದ ಉಪನಿಷತ್ತುಗಳುಮಾತ್ರ ಅವರ ಪ್ರಮಾಣ ಗ್ರಂಥಗಳಾಗಿದ್ದುವು.

ಆದರೆ ಈ ಭಾವದೊಡನೆ ಸ್ವಾಮಿಜಿ ಭರತಖಂಡದಲ್ಲಿ ಇದ್ದಾಗ ತಾಯಿ ಎಂಬ ಮಾತು ಯಾವಾಗಲೂ ಅವರ ನಾಲಿಗೆಯ ಮೇಲೆ ನಲಿದಾಡುತ್ತಿತ್ತು. ನಮ್ಮ ಮನೆಯಲ್ಲಿ ಚಿರಪರಿಚಿತರಾದವರನ್ನು ಹೇಗೆ ಕರೆಯುವೆವೊ ಹಾಗೆ ಅವರು ತಾಯಿಯನ್ನು ಕರೆಯುತ್ತಿದ್ದರು. ಪದೇಪದೇ ಅವರು ತಾಯಿಯ ಭಾವನೆಯಲ್ಲಿ ತನ್ಮಯರಾಗುತ್ತಿದ್ದರು. ಇತರ ಮಕ್ಕಳಂತೆಯೇ ಇವರು ಕೂಡ. ಯಾವಾಗಲೂ ಒಳ್ಳೆಯವರಾಗೇ ಇರುತ್ತಿರಲಿಲ್ಲ. ಕೆಲವು ವೇಳೆ ತುಂಟತನ ಮಾಡುತ್ತಿದ್ದರು, ಹೇಳಿದಂತೆ ಕೇಳುತ್ತಿರಲಿಲ್ಲ. ಆದರೆ ಇದು ತಾಯಿಯೊಡನೆ ಮಾತ್ರ. ತಮ್ಮ ಪಾಲಿಗೆ ಬರುವ ಒಳ್ಳೆಯದು ಕೆಟ್ಟದ್ದು ಎಲ್ಲವೂ ಅವಳಿಂದ ಬರುತ್ತಿದೆ ಎನ್ನುವುದೇ ಹೊರತು ಅದಕ್ಕಾಗಿ ಇತರರನ್ನು ಹೊಣೆ ಮಾಡುತ್ತಿರಲಿಲ್ಲ. ಒಂದು ಪವಿತ್ರದಿನ

ತಮ್ಮ ಶಿಷ್ಯರೊಬ್ಬರಿಗೆ ತಾಯಿಗೆ ಹೇಗೆ ಪ್ರಾರ್ಥಿಸಬೇಕೆಂಬುದನ್ನು ಹೇಳಿದರು. ಆ ಪ್ರಾರ್ಥನೆ ತಮ್ಮ ಜೀವನದಲ್ಲಿ ಅತಿ ಅದ್ಭುತವಾಗಿ ಸಿದ್ಧಿಸಿತ್ತು. 'ನೋಡು, ನೀನು ಹೇಳಿದಾಗ ತಾಯಿ ಕೇಳುವಂತೆಮಾಡು. ಸುಮ್ಮನೆ ಗೋಗರೆಯಬೇಡ, ತಿಳಿಯಿತೆ!'' ಎಂದು ಕೇಳುವವನ ಎದೆ ತಲ್ಲಣಿಸುವಂತೆ ಹೇಳಿದರು. ಪದೇಪದೇ ಯಾವುದಾದರೊಂದು ತಾಯಿಗೆ ಸಂಬಂಧಪಟ್ಟ ಹೊಸ ವರ್ಣನೆಯನ್ನು ಕೊಡುತ್ತಿದ್ದರು. ಆಶೀರ್ವದಿಸುವುದಕ್ಕೆ ಅವಳ ಬಲಗೈ ಮೇಲೆತ್ತಿದೆ, ಶಿಕ್ಷಿಸುವುದಕ್ಕೆ ಎಡಗೈಯಲ್ಲಿ ಖಡ್ಗ ಧರಿಸಿರುವಳು. ಬಹಳ ಹೊತ್ತು ಮಾತನಾಡಿದ ಮೇಲೆ "ಅವಳ ಶಾಪವೂ ವರವೇ'' ಎಂದು ಕೊನೆಗಾಣಿಸುತ್ತಿದ್ದರು. ಅಥವಾ ಕೆಲವು ವೇಳೆ ಭಾವಪರವಶರಾಗಿ ಅರ್ಧ ಕಾವ್ಯಮಯವಾದ ಭಾಷೆಯಲ್ಲಿ ಹೀಗೆ ಹೇಳುವರು: "ಅವಳ ಹೃದಯಾಂತರಾಳದಿಂದ ರಕ್ತಲೇಪಿತ ಖಡ್ಗ ಮಿಂಚಿನಂತೆ ಹೊರಹೊಮ್ಮುವುದು. ಮಾತೃ ಉಪಾಸಕರು ಜನ್ಮತಃ ಆ ಖಡ್ಗಧಾರಿಣಿಯ ಭಕ್ತರು.'' ಸ್ವಾಮಿಜಿ ಇಂತಹ ಸ್ಥಿತಿಯಲ್ಲಿದ್ದಾಗ ಉಚ್ಚರಿಸಿದ ಮಾತುಗಳಿಂದಲೆ "ತಾಯಿಯ ಧ್ವನಿ'' ಎಂಬ ಪದ್ಯವನ್ನು ಬರೆದು ನಾನು ಪ್ರಕಟಿಸಿರುವೆನು. "ನಾನು ರೌದ್ರವನ್ನೂ ಆರಾಧಿಸುತ್ತೇನೆ'' ಎಂದು ಅವರು ಒಮ್ಮೆ ನಿರಂತರ ಹೇಳುತ್ತಿದ್ದರು. ಮತ್ತೊಮ್ಮೆ ಅವರು ಹೀಗೆಂದರು "ಎಲ್ಲರಿಗೂ ಸೌಖ್ಯವೇ ಗುರಿ ಎಂದು ಹೇಳಲಾಗುವುದಿಲ್ಲ. ಎಷ್ಟೋ ಜನ ದುಃಖವನ್ನು ಹುಡುಕಿಕೊಂಡೇ ಹುಟ್ಟುವರು. ರೌದ್ರವನ್ನೂ ರೌದ್ರಕ್ಕಾಗಿ ಪೂಜಿಸುವ.''

ಸ್ವಾಮಿಜಿಯವರಿಗೆ ಮುಚ್ಚುಮರೆಯ ಸ್ವಭಾವವನ್ನು ಕಂಡರೆ ಆಗದು. ದೇವಸ್ಥಾನದಲ್ಲಿ ಕೊಡುವ ಪ್ರಾಣಿ ಬಲಿಯ ವಿಷಯವಾಗಿ ನಾನು ಅಸಮಾಧಾನಪಟ್ಟು ಅವರನ್ನು ಕೇಳಿದಾಗ, ಅವರು ಜಾಸ್ತಿ ಮಾತನಾಡಲೇ ಇಲ್ಲ. ಯಾರು ದೇವರಿಗೆ ಪ್ರಾಣಿ ಬಲಿಯನ್ನು ವಿರೋಧಿಸುವರೊ ಅವರು ತಮ್ಮ ಆಹಾರಕ್ಕೆ ಅವನ್ನು ಕೊಲ್ಲಲು ಸ್ವಲ್ಪವೂ ಅನುಮಾನಿಸುವುದಿಲ್ಲ ಎಂದು ಅವರು ಹೇಳಲಿಲ್ಲ. ಆಧುನಿಕಾಲದಲ್ಲಿ ಕಟುಕ ಮತ್ತು ಕಟುಕನ ಅಂಗಡಿ ಎಂತಹ ಅಧೋಗತಿಗೆ ಬಂದಿದೆ ಎಂಬ ವಾದವನ್ನೂ ತರಲಿಲ್ಲ. ನನ್ನ ಅಸಮ್ಮತಿಗೆ "ಚಿತ್ರವನ್ನು ಪೂರೈಸಲು ಏತಕ್ಕೆ ಸ್ವಲ್ಪ ರಕ್ತವನ್ನು ಉಪಯೋಗಿಸಬಾರದು?'' ಎಂದು ನೇರವಾಗಿ ಉತ್ತರಕೊಟ್ಟರು. ನಾನು ಕಾಳಿಯ ಪೂಜೆಯ ಮಹತ್ವವನ್ನು ಕುರಿತು ಸ್ವಾಮಿಜಿಯವರಿಂದ ಮತ್ತು ಹತ್ತಿರದಲ್ಲಿ ಕುಳಿತ ಗುರುಭಾಯಿಗಳೊಬ್ಬರಿಂದ ಅನಂತರ ಬಹಳ ಕಷ್ಟ

ಪಟ್ಟು ಅದಕ್ಕೆ ವಿವರಣೆಯನ್ನು ತಿಳಿಯಬೇಕಾಯಿತು. ಪ್ರಾಣಿ ಬಲಿಗೆ ಅತೀತವಾದ ಒಂದು ಉಗ್ರ ಸತ್ಯ ಇದರಲ್ಲಿದೆ ಎಂದು ಅನಂತರ ಅರಿತೆ. ಕಾಳಿಯ ಅನುಚರರಿಗೆ ನೀಡುವ ರಕ್ತಬಲಿಯನ್ನು ತಾವು ಎಂದೂ ಒಪ್ಪಿದವರಲ್ಲ ಎಂದು ಹೇಳಿದರು. ಇದು ಕೇವಲ ಪ್ರೇತಪೂಜೆ, ಇದಕ್ಕೆ ಸ್ಥಳವಿಲ್ಲ ಎಂದರು. ತಮ್ಮ ಉದ್ದೇಶವೇ ಅಂಜಿಕೆ ಮತ್ತು ದೌರ್ಬಲ್ಯಗಳನ್ನು ತಮ್ಮ ಮನಸ್ಸಿನಿಂದ ಒಮ್ಮೆಯೆ ಹೊಡೆದೋಡಿಸುವುದು. ತಾಯಿ, ಸುಖ ಸಂತೋಷದಲ್ಲಿರುವಂತೆ ಪಾಪ ಅಂಜಿಕೆ ದುಃಖ ನಾಶಗಳಲ್ಲಿಯೂ ಇರುವಳು ಎಂಬುದನ್ನು ಅರಿಯುವುದು. ಈ ಮಹಾ ಉದ್ದೇಶವನ್ನು ಕೆಳಗೆ ಎಳೆಯುವುದನ್ನು ಅವರು ಎಂದಿಗೂ ಸಹಿಸುತ್ತಿರಲಿಲ್ಲ. ರೌದ್ರದ ಪೂಜೆಯ ವಿಷಯವಾಗಿ ಮಾತನಾಡುತ್ತಿದ್ದಾಗ, ರೌದ್ರದೊಂದಿಗೆ ಒಂದಾಗಬೇಕೆಂದು ಹೇಳುವಾಗ, "ಮೂರ್ಖರು, ನಿನ್ನ ಕೊರಳಿಗೆ ರುಂಡಮಾಲೆಯನ್ನು ಹಾಕಿ ಅಂಜಿಕೆಯಿಂದ ಹಿಂತಿರುಗುವರು, ದಯಾಮಯಿ ಎಂದು ಕರೆಯುವರು" ಎಂದರು. ಇದನ್ನು ಕೇಳುತ್ತಿದ್ದಾಗ, ಆರಾಧಕನಲ್ಲಿ ಬರಿಯ ಒಳ್ಳೆಯ ದೇವರು, ಅವನು ದಯಾಮಯನೆಂಬ ಭಾವನೆ ಇದ್ದಿತೇ ಹೊರತು, ಭೂಕಂಪ ಜ್ವಾಲಾಮುಖಿಗಳ ಹಿಂದೆಯೂ ಅದೇ ದೇವರು ಇರುವನೆಂಬುದನ್ನು ಒಪ್ಪಿಕೊಳ್ಳದ ಹೇಡಿತನ ವಿದ್ದಿತು ಎಂದು ಅರಿವಾಯಿತು. ಇಂತಹ ಪೂಜೆ ಹಿಂದೂಗಳು ಹೇಳುವಂತೆ ಬರೀ ವರ್ತಕನ ಭಕ್ತಿ. ದೇವರು ಒಳ್ಳೆಯದರಲ್ಲಿರುವಂತೆಯೇ ಕೆಟ್ಟದ್ದರಲ್ಲಿಯೂ ಇರುವನು ಎಂದಾಗ ಅವರ ಪ್ರಚಂಡ ಧೈರ್ಯ ಎಷ್ಟು ಅದ್ಭುತವಾದುದು ಎಂಬುದು ಗೊತ್ತಾಯಿತು. ಸ್ವಾರ್ಥಭಾವನೆಗೆ ಎಡೆಗೊಡದ ನಿಜವಾದ ಭಕ್ತಿಯಲ್ಲಿ ವಿವೇಕಾನಂದರು ಹೇಳಿದಂತೆ "ಭಕ್ತ ಜೀವನವನ್ನಲ್ಲ ಮರಣವನ್ನು ಇಚ್ಛಿಸುವನು. ಅವಳ ಖಡ್ಗಕ್ಕೆ ಬಲಿಯಾಗಿ ರುದ್ರಾಣಿಯಲ್ಲಿ ಎಂದೆಂದಿಗೂ ಒಂದಾಗಲು ಬಯಸುವನು."

ಸ್ವಾತಂತ್ರ್ಯಪ್ರಿಯರಾದ ಸ್ವಾಮಿಜಿಗೆ ತಮ್ಮ ಅಭಿಪ್ರಾಯಗಳನ್ನು ಶಿಷ್ಯೆಗೆ ಬಲಾತ್ಕಾರವಾಗಿ ಕೊಡಲು ಸಾಧ್ಯವೇ ಆಗುತ್ತಿರಲಿಲ್ಲ. ನನ್ನ ಹಿಂದಿನ-ವಿದ್ಯಾಭ್ಯಾಸದ ಅನುಭವವೆಲ್ಲ ನಾನು ಭಾವನೆಯಲ್ಲಿ ಭಾರತೀಯಳಾಗಬೇಕು ಎನ್ನುವಂತೆ ಮಾಡಿತ್ತು. ಅಮರನಾಥ ತೀರ್ಥಯಾತ್ರೆಯ ನೆನಪಿನಿಂದ ಆ ಭಾವನೆಗೆ ಹಿಂದೂ ಧರ್ಮದಲ್ಲಿ ಎಂತಹ ಸ್ಥಳವಿದೆ ಎಂಬುದನ್ನು ನಾನು ಅರಿತೆ. ಅದನ್ನು ಎಂದಿಗೂ ಮರೆಯುವಂತಿಲ್ಲ.

ಒಬ್ಬ ಹೊಸ ಭಾಷೆಯನ್ನು ಅರಿಯಲು ಪ್ರಯತ್ನಿಸುವಂತೆ ಬೇರೊಂದು ಜನಾಂಗದಲ್ಲಿರಬೇಕೆಂತಲೇ ಜನ್ಮವೆತ್ತ ಬಯಸುವಂತೆ ನಾನು ಶಕ್ತಿಪೂಜೆಯ ರಹಸ್ಯವನ್ನು ಅರಿಯತೊಡಗಿದೆ. ಇದರ ಮೂಲಕ ನನ್ನ ಗುರುದೇವನ ಜೀವನ ಮತ್ತು ಬೋಧನೆಯನ್ನು ಅರಿಯತೊಡಗಿದೆ. ಕ್ರಮೇಣ ಸ್ವಲ್ಪ ವಾಗಿ ನಾನು ಇದನ್ನು ಅರಿಯತೊಡಗಿದೆ. ಧಾರ್ಮಿಕ ವಿಚಾರಗಳಲ್ಲಂತೂ ನನ್ನ ಗುರುದೇವರು ಜನ್ಮತಃ ಶಿಷ್ಯರು. ಇತರರಲ್ಲಿ ಏಳುವ ಭಾವನೆಯನ್ನು ಎಂದಿಗೂ ನಾಶಮಾಡುತ್ತಿರಲಿಲ್ಲ. ಒಂದು ಸಲ ಅವರ ಸಮೀಪದಲ್ಲಿದ್ದಾಗ ಯಾರೊ ಕಾಳಿಯ ವಿಗ್ರಹವನ್ನು ತಂದರು. ಅದನ್ನು ನೋಡಿದಾಗ ನನ್ನ ಮನದಲ್ಲಿ ಎದ್ದ ಒಂದು ಆಲೋಚನೆಯನ್ನು ಅವರಿಗೆ "ಸ್ವಾಮಿಜಿ, ಬಹುಶಃ ಕಾಳಿ ಶಿವನ ದರ್ಶನವಿರಬಹುದು ಅಲ್ಲವೆ?" ಎಂದೆ. ಅವರು ನನ್ನನ್ನು ಒಂದು ಕ್ಷಣ ಸುಮ್ಮನೆ ನೋಡಿ "ಆಗಲಿ, ಆಗಲಿ, ನಿನಗೆ ತೋರಿದ ರೀತಿಯಲ್ಲಿ ಬಣ್ಣಿಸು" ಎಂದರು ಮೃದುವಾಗಿ.

ಮತ್ತೊಂದುದಿನ ಜಾರಾಶಂಕೊ ಎಂಬಲ್ಲಿ ನಿರ್ಜನ ಪ್ರದೇಶವೊಂದರ ಲ್ಲಿದ್ದ ವೃದ್ಧರಾದ ಮಹರ್ಷಿ ದೇವೇಂದ್ರನಾಥ ಠಾಕೂರರನ್ನು ನೋಡಲು ನನ್ನೊಂದಿಗೆ ಹೋಗುತ್ತಿದ್ದರು. ನಾವು ಹೊರಡುವುದಕ್ಕೆ ಮುಂಚೆ ನಾವಿದ್ದ ಕಡೆ ಹಿಂದಿನ ರಾತ್ರಿ ಯಾರೋ ಸತ್ತಿದ್ದರು. ಅಲ್ಲಿಯ ಅಂತ್ಯ ದೃಶ್ಯಗಳ ವಿಷಯವಾಗಿ ನನ್ನನ್ನು ಕೇಳಿದರು. ಆಗ ನನ್ನ ಮನಸ್ಸಿನಲ್ಲಿ ತಕ್ಷಣ ಮೂಡಿದ ಭಾವನೆಗಳನ್ನು ಹೇಳಿದೆ. ಧರ್ಮಗಳು ಭಾಷೆಯಂತೆ, ಎಲ್ಲರಿಗೂ ಅವರವರ ಭಾಷೆಯಲ್ಲಿ ಮಾತನಾಡಬೇಕು ಎಂಬುದು ನನಗೆ ಗೊತ್ತಾಯಿತು ಎಂದೆ. ಇದನ್ನು ಕೇಳಿದೊಡನೆಯೆ ಅವರ ಮುಖ ಪ್ರಫುಲ್ಲವಾಯಿತು. "ಹೌದು, ಶ್ರೀರಾಮಕೃಷ್ಣ ಪರಮಹಂಸರೊಬ್ಬರೇ ಇದನ್ನು ಬೋಧಿಸಿದವರು. ಪ್ರತಿಯೊಬ್ಬರಿಗೂ ಅವರವರ ಭಾಷಯಲ್ಲೆ ಮಾತನಾಡಬೇಕೆಂದು ಹೇಳಲು ಧೈರ್ಯ ಅವರೊಬ್ಬರಿಗೇ ಇದ್ದುದು" ಎಂದರು.

ಶಕ್ತಿಪೂಜೆಯ ವಿಷಯವಾಗಿ ಮುಚ್ಚುಮರೆಯಿಲ್ಲದೆ ತಮ್ಮ ಭಾವನೆ ಯನ್ನು ವ್ಯಕ್ತಪಡಿಸುವ ಒಂದು ಸಮಯಬಂತು. ನಾನು ಕಾಳಿಘಾಟನಲ್ಲಿ ಮಾತನಾಡಬೇಕಾಗಿತ್ತು. ಅಲ್ಲಿಗೆ ಸ್ವಾಮಿಜಿ ಬಂದು, ಯಾರಾದರೂ ಪರದೇಶೀಯರು ಉಪನ್ಯಾಸಕ್ಕೆ ಬರಬೇಕಾದರೆ ಅವರು ತಮ್ಮ ಪಾದರಕ್ಷೆ ಯನ್ನು ಹೊರಗೆ ಬಿಟ್ಟು ಇತರರಂತೆ ನೆಲದಮೇಲೆ ಕುಳಿತುಕೊಳ್ಳಲು ಸಿದ್ಧ

ರಾಗಿರಬೇಕು ಎಂದು ತಿಳಿಸಿದರು. ಅಲ್ಲಿ ಯಾರಿಗೂ ವಿನಾಯಿತಿ ತೋರು ವುದಕ್ಕೆ ಆಗುವುದಿಲ್ಲ. ನಾನೇ ಇದಕ್ಕೆ ಜವಾಬ್ದಾರಳಾದೆ.

ಇದನ್ನೆಲ್ಲಾ ಹೇಳಿದ ಮೇಲೆ ಅವರು ಸುಮ್ಮನೇ ಅಲ್ಲೇ ಇದ್ದರು. ಅನಂತರ ಕರ್ನಲ್ ಹೆ ಎಂಬುವರು ಬರೆದ "Guardian angels" ಎಂಬ ಕವಿತೆಯನ್ನು ಕುರಿತು ಸ್ವಲ್ಪ ಸಂಕೋಚದಿಂದ ಹೀಗೆ ಹೇಳಿದರು "ಬ್ರಹ್ಮ ಮತ್ತು ದೇವತೆಗಳ ವಿಷಯದಲ್ಲಿ ನನ್ನ ಅಭಿಪ್ರಾಯವೂ ಕೂಡ ಅದೇ. ನಾನು ಬ್ರಹ್ಮನಲ್ಲಿ ನಂಬುತ್ತೇನೆ; ಈಶ್ವರನಲ್ಲಿ ನಂಬುತ್ತೇನೆ; ಮತ್ತಾವುದರಲ್ಲಿಯೂ ಇಲ್ಲ."

ವೇದಾಂತದಲ್ಲಿ ಬರುವ ನಿರ್ಗುಣೋಪಾಸನೆಗೂ, ಸಗುಣ ಈಶ್ವರಾ ರಾಧನೆಗೂ, ಒಂದು ಸಾಮರಸ್ಯವನ್ನು ಕಲ್ಪಿಸಲು ಇತರರ ಯುಕ್ತಿಗೆ ಕಷ್ಟವಾದೀತೆಂದು ಅವರು ಭಾವಿಸಿದ್ದರು. ಆದರೆ ಅವರ ಸಮೀಪದಲ್ಲಿದ್ದ ನಮಗೆ ಸ್ವಾಮಿಜಿಯವರ ಜೀವನವೇ ಈ ಎರಡು ಆದರ್ಶಗಳ ಸತ್ಯಕ್ಕೆ ಒಂದು ಉದಾಹರಣೆ ಮತ್ತು ಅದರ ಸಾಮರಸ್ಯಕ್ಕೆ ಒಂದು ಜ್ವಲಂತ ನಿದರ್ಶನವಾಗಿತ್ತು. ಇದು ಅವರಿಗೆ ಗೊತ್ತಿರಲಿಲ್ಲ. ಅವರು ಮೇಲಿನ ಭಾವನೆಯನ್ನೆ ಮನನಮಾಡುತ್ತ ಅದರ ವಿಷಯವಾಗಿಯೆ ನಮಗೆ ಕೇಳುವಂತೆ ಅವರೊಳಗೇ ಏನೇನೊ ಮಾತನಾಡಿಕೊಳ್ಳುತ್ತಾ ಕುಳಿತರು. ಪ್ರಶ್ನೆಗಳಿಗೆ ಉತ್ತರ ಹೇಳುತ್ತ, ಅದನ್ನೂ ಸ್ಪಷ್ಟಪಡಿಸುತ್ತಿದ್ದರು. ಆದರೂ ಮನಸ್ಸೆಲ್ಲಾ ತಾವು ಬಿಟ್ಟುಬರಲಾರದ ಯಾವುದೋ ಒಂದು ಭಾವನೆಯಲ್ಲಿ ತಲ್ಲೀನವಾಗಿದ್ದಂತೆ ಇತ್ತು.

"ನಾನು ಕಾಳಿಯನ್ನು ಹೇಗೆ ದ್ವೇಷಿಸುತ್ತಿದ್ದೆ! ಅವಳ ರೀತಿಯನ್ನು ಹೇಗೆ ದ್ವೇಷಿಸುತ್ತಿದ್ದೆ! ನಾನು ಆರು ವರುಷ ಇದಕ್ಕಾಗಿ ಹೋರಾಡಿದೆ. ನಾನು ಅವಳನ್ನು ಒಪ್ಪಿಕೊಳ್ಳಲಿಲ್ಲ. ಆದರೆ ಕೊನೆಗೆ ನಾನು ಅವಳನ್ನು ಒಪ್ಪಿಕೊಳ್ಳಬೇಕಾಯಿತು. ಶ್ರೀರಾಮಕೃಷ್ಣಪರಮಹಂಸರು ನನ್ನನ್ನು ಅವಳಿಗೆ ಅರ್ಪಿಸಿದರು. ನಾನು ಮಾಡುವ ಪ್ರತಿಯೊಂದು ಕೆಲಸವನ್ನೂ ಅವಳೇ ಮಾಡಿಸುತ್ತಿರುವವಳು ಎಂದು ನಂಬಿರುವೆನು. ಅವಳು ತನ್ನ ಇಚ್ಛೆ ಬಂದಂತೆ ನನ್ನನ್ನು ಆಡಿಸುವಳು. ಅದರೂ ನಾನು ಅವಳೊಡನೆ ಅಷ್ಟು ಹೋರಾಡಿದೆ. ನಾನು ಅವರನ್ನು ಪ್ರೀತಿಸುತ್ತಿದ್ದೆ. ಅದರಿಂದಲೇ ನಾನು ಆಕರ್ಷಿತನಾದೆ. ಅವರ ಅತಿ ಅದ್ಭುತವಾದ ಪವಿತ್ರತೆ ನನ್ನ ಕಣ್ಣಿಗೆ ಕಟ್ಟಿದಂತೆ ಇತ್ತು. ಅವರ ಅಸೀಮ ಪ್ರೇಮಕ್ಕೆ ದಾಸನಾದೆ. ಆಗ ಆ

ಮಹಾತ್ಮರ ದಿವ್ಯಮಹಿಮೆ ನನಗೆ ಇನ್ನೂ ಗೋಚರವಾಗಿರಲಿಲ್ಲ. ನಾನು ಅವರಲ್ಲಿ ಶರಣಾಗತನಾದಮೇಲೆ ಇದೆಲ್ಲ ನನಗೆ ಅರಿವಾಯಿತು. ಆ ಸಮಯದಲ್ಲಿ ಯಾವಾಗಲೂ ಯಾವುದಾದರೂ ದೇವದೇವತೆಗಳನ್ನು ನೋಡುತ್ತಿದ್ದ ಬುದ್ಧಿ ಸ್ತಿಮಿತವಿಲ್ಲದವರು ಇವರು ಎಂದು ನಾನು ಭಾವಿಸಿದ್ದೆ. ನನಗೆ ಅದನ್ನು ಕಂಡರೆ ಆಗುತ್ತಿರಲಿಲ್ಲ. ಕೊನೆಗೆ ನಾನೂ ಅವಳನ್ನು ಒಪ್ಪಿ ಕೊಳ್ಳಬೇಕಾಯಿತು.

"ಇಲ್ಲ, ನನ್ನನ್ನು ಹೀಗೆ ಮಾಡುವಂತೆ ಬಾಲಾತ್ಕರಿಸಿದ್ದು ಒಂದು ರಹಸ್ಯ; ಅದು ನನ್ನೊಡನೆ ಹೋಗುವುದು. ಆಗ ನಾನು ಬಹಳ ದುರ್ದೆಶೆ ಯಲ್ಲಿದ್ದೆ. ಇದೊಂದು ಅವಕಾಶ ಸಿಕ್ಕಿತು ಅವಳಿಗೆ. ಅವಳು ನನ್ನನ್ನು ಗುಲಾಮನನ್ನಾಗಿ ಮಾಡಿಕೊಂಡಳು. ಹೌದು ನಿಜವಾಗಿ ಅವಳು ನನ್ನನ್ನು ಗುಲಾಮನನ್ನಾಗಿ ಮಾಡಿಕೊಂಡಳು. ಶ್ರೀರಾಮಕೃಷ್ಣಪರಮಹಂಸರು ನನ್ನನ್ನು ಅವಳಿಗೆ ಅರ್ಪಿಸಿದರು. ವಿಚಿತ್ರ, ಇದಾದ ಮೇಲೆ ಅವರು ಎರಡು ವರ್ಷಗಳು ಮಾತ್ರ ಜೀವಿಸಿದ್ದರು. ಇರುವನಕ ಬಹುಕಾಲ ಯಾವು ದಾದರೂ ರೋಗದಿಂದ ನರಳುತ್ತಿದ್ದರು. ಆರು ತಿಂಗಳು ಕೂಡ ಒಂದೇ ಸಮನಾಗಿ ಆರೋಗ್ಯವಾಗಿ ಉಲ್ಲಾಸದಿಂದ ಇರಲಿಲ್ಲ.

"ಗುರು ನಾನಕ್ ಕೂಡ ಹೀಗೆ. ತನ್ನ ಶಕ್ತಿಯನ್ನು ನೀಡು ವುದಕ್ಕೆ ಒಬ್ಬ ಯೋಗ್ಯ ಶಿಷ್ಯನನ್ನು ಹುಡುಕುತ್ತಿದ್ದರು. ಯೋಗ್ಯ ಶಿಷ್ಯ ಸಿಕ್ಕಿದ ಮೇಲೆ ಅವನಿಗೆ ಎಲ್ಲವನ್ನೂ ದಾನಮಾಡಿಬಿಟ್ಟರು. ತನ್ನ ಮನೆ ಮಕ್ಕಳು ಯಾರನ್ನೂ ಅವರು ಗಮನಿಸಲಿಲ್ಲ. ಇನ್ನು ನಿಶ್ಚಿಂತೆಯಿಂದ ಅವರು ಸಾಯಬಹುದಾಗಿತ್ತು.

"ಮುಂದಿನ ಜನಾಂಗ ಶ್ರೀರಾಮಕೃಷ್ಣಪರಮಹಂಸರನ್ನು ಕಾಳಿಯ ಅವತಾರ ಎಂದು ಹೇಳುವುದೆ? ಹೌದು, ಅದರಲ್ಲಿ ಸಂದೇಹವೇ ಇಲ್ಲ. ಅವಳೇ ಶ್ರೀರಾಮಕೃಷ್ಣರೆಂಬ ದೇಹವನ್ನು ತನ್ನ ಲೀಲೆಗಾಗಿ ಸೃಷ್ಟಿಸಿದಳು.

"ಎಲ್ಲೋ ಒಂದು ಸ್ತ್ರೀ ಆಕಾರದ ಮಹಾಶಕ್ತಿ ಇದೆ. ಅದನ್ನು ತಾಯಿ ಕಾಳಿ ಎಂದು ಕರೆಯುವರು ಎಂದು ನಾನು ನಂಬದೆ ಇರಲಾರೆ. ಆದರೆ ನಾನು ಬ್ರಹ್ಮನಲ್ಲಿಯೂ ನಂಬುತ್ತೇನೆ. ಇದು ಹಾಗೆಯೇ ಅಲ್ಲವೆ? ನಮ್ಮ ದೇಹದಲ್ಲಿರುವ ಕೋಟ್ಯಂತರ ಜೀವಾಣುಗಳಲ್ಲವೆ ನಮ್ಮ ವ್ಯಕ್ತಿತ್ವಕ್ಕೆ ಕಾರಣ? ಒಂದಲ್ಲ ಹಲವು ಮೆದುಳಿನಲ್ಲಿರುವ ಕೇಂದ್ರಗಳು ನಮ್ಮ ಅರಿವಿಗೆ ಕಾರಣ. ವೈವಿಧ್ಯತೆಯಲ್ಲಿ ಐಕ್ಯತೆ; ಅದರಂತೆಯೆ ಬ್ರಹ್ಮನಲ್ಲಿ ಏತಕ್ಕೆ

ಹಾಗಿರಬಾರದು? ಅದು ಬ್ರಹ್ಮ, ಏಕ. ಆದರೂ ಅದೇ ದೇವ ದೇವತೆಗಳೆಲ್ಲವೂ ಆಗಿರುವುದು.''

ಸ್ವಾಮಿಜಿ ಅವರು ಕಾಶ್ಮೀರದಿಂದ ಬಂದಾಗ ''ಈ ದೇವದೇವತೆಗಳು ಬರಿಯ ಚಿಹ್ನೆ ಮಾತ್ರವಲ್ಲ, ಇವೆಲ್ಲ ಭಕ್ತರು ಕಂಡ ದರ್ಶನಗಳು'' ಎನ್ನು ತ್ತಿದ್ದರು. ಕೆಲವು ವೇಳೆ ಶ್ರೀರಾಮಕೃಷ್ಣರು ಸಮಾಧಿಯಿಂದ ಪ್ರಕೃತಿಸ್ಥ ರಾದ ಮೇಲೆ ಯಾರು ಹಿಂದೆ ರಾಮನಂತೆ ಕೃಷ್ಣನಂತೆ, ಜೀಸಸ್ಸಿನಂತೆ ಬಂದರೋ ಅವರೆಲ್ಲ ಇಲ್ಲಿರುವರು ಎಂದು ಹೇಳುತ್ತಿದ್ದರು. ಅನಂತರ ನಗುತ್ತ ತಮ್ಮ ಮುಖ್ಯ ಶಿಷ್ಯನಾದ ನರೇಂದ್ರನಾಥನನ್ನು ನೋಡಿ ''ಆದರೆ ನಿನ್ನ ವೇದಾಂತ ದೃಷ್ಟಿಯಿಂದಲ್ಲ'' ಎನ್ನುತ್ತಿದ್ದರು.

ಮಹಾವ್ಯಕ್ತಿಗಳಲ್ಲಿ ಬೇರೆ ಬೇರೆ ಕಾಲದ ಬೇರೆ ಬೇರೆ ಆದರ್ಶಗಳು ಪರಸ್ಪರ ಹೊಂದಿಕೊಂಡು ಸಂಲಗ್ನವಾಗುವಾಗ ಒಂದು ಮಹಾ ಹೋರಾಟ ವಾಗುವುದು. ಈ ಹೋರಾಟವನ್ನು ವೀಕ್ಷಿಸಲು ನಮಗೆ ಸಾಧ್ಯವಾಯಿತು. ಒಂದು ಕಡೆ ಶಕ್ತಿ ಮತ್ತೊಂದು ಕಡೆ ಬ್ರಹ್ಮ. ಬಹಳ ಹಿಂದೆ ಕೇಳಿದ ಸ್ವಾಮಿಜಿಯವರ ಮಾತು ನನಗೆ ನೆನಪಾಗುವುದು. ''ಪಂಚೇಂದ್ರಿಯಗಳ ಮೂಲಕ ಕಂಡ ನಿರ್ಗುಣ ಬ್ರಹ್ಮನೇ ಈಶ್ವರ.'' ಈ ಎರಡು ಆದರ್ಶಗಳಿಗೆ ರಾಜಿ ಮಾಡಿಸುವುದಕ್ಕೆ ಸಾಧ್ಯವಿಲ್ಲವೇನೊ ನಿಜವಾಗಿ ಎನ್ನಿಸುವುದು. ಎರಡು ಭಾವನೆಗಳೂ ಏಕಕಾಲದಲ್ಲಿ ಸತ್ಯವಾಗಲಾರವು ಎನ್ನಿಸುವುದು. ಕೊನೆಗೆ ವ್ಯಕ್ತಿಯ ಅನುಭವದ ದೃಷ್ಟಿಯಿಂದ ಶಕ್ತಿ ಪರಬ್ರಹ್ಮವಾಗಬೇಕು, ಇಲ್ಲವೆ ಪರಬ್ರಹ್ಮ ಶಕ್ತಿಯಾಗಬೇಕು. ಎರಡೂ ಯಾವುದಾದರೂ ಒಂದ ರಲ್ಲಿ ಐಕ್ಯವಾಗಬೇಕು. ಆದರೆ ಯಾವುದು ಯಾವುದರಲ್ಲಿ ಐಕ್ಯವಾಗುತ್ತದೆ ಎಂಬುದು ಭಕ್ತನ ಸಂಸ್ಕಾರ ಮತ್ತು ಅದೃಷ್ಟದ ಮೇಲೆ ನಿಂತಿದೆ.

ನನ್ನ ದೃಷ್ಟಿಯಿಂದ ಈಗ ನಾನು ವಿವರಿಸಿದ ಸಂಭಾಷಣೆ ಬಹುಮುಖ್ಯ ವಾಗಿತ್ತು. ಅಂದಿನಿಂದ ನನ್ನ ಗುರುದೇವ ತಮಗಿತ್ತ ಮತ್ತಾರದೋ ಹೊಣೆಯನ್ನು ಹೊತ್ತಿರುವಂತೆ ತೋರುತ್ತಿದ್ದರು. ಕಾಳಿಯ ವಿಗ್ರಹವನ್ನು ವಿವರಿಸಿ ಎಂದು ಕೇಳಿದಾಗಲೆಲ್ಲ ಅವರು ಅದನ್ನು ಒಂದು ಅನುಭವದ ಪುಸ್ತಕಕ್ಕೆ ಹೋಲಿಸುತ್ತಿದ್ದರು. ಜೀವ ಅದರಲ್ಲಿ ಪುಟವಾದ ಮೇಲೆ ಪುಟ ವನ್ನು ತಿರುವಿಹಾಕುವುದು. ಆದರೆ ಕೊನೆಗೆ ಏನೂ ಇಲ್ಲ ಎಂದು ಗೊತ್ತಾಗುವುದು. ನನಗೆ ಇದೇ ಪರಮವಿವರಣೆಯಂತೆ ತೋರುವುದು ಭವಿಷ್ಯ ಭಾರತದಲ್ಲಿ ಕಾಳಿಕಾಮಾತೆಯೆ ಆರಾಧ್ಯದೇವತೆ. ಅವಳ ಹೆಸರಿನಲ್ಲಿ

ಅವಳ ಮಕ್ಕಳು ಹಲವು ಅನುಭವಗಳ ಆಳಕ್ಕೆ ಹೋಗಲು ಸಾಧ್ಯವಾಗುವುದು. ಆದರೂ ಕೊನೆಗೆ ಅವರ ಗುರಿ ಸನಾತನ ಸತ್ಯದೆಡೆಗೆ ಬರುವುದು. ಕೊನೆಗಾಲದಲ್ಲಿ ಪ್ರತಿಯೊಂದು ಜೀವಕ್ಕೂ ಗೊತ್ತಾಗುವುದು ತನ್ನ ಬಾಳೆಲ್ಲ ಒಂದು ಭ್ರಾಂತಿ ಎಂಬುದು.

> ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।
> ನ ಚ ಸನ್ನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥

ಕರ್ಮವನ್ನು ಆರಂಭಿಸದೆ ಇರುವುದರಿಂದ ಯಾರಿಗೂ ನೈಷ್ಕರ್ಮಸಿದ್ಧಿಸುವುದಿಲ್ಲ. ಬರಿಯ ಕರ್ಮತ್ಯಾಗದಿಂದಲೂ ಸಿದ್ಧಿಯನ್ನು ಹೊಂದುವುದಿಲ್ಲ.

ಮೇಲಿನ ವೇದಕ್ಕೆ ಸರಿಸಮನಾದ ಗೀತಾವಾಣಿ ಯಾರಿಗೆ ಜ್ಞಾಪಕವಿಲ್ಲ? ಇದರಂತೆಯೇ ಈ ಅನುಭವಗಳ ಮೂಲಕ ಹೋದಲ್ಲದೆ ನಾವು ಗುರಿಯನ್ನು ಮುಟ್ಟಲಾರೆವು ಎಂದು ಏಕೆ ಭಾವಿಸಬಾರದು? ಶಕ್ತಿಯ ಮೂಲಕ ಬ್ರಹ್ಮನಿಗೆ ಹೋಗಬೇಕು. ಭವಿಷ್ಯದಲ್ಲಿ ಬರುವ ಹೊಸಬಾಳು, ಹೊಸ ಜ್ಞಾನ, ಹೋರಾಟ, ಜಯಾಪಜಯಗಳು ಇವುಗಳಮೂಲಕ ಆತ್ಮ ಅದ್ವೈತದ ಪರಮಶಾಂತಿಯನ್ನು ಮುಟ್ಟಬೇಕಾಗುವುದೊ? ನಾನು ಅನುಸರಿಸಿದ ಆ ಮಹಾ ಗುರುವಿನ ಜೀವನವನ್ನು ಕೂಲಂಕಶವಾಗಿ ನೋಡಿದರೆ ದಿನ ಕಳೆದಂತೆ ಅವರೇ ಬಾಳಿನ ಪುಸ್ತಕದ ಹೊಸ ಹೊಸ ಪುಟಗಳನ್ನು ತಿರುವಿಹಾಕುತ್ತಿದ್ದಂತೆ ಸ್ಪಷ್ಟವಾಗಿ ಕಾಣುತ್ತಿತ್ತು. ಕೊನೆಯ ಹಾಳೆಯ ಕೊನೆಯ ಪದಕ್ಕೆ ಬಂದಾಗ ಮಾತ್ರ ಅವರು ಬಳಲಿದ ಮಗುವಿನಂತೆ ತಾಯಿಯ ತೊಡೆಯ ಮೇಲೆ ಮಲಗಿದರು. ಕೊನೆಗೆ ಇವೆಲ್ಲ ಒಂದು ಭ್ರಾಂತಿ ಎಂಬ ಪರಮಸಾಕ್ಷಾತ್ಕಾರವಾಗಿ ಅವಳಂಕದಲ್ಲಿ ನಿದ್ರಿಸತೊಡಗಿದರು.



೧೨

## ಅರ್ಥ ಪ್ರಪಂಚದ ಸುತ್ತ

೧೮೯೯ ಜೂನ್ ಇಪ್ಪತ್ತನೆಯ ತಾರೀಖು ನಾನು ಸ್ವಾಮಿಜಿಯವರ ಜೊತೆಯಲ್ಲೆ ಅವರ ಗುರುಭಾಯಿ ತುರಿಯಾನಂದರೊಡನೆ ಲಂಡನ್ನಿಗೆ ಹೊರಟೆ. ನಾವು ಲಂಡನ್ನನ್ನು ಜುಲೈ ೩೧ನೇ ತಾರೀಖು ಸೇರಿದೆವು. ಕೆಲವು ವಾರಗಳು ಇಂಗ್ಲೆಂಡಿನಲ್ಲಿದ್ದು ಅವರು ಅನಂತರ ಅಮೆರಿಕಾದೇಶಕ್ಕೆ ಹೊರಟರು. ನಾನು ಅಮೆರಿಕಾದೇಶದಲ್ಲಿ ಪುನಃ ಸ್ವಾಮಿಗಳನ್ನು ಸೆಪ್ಟೆಂಬರ್ ಕೊನೆಯಲ್ಲಿ ಕಂಡೆನು. ನಾನು ಅಲ್ಲಿ ಅವರಿದ್ದ ಮನೆ ಯಲ್ಲಿಯೇ ಐದಾರು ವಾರಗಳಿದ್ದೆ. ಅನಂತರ ೧೯೦೦ರಲ್ಲಿ ಬ್ರಿಟನಿಯಲ್ಲಿ ಹದಿನೈದು ದಿನಗಳು ಅವರೊಡನೆ ಇದ್ದೆ. ಇದಾದಮೇಲೆ ಅವರೊಡನೆ ದೀರ್ಘಕಾಲ ಇರುವ ಸುಯೋಗ ನನಗೆ ಲಭಿಸಲಿಲ್ಲ. ಸ್ವಾಮಿಜಿಯವರು ೧೯೦೦ನೇ ಕೊನೆಭಾಗದಲ್ಲಿ ಭರತಖಂಡಕ್ಕೆ ಮರಳಿದರು. ಆದರೆ ನಾನು ಪಾಶ್ಚಾತ್ಯದೇಶದಲ್ಲೆ ೧೯೦೨ರ ಪ್ರಾರಂಭದವರೆಗೆ ಇದ್ದೆ. ನಾನು ೧೯೦೨ರ ಪ್ರಾರಂಭದಲ್ಲಿ ಭರತಖಂಡಕ್ಕೆ ಹೋದಾಗ ಅವರ ಕೊನೆಯ ಆಶೀರ್ವಾದ ಪಡೆಯಲು ಅವರ ಜೀವನದ ಕೊನೆಯ ಅಂಕದಲ್ಲಿದ್ದಂತೆ ಆಯಿತು. ಆರು ವಾರಗಳು ಪ್ರಯಾಣಕಾಲದಲ್ಲಿ ನಾನಿದ್ದುದನ್ನು ನನ್ನ ಜೀವನದಲ್ಲಿ ಅತ್ಯಂತ ಮುಖ್ಯವಾದ ಕಾಲವೆಂದು ನಾನು ಭಾವಿಸುತ್ತೇನೆ. ಸ್ವಾಮಿಜಿ ಸಮೀಪ ದಲ್ಲಿದ್ದು ಅವರು ಹೇಳುವುದನ್ನು ಕೇಳುವ ಯಾವ ಅವಕಾಶವನ್ನೂ ನಾನು ಕಳೆದುಕೊಳ್ಳಲಿಲ್ಲ. ನನ್ನ ಇತರ ಕಾಲವನ್ನು ಬರೆಯುವುದು ಕಸೂತಿ ಕೆಲಸ ಇವುಗಳಲ್ಲಿ ಕಳೆದೆ. ಅವರ ಮನಸ್ಸು ಮತ್ತು ವ್ಯಕ್ತಿತ್ವದ ಪ್ರಭಾ ವಕ್ಕೆ ಅಷ್ಟುಕಾಲ ಒಳಗಾದುದಕ್ಕೆ ನಾನು ಎಷ್ಟು ಋಣಿಯಾಗಿದ್ದರೂ ಸಾಲದು.

ನಮ್ಮ ಪ್ರಯಾಣದ ಪ್ರಾರಂಭದಿಂದಲೂ ಕೊನೆಯವರೆಗೆ ಅವರ ಆಲೋಚನೆ ಮತ್ತು ಕಥೆಗಳಿಗೆ ಬಿಡುವೇ ಇರಲಿಲ್ಲ. ಯಾವ ಸಮಯದಲ್ಲಿ ಯಾವ ಸ್ಫೂರ್ತಿಯಿಂದ ಪ್ರೇರಿತರಾಗಿ ಯಾವ ಹೊಸ ವಿಷಯ ವನ್ನು ಹೇಳುತ್ತಿದ್ದರೊ ಗೊತ್ತಿರಲಿಲ್ಲ. ಮೊದಲನೆ ಮಧ್ಯಾಹ್ನದಲ್ಲಿ ಹಡಗು ಇನ್ನೂ ಗಂಗಾನದಿಯಲ್ಲಿ ಹೋಗುತ್ತಿದ್ದಾಗ ಅವರು ಇದ್ದಕ್ಕೆ ಇದ್ದಂತೆಯೆ ಹೇಳಿದರು: “ದಿನ ಕಳೆದಂತೆ ಎಲ್ಲಾ ಪೌರುಷದಲ್ಲಿ ಇರುವಂತೆ ನನಗೆ

ತೋರುತ್ತಿದೆ. ಇದೇ ನನ್ನ ಹೊಸ ಸಂದೇಶ. ಪಾಪ ಮಾಡಬೇಕಾದರೂ ಧೀರನಂತೆ ಮಾಡು. ಬೇರೆ ವಿಧಿ ಇಲ್ಲದೇ ಇದ್ದರೆ ಮಹಾದುಷ್ಟನಾಗು!" ನಾನು ಮತ್ತೊಂದುದಿನ ಕೇಳಿದ ಮತ್ತೊಂದು ಮಾತು ಇದಕ್ಕೆ ಸರಿಸವು ನಾಗಿದೆ. ಇಂಡಿಯಾದೇಶದಲ್ಲಿ ಕ್ರೌರ್ಯ ಕೃತ್ಯಗಳು ಬಹಳ ಕಡಿಮೆ ಎಂದೆ. ಅವರು ಅದಕ್ಕಾಗಿ ವ್ಯಥೆಪಟ್ಟಂತೆ "ದೇವರ ದಯೆಯಿಂದ ನನ್ನ ದೇಶದಲ್ಲಿ ಅದು ಹೆಚ್ಚಾಗಿದ್ದಿದ್ದರೆ! ಇದೊಂದು ಮೃತ್ಯುಚಿಹ್ನೆ" ಎಂದರು. ಶಿವರಾತ್ರಿಯ ಕಥೆ, ಪೃಥ್ವಿರಾಜನ ಕಥೆ, ವಿಕ್ರಮಾದಿತ್ಯನ ನಿರ್ಣಯ, ಬುದ್ಧ ಮತ್ತು ಯಶೋಧರೆಯರು, ಹೀಗೆ ನೂರಾರು ವಿಷಯಗಳು ಒಂದಾದಮೇಲೊಂದು ಬರುತ್ತಿದ್ದುವು. ಇದರಲ್ಲಿ ಒಂದು ಗಮನಾರ್ಹವಾದ ವಿಷಯವೇನೆಂದರೆ ಎರಡುಬಾರಿ ಒಂದೇ ಭಾವನೆಯನ್ನು ಒಮ್ಮೆಯೂ ಕೇಳಲಿಲ್ಲ. ವರ್ಣಗಳ ವಿಷಯುವನ್ನು ಪದೇಪದೇ ವಿವರಿಸುತ್ತಿದ್ದರು. ಆದರ್ಶಗಳನ್ನು ಪದೇಪದೇ ವಿಮರ್ಶಿಸುತ್ತಾ ಒತ್ತಿಹೇಳುತ್ತಿದ್ದರು. ಹಿಂದೆ ಈಗ ಮತ್ತು ಮುಂದಿನ ಕೆಲಸ ಇವನ್ನು ಕುರಿತು ಮಾತನಾಡುತ್ತಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ಮಾನವಕೋಟಿಯಹಿತವನ್ನು ಎಂದಿಗೂ ನಿರ್ಲಕ್ಷಿಸಿದವರಲ್ಲ. ದುರ್ಬಲರು ದಿಕ್ಕಿಲ್ಲದವರಪರವಾಗಿ ಅವರು ಯಾವಾಗಲೂ ಮಾತನಾಡುತ್ತಿದ್ದರು. ನನ್ನ ಗುರುದೇವ ಬಂದರು ಹೋದರು. ಆದರೆ ಅವರು ನಮಗಾಗಿ ಬಿಟ್ಟುಹೋದ ಅಸಾಧಾರಣ ಸ್ಮೃತಿನಿಧಿಯಲ್ಲಿ ಮಾನವಕೋಟಿಯ ಮೇಲಿನ ಪ್ರೇಮದಷ್ಟು ಮತ್ತಾವುದೂ ಇಲ್ಲ.

ನರಭಕ್ಷಣ ಕೆಲವು ಸಮಾಜದಲ್ಲಿ ಸ್ವಾಭಾವಿಕ ಎಂಬ ಕೆಲವು ಐರೋಪ್ಯರ ಅಭಿಪ್ರಾಯವನ್ನು ಕೇಳಿದಾಗ ಸ್ವಾಮಿಜಿಗೆ ಆದ ಕೋಪವನ್ನು ನಾನು ಮರೆಯುವಂತೆ ಇಲ್ಲ. "ಇದು ಸತ್ಯವಲ್ಲ. ಯಾರೂ ಮತ್ತೊಬ್ಬರ ನರಮಾಂಸ ಭಕ್ಷಣ ಮಾಡಲಿಲ್ಲ. ಕೆಲವುವೇಳೆ ದ್ವೇಷದಿಂದಲೋ ಅಥವಾ ಕೆಲವು ಧರ್ಮಾಚಾರದೃಷ್ಟಿಯಿಂದಲೋ ಅವರು ತಿಂದಿರಬೇಕು. ನಿನಗೆ ಗೊತ್ತಾಗುವುದಿಲ್ಲವೆ? ಇದು ಸಮುದಾಯ ಜೀವಿಗಳ ಲಕ್ಷಣವಲ್ಲ. ಈ ನಡತೆ ಆ ಸಮಾಜಕ್ಕೆ ಕುಠಾರಪ್ರಾಯವಾಗುವುದು. ಕ್ರೆಪೋಟ್‌ಕಿನ್ ಎಂಬುವನು ಬರೆದ ಪರಸ್ಪರ ಸಹಾಯ ಎಂಬ ಪುಸ್ತಕ ಆಗ ಇನ್ನೂ ಬಂದಿರಲಿಲ್ಲ. ಸ್ವಾಮಿಜಿಯಲ್ಲಿದ್ದ ಮಾನವ ಪ್ರೇಮ ಮತ್ತು ಪ್ರತಿಯೊಬ್ಬರನ್ನೂ ಅವರವರ ದೃಷ್ಟಿಯಿಂದ ಅಳೆಯುವಂತಹ ಶಕ್ತಿಯಿಂದಲೆ ಅವರು ಇಷ್ಟು ಸ್ಪಷ್ಟವಾಗಿ ವಿಷಯವನ್ನು ನೋಡಬಲ್ಲವರಾಗಿದ್ದರು.

ಮತ್ತೊಮ್ಮೆ ಧಾರ್ಮಿಕಭಾವನೆ ಕುರಿತು ಮಾತನಾಡುವಾಗ ಹೀಗೆ ಹೇಳಿದರು: "ಕಾಮ ಮತ್ತು ಪ್ರಜೋತ್ಪತ್ತಿಯೇ ಹಲವು ಧರ್ಮಗಳ ಮೂಲದಲ್ಲಿರುವುದು. ಇದನ್ನೆ ಇಂಡಿಯಾದೇಶದಲ್ಲಿ ವೈಷ್ಣವರೆಂದು, ಪಾಶ್ಚಾತ್ಯರಲ್ಲಿ ಕ್ರೈಸ್ತರೆಂದು ಕರೆಯುವರು. ಕಾಳಿಯನ್ನು ಎಂದರೆ ಮೃತ್ಯುವನ್ನು ಆರಾಧಿಸಲು ಎಷ್ಟು ಜನಕ್ಕೆ ಧೈರ್ಯವಿದೆ? ರೌದ್ರಕ್ಕಾಗಿ ಆಲಂಗಿಸುವ. ಅದರ ಉಗ್ರತೆ ಕಡಿಮೆಯಾಗಬೇಕೆಂದು ಕೇಳದೆ ಇರುವ. ದುಃಖವನ್ನು ದುಃಖಕ್ಕಾಗಿ ಸ್ವೀಕರಿಸೋಣ."

ನದಿಯ ನೀರು ಸಮುದ್ರದ ನೀರನ್ನು ಸಂಧಿಸಿದಾಗ ಸಮುದ್ರವನ್ನು ಏತಕ್ಕೆ 'ಕಾಳಪಾನಿ' ಎನ್ನುವರು, ನದಿಯ ನೀರನ್ನು ಏತಕ್ಕೆ ಶುದ್ಧ ಜಲ ಎಂದು ಕರೆಯುತ್ತಾರೆ ಎಂಬುದು ಗೊತ್ತಾಯಿತು. ಹಿಂದೂಗಳಿಗೆ ಸಾಗರದ ಮೇಲಿರುವ ಗೌರವದಿಂದ ಅದನ್ನು ದಾಟಬಾರದು ಎಂದು ನಿಷೇಧಿಸಿ ಹಾಗೆ ದಾಟಿದವರನ್ನು ಬಹಳ ಶತಮಾನಗಳವರೆಗೆ ಬಹಿಷ್ಕರಿಸಿದರು. ಹಡಗು ಪ್ರಥಮಬಾರಿ ಸಮುದ್ರದ ಜಲಕ್ಕೆ ಪ್ರವೇಶಿಸಿದಾಗ ಸ್ವಾಮಿಜಿ ಅವರು "ನಮೋ ಶಿವಾಯ, ನಮೋ ಶಿವಾಯ, ತ್ಯಾಗಭೂಮಿಯಿಂದ ಭೋಗ ಭೂಮಿಗೆ ಹೋಗುತ್ತಿರುವೆ" ಎಂದರು.

ಯಾರು ಮಹಾಪುರುಷರಾಗಲು ಯತ್ನಿಸುವರೋ ಅವರು ವ್ಯಥೆ ಪಡಲೇ ಬೇಕಾಗುವುದು ಎಂದರು. ಕೆಲವರಿಗಂತೂ ಅವರ ಪ್ರತಿಯೊಂದು ಸುಖವೂ ಉರಿದು ಬೂದಿಯಾಗುವುದು. ಜೀವನವೆಲ್ಲ ಒಂದು ಹಂಸಗೀತೆ. ನೋಡು, ಕೆಳಗೆ ಬರುವ ವಾಕ್ಯಗಳನ್ನು ಎಂದಿಗೂ ಮರೆಯಬೇಡ ಎಂದರು. "ಸಿಂಹವನ್ನು ಕೆಣಕಿದಾಗ ಅರ್ಭಟಿಸುವುದು. ತಲೆಯ ಮೇಲೆ ಹೊಡೆದಾಗ ನಾಗರಹಾವು ತಲೆ ಎತ್ತುವುದು. ಅದರಂತೆಯೆ ಹೃದಯದ ಅಂತರಾಳವನ್ನೆಲ್ಲಾ ಬಗೆಯುವಂತೆ ಮಾನವ ವ್ಯಥೆಪಟ್ಟಾಗ ಮಾನವನ ಆತ್ಮ ಪ್ರಜ್ವಲಿಸುವುದು."

ಒಮ್ಮೆ ಅಸಾಧಾರಣ ಸಹನೆಯಿಂದ ಪ್ರಶ್ನೆಗೆ ಉತ್ತರವೀಯುವರು. ಚರಿತ್ರೆ ಮತ್ತು ಸಾಹಿತ್ಯದ ಊಹೆಗಳನ್ನು ಕುರಿತು ಮತ್ತೊಮ್ಮೆ ಮಾತನಾಡುವರು. ಹಿಂದೂದೇಶದ ಚರಿತ್ರೆಯನ್ನು ತಿಳಿದುಕೊಳ್ಳಬೇಕಾದರೆ ಬೌದ್ಧರ ಕಾಲ ಅತಿ ಮುಖ್ಯವೆಂದು ಪದೇಪದೇ ಹೇಳುತ್ತಿದ್ದರು.

ಬೌದ್ಧ ಧರ್ಮದ ಮೂರು ಕಾಲವನ್ನು ಅವರು ಹೀಗೆ ವಿವರಿಸುತ್ತಿದ್ದರು. "ಐನೂರು ವರುಷಗಳು ಧರ್ಮ, ಐನೂರು ವರುಷಗಳು ವಿಗ್ರಹ,

ಐನೂರು ವರುಷಗಳು ತಂತ್ರ''. ಭರತಖಂಡದಲ್ಲಿ ಎಂದಿಗೂ ಬೌದ್ಧ ಧರ್ಮವೆಂಬ ಬೇರೆ ಧರ್ಮವಾಗಲೀ ಅವರಿಗೇ ಸಂಬಂಧಪಟ್ಟ ದೇವಸ್ಥಾನ ಮತ್ತು ಪುರೋಹಿತರು ಇದ್ದರೆಂದು ನೀನು ಭಾವಿಸಬಾರದು. ಒಂದು ಸಮಯದಲ್ಲಿ ಬುದ್ಧನ ಪ್ರಭಾವ ಬಹಳ ಹೆಚ್ಚಾಗಿತ್ತು. ಆಗ ದೇಶದಲ್ಲಿ ಸನ್ಯಾಸಿಗಳು ಹೆಚ್ಚಾದರು. ಕಾಶ್ಮೀರದಲ್ಲಿ ಪೂಜಿಸುತ್ತಿದ್ದ ಸರ್ಪಗಳೇ ಬೌದ್ಧ ಧರ್ಮದಲ್ಲಿ ಮಹಾತ್ಮರುಗಳಾಗಿರುವರು ಎಂಬುದನ್ನು ವಿವರಿಸಿದರು.

ಸೋಮಬಳ್ಳಿಯ ವಿಷಯವಾಗಿ ಅವರು ಮಾತನಾಡತೊಡಗಿದರು. ಹಿಮಾಲಯದ ಕಾಲವಾದ ಮೇಲೆ ಒಂದು ಸಾವಿರ ವರುಷಗಳವರೆಗೆ ಈ ಬಳ್ಳಿಯನ್ನು ಪ್ರತಿವರುಷವೂ ಪ್ರತಿಯೊಂದು ಹಳ್ಳಿಯಲ್ಲಿಯೂ ಒಬ್ಬ ದೊರೆಯನ್ನು ಸ್ವಾಗತಿಸುವಂತೆ ಬರಮಾಡಿಕೊಳ್ಳುತ್ತಿದ್ದರು. ಒಂದು ಗೊತ್ತಾದ ದಿನದಲ್ಲಿ ಅದನ್ನು ಊರಿನವರೆಲ್ಲ ಹೋಗಿ ಸಂಭ್ರಮದಿಂದ ತೆಗೆದುಕೊಂಡು ಬರುತ್ತಿದ್ದರು. ಈಗ ಆ ಬಳ್ಳಿಯನ್ನು ಕಂಡು ಹಿಡಿಯು ವುದಕ್ಕೇ ಆಗದಾಗಿದೆ ಎಂದರು.

ಮತ್ತೊಂದು ದಿನ ಶೇರ್‌ಷಾ ವಿಚಾರ ಮಾತನಾಡುತ್ತಿದ್ದರು. ಹುಮಾಯೂನನ ಆಳ್ವಿಕೆಯ ಕಾಲದಲ್ಲಿ ಮಧ್ಯೆ ಮೂವತ್ತು ವರುಷಗಳು ಬರುತ್ತಾನೆ. ಸ್ವಾಮಿಜಿ ಎಷ್ಟು ಸಂತೋಷದಿಂದ ಈ ವಿಷಯವನ್ನು ಎತ್ತಿದರು ಎಂದು ನನಗೆ ಈಗಲೂ ಜ್ಞಾಪಕವಿದೆ. ''ಒಮ್ಮೆ ಅವನು ಹುಡುಗನಾಗಿದ್ದಾಗ ಬಂಗಾಳದ ರಸ್ತೆಗಳಲ್ಲಿ ಅಲೆದಾಡುತ್ತಿದ್ದನು'' ಎಂದರು. ಚಿತ್ತಗಾಂಗ್‌ನಿಂದ ಪೆಷಾವರ್‌ವರೆಗೆ ಇರುವ ಗ್ರಾಂಡ್ ಟ್ರಂಕ್ ರೋಡ್, ಅಂಚೆಯ ಇಲಾಖೆ, ಸರ್ಕಾರದ ಬ್ಯಾಂಕ್ ಇವುಗಳೆಲ್ಲ ಅವನ ಕೆಲಸ. ಅನಂತರ ಸ್ವಲ್ಪಹೊತ್ತು ಮೌನವಾಗಿದ್ದರು. ಅನಂತರ ಗುರು ಗೀತದಿಂದ ಕೆಲವು ಶ್ಲೋಕಗಳನ್ನು ಉದಹರಿಸತೊಡಗಿದರು :

ಗುರುಬ್ರಹ್ಮ ಗುರುವಿಷ್ಣು ಗುರುರ್ದೇವೋ ಮಹೇಶ್ವರಃ
ಗುರುರೇವ ಪರಂ ಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ
ಗುರುರಾದಿ ರನಾದಿಶ್ಚ ಗುರುಃ ಪರಮದೈವತಂ
ಗುರೋಃ ಪರತರಂ ನಾಸ್ತಿ ತಸ್ಮೈ ಶ್ರೀ ಗುರುವೇ ನಮಃ

ಅವರ ಮನಸ್ಸಿನಲ್ಲಿ ಮೂಡಿದ ಯಾವುದೋ ಭಾವನೆಗಳನ್ನು ಅವಲೋಕಿಸುತ್ತಿದ್ದರು. ಅದಕ್ಕಾಗಿ ಮೇಲಿನ ಶ್ಲೋಕವೆಂದು ಕಾಣುವುದು. ಒಂದೆರಡು ನಿಮಿಷಗಳಾದ ಮೇಲೆ ಪುನಃ ಹೀಗೆ ಹೇಳಿದರು: ''ಹೌದು

ಬುದ್ಧ ಹೇಳಿದ್ದು ನಿಜ. ಕರ್ಮದಲ್ಲಿರುವವರೆಗೆ ಕಾರ್ಯಕಾರಣಗಳು ಇದ್ದೇ ತೀರಬೇಕು. ನಾನೆಂಬ ಭಾವನೆ ಭ್ರಾಂತಿಯಲ್ಲದೇ ಬೇರಲ್ಲ.'' ಮಾರನೆ ದಿನ ಅವರು ಕುರ್ಚಿಯಲ್ಲಿ ಕುಳಿತುಕೊಂಡು ತೂಕಡಿಸುತ್ತಿದ್ದರು ಎಂದು ಕಾಣುವುದು. ಆಗ ಇದ್ದಕ್ಕಿ ಇದ್ದಂತೆಯೇ ಹೀಗೆ ಹೇಳಿದರು: ''ಒಂದು ಜನ್ಮದ ನೆನಪೇ ಕೋಟ್ಯಂತರ ವರುಷಗಳ ಸೆರೆಮನೆಯವಾಸದಂತೆ ಇದೆ. ಇದು ಸಾಲದೆ ಹಲವು ಜನ್ಮಗಳನ್ನು ಜ್ಞಾಪಿಸಿಕೊಳ್ಳಲು ಯತ್ನಿಸುವರು. ಈಗಿರುವ ಹೊರೆಯೇ ಸಾಕಾಗಿದೆ.''

ಮತ್ತೊಂದು ದಿನ ಮಧ್ಯಾಹ್ನದ ಊಟಕ್ಕೆ ಮುಂಚೆ ಅವರನ್ನು ಕಂಡಾಗ ಸ್ವಾಮಿಜಿ ಈ ವಿಷಯವನ್ನು ಎತ್ತಿ ಅದರಲ್ಲೆ ನಿರತರಾದರು. ''ನಾನೀಗ ತಾನೆ ತುರಿಯಾನಂದರೊಡನೆ ಸಂಪ್ರದಾಯಬದ್ಧರು ಮತ್ತು ಪ್ರಗತಿಪರ ಉದಾರಬುದ್ಧಿಯ ಸ್ವಭಾವದವರು ಇವರನ್ನು ಕುರಿತು ಮಾತನಾಡುತ್ತಿದ್ದೆ'' ಎಂದರು.

''ಸಂಪ್ರದಾಯಬದ್ಧನ ಗುರಿಯೆಲ್ಲ ಆಶ್ರಿತನಾಗುವುದು. ನಿಮ್ಮದು ಹೋರಾಟ. ಆದಕಾರಣ ನಾವು ಜೀವನವನ್ನು ಅನುಭವಿಸುವವರು, ನೀವಲ್ಲ. ನೀವು ಯಾವಾಗಲೂ ಉತ್ತಮ ಆದರ್ಶಕ್ಕಾಗಿ ಹೋರಾಡುತ್ತಿರುವಿರಿ. ಆದರ್ಶದ ಕೋಟಿಯಲ್ಲಿ ಒಂದು ಪಾಲಿನಷ್ಟು ಕಾರ್ಯಗತವಾಗುವುದರೊಳಗೆ ನಿಮಗೆ ಮೃತ್ಯುಕರೆ ಬರುವುದು. ಪಾಶ್ಚಾತ್ಯರ ಆದರ್ಶ ಹೋರಾಟ, ಪೌರಾತ್ಯನ ಆದರ್ಶ ಸಹಿಷ್ಣುತೆ. ಪೂರ್ಣಜೀವನ ಇವೆರಡರ ಸಾಮರಸ್ಯ. ಆದರೆ ಇದು ಎಂದಿಗೂ ಸಾಧ್ಯವಿಲ್ಲ.

''ನಮ್ಮ ಧರ್ಮದಲ್ಲಿ ಮನುಷ್ಯನಿಗೆ ಏನೇನು ಬೇಕೊ ಅದೆಲ್ಲ ದೊರಕಲಾರದು ಎಂದು ಒಪ್ಪಿಕೊಳ್ಳುತ್ತೇವೆ. ಜೀವನದಲ್ಲಿ ನಾವು ಎಷ್ಟೋ ಆಸೆಗಳನ್ನು ನಿಗ್ರಹಿಸಬೇಕಾಗಿದೆ. ಇದೇನೋ ಭಯಾನಕ. ಆದರೂ ಈ ಆದರ್ಶದ ಒಳ್ಳೆಯ ಮತ್ತು ಕೆಟ್ಟ ವಿಷಯಗಳು ಚೆನ್ನಾಗಿ ವ್ಯಕ್ತವಾಗುತ್ತವೆ. ನಮ್ಮ ಪ್ರಗತಿಪರರು ಇರುವ ಲೋಪದೋಷಗಳನ್ನು ಮಾತ್ರ ನೋಡುತ್ತಾರೆ. ಅದನ್ನು ನಿರ್ಮೂಲಮಾಡಲು ಯತ್ನಿಸುವರು. ಆದರೆ ಅವರು ಅದರ ಬದಲು ತರುವುದು ಹಿಂದಿನಷ್ಟೇ ಹೀನವಾಗಿರುವುದು. ಹೊಸ ಭಾವನೆಗಳು ಸಮಾಜದಲ್ಲಿ ಹರಡಿ ಫಲಕಾರಿಯಾಗಬೇಕಾದರೆ ಹಳೆಯದರಷ್ಟೇ ಸಮಯ ತೆಗೆದುಕೊಳ್ಳುವುದು.

ಬದಲಾವಣೆಯಿಂದ ನಮ್ಮ ಇಚ್ಛಾ ಶಕ್ತಿ ಬಲವಾಗುವುದಿಲ್ಲ. ಅದ

ರಿಂದ ದುರ್ಬಲವಾಗಿ ಅದಕ್ಕೆ ಅಡಿಯಾಳಾಗುವುದು. ಆದರೆ ನಾವು ಯಾವಾಗಲೂ ಹೊಸಹೊಸ ಭಾವನೆಗಳನ್ನು ಹೀರುತ್ತಿರಬೇಕು. ನಮ್ಮ ಇಚ್ಛಾ ಶಕ್ತಿ ಹೀರಿಕೊಳ್ಳುವುದರಿಂದ ಬಲವಾಗುವುದು. ನಮಗೆ ಗೊತ್ತಿರಲಿ ಇಲ್ಲದೆ ಇರಲಿ, ನಾವು ಪ್ರಪಂಚದಲ್ಲಿ ಮೆಚ್ಚುವುದು ಈ ಇಚ್ಛಾಶಕ್ತಿಯನ್ನು. ಪ್ರಪಂಚದ ದೃಷ್ಟಿಯಲ್ಲಿ ಸತಿ ಮಹತ್ವವಾದುದು. ಏಕೆಂದರೆ ಇಲ್ಲಿ ಅದ್ಭುತವಾದ ಇಚ್ಛಾಶಕ್ತಿಯ ಆವಿರ್ಭಾವವಿದೆ.

"ನಾವು ನಿರ್ಮೂಲಮಾಡಬೇಕಾಗಿರುವುದು ಸ್ವಾರ್ಥತೆಯನ್ನು. ನಾನು ಎಂದಾದರೂ ತಪ್ಪುಮಾಡಿದ್ದರೆ ಅದಕ್ಕೆ ಕಾರಣ ಸ್ವಾರ್ಥ. ಎಲ್ಲಿ ಸ್ವಾರ್ಥ ಇಲ್ಲವೊ ಅಲ್ಲಿ ನನ್ನ ತೀರ್ಪು ಯಾವಾಗಲೂ ಸರಿಯಾಗಿತ್ತು.

"ಈ ಸ್ವಾರ್ಥ ಇಲ್ಲದೇ ಇದ್ದರೆ ಯಾವ ಧರ್ಮವೂ ಇರುತ್ತಿರಲಿಲ್ಲ. ಮನುಷ್ಯನಿಗೆ ಏನೂ ಬೇಡದೆ ಇದ್ದರೆ ಈ ಪೂಜೆ ಪ್ರಾರ್ಥನೆ ಇವುಗಳನ್ನೆಲ್ಲ ಮಾಡುತ್ತಿದ್ದನೇನು? ಏತಕ್ಕೆ, ಅವನು ದೇವರನ್ನೇ ಚಿಂತಿಸುತ್ತಿರಲಿಲ್ಲ. ಯಾವಾಗಲಾದರೊಮ್ಮೆ ಸುಂದರದೃಶ್ಯವನ್ನು ನೋಡಿದಾಗ ಅದರ ಸೃಷ್ಟಿ ಕರ್ತನನ್ನು ಸ್ವಲ್ಪ ಹೊಗಳುತ್ತಿದ್ದನು. ಇದೊಂದೇ ನಮ್ಮ ಆದರ್ಶವಾಗಿರ ಬೇಕು. ಎಲ್ಲವೂ ಸ್ತೋತ್ರವಾಗುವುದು, ಧನ್ಯವಾಗುವುದು. ನಾವು ಸ್ವಾರ್ಥದಿಂದ ಪಾರಾಗಲು ಸಾಧ್ಯವಾದರೆ!

"ಹೋರಾಟ ಜೀವನದ ಚಿಹ್ನೆ ಎಂದು ತಿಳಿದುಕೊಂಡರೆ ಅದು ತಪ್ಪು. ಅದು ಹಾಗಲ್ಲ. ಹೀರಿಕೊಳ್ಳುವುದು ಜೀವನದ ಚಿಹ್ನೆ. ಹಿಂದೂಧರ್ಮ ಇತರರಿಂದ ಒಳ್ಳೆಯದನ್ನು ಕಲಿತುಕೊಳ್ಳುವುದರಲ್ಲಿ ಬಹಳ ಪ್ರಖ್ಯಾತವಾಗಿದೆ. ನಮ್ಮದೃಷ್ಟಿ ಹೋರಾಟದ ಕಡೆಗೆ ಇಲ್ಲವೇ ಇಲ್ಲ. ಹೌದು, ಕೆಲವುವೇಳೆ ಸ್ವದೇಶ ರಕ್ಷಣೆಗಾಗಿ ವೈರಿಗಳನ್ನು ಸದೆಬಡಿದಿರು ವೆವು. ಇದು ಧರ್ಮ. ಆದರೆ ಬರೀ ಹೋರಾಟಕ್ಕೆ ನಾವು ಎಂದಿಗೂ ಕಾಲುಕೆರೆಯುತ್ತಿರಲಿಲ್ಲ. ಪ್ರತಿಯೊಬ್ಬರೂ ಇದನ್ನು ಕಲಿಯಬೇಕಾಗಿದೆ. ಈಗತಾನೆ ಹೊಸದಾಗಿ ಬಂದ ಜನಾಂಗಗಳು ಸ್ವಲ್ಪಕಾಲ ಮೆರೆದಾಡಲಿ. ಕೊನೆಗೆ ಇವುಗಳೆಲ್ಲ ಹಿಂದೂಧರ್ಮದ ಪಾಲಾಗುವುವು."

ತಮ್ಮ ಧರ್ಮವನ್ನಾಗಲಿ ಮಾತೃಭೂಮಿಯನ್ನಾಗಲಿ ಎಂದಿಗೂ ಅವರು ಆಶ್ರಿತಸ್ಥಾನದಲ್ಲಿ ನೋಡುತ್ತಿರಲಿಲ್ಲ. ಕೆಲವು ವೇಳೆ ಯಾವು ದಾದರೂ ಕೆಲಸವನ್ನು ಕುರಿತು ಮಾತನಾಡುತ್ತಿದ್ದಾಗ ವ್ಯಂಗವಾಗಿ "ಐರೋಪ್ಯ ಸ್ತ್ರೀಪುರುಷರು ಭರತಖಂಡದಲ್ಲಿ ಕೆಲಸಮಾಡಬೇಕಾದರೆ

ಅವರು ಕಪ್ಪು ಮನುಷ್ಯರ ಕೆಳಗೆ ಕೆಲಸ ಮಾಡಬೇಕು. ಹೌದು, ಹೀಗೆಯೇ ಅವರು ಇರಬೇಕು" ಎನ್ನುತ್ತಿದ್ದರು.

ತಮ್ಮ ಜನಾಂಗ ಏನನ್ನು ಸಾದಿಸಿದೆ ಎಂಬುದನ್ನು ಕುರಿತು ಆಲೋಚಿಸತೊಡಗಿದರು. "ಆಗಲಿ, ಆಗಲಿ, ಮತ್ತಾವ ಜನಾಂಗವೂ ಸಾಧಿಸದ ಒಂದನ್ನು ನಾವು ಸಾಧಿಸಿರುವೆವು. ಇಡೀ ದೇಶದವರನ್ನ ಒಂದೆರಡು ಭಾವನೆಗಳನ್ನು ಒಪ್ಪಿಕೊಳ್ಳುವಂತೆ ಮಾಡಿರುವೆವು. ಉದಾ ಹರಣೆಗೆ, ದನದ ಮಾಂಸ ನಿಷೇಧ. ಯಾವ ಹಿಂದೂಗಳೂ ಅದನ್ನು ತಿನ್ನುವು ದಿಲ್ಲ. ಇಧು ಐರೋಪ್ಯರು ಬೆಕ್ಕಿನ ಮಾಂಸವನ್ನು ತಿನ್ನದೆ ಇರುವಂತೆ ಅಲ್ಲ. ಏಕೆಂದರೆ ಹಿಂದೆ ಒಂದು ಕಾಲದಲ್ಲಿ ದನದ ಮಾಂಸವನ್ನು ಇಡೀ ದೇಶವೇ ತಿನ್ನುತ್ತಿತ್ತು."

ಸ್ವಾಮಿಜಿಗಳ ವಿರೋಧಿಗಳೊಬ್ಬರನ್ನು ಕುರಿತು ಅವರು ತಮ್ಮ ಪಂಗಡವನ್ನು ದೇಶದ ಹಿತಕ್ಕಿಂತ ಮೇಲೆಣಿಸುವರು ಎಂದೆನು. ಸ್ವಾಮಿಜಿ ಅವರು ಸಂತೋಷದಿಂದ "ಹೌದು, ಏಷ್ಯಾ ಜನಾಂಗದ ರೀತಿಯೇ ಇದು. ಇದು ತುಂಬಾ ಚೆನ್ನಾಗಿದೆ. ಆದರೆ ಆ ಮನುಷ್ಯನಿಗೆ ತಾಳ್ಮೆಯಾಗಲಿ, ಮುಂದಾಲೋಚನೆಯಾಗಲಿ ಇಲ್ಲ, ಅಷ್ಟೆ" ಎಂದರು. ಅನಂತರ ಕಾಳಿ ಯನ್ನು ಕುರಿತು ಹೀಗೆ ಹಾಡತೊಡಗಿದರು: "ನಾನು ನಿನ್ನ ಕೊರಳಿಗೆ ರುಂಡಮಾಲೆಯನ್ನು ಹಾಕಿ ಅಂಜಿಕೆಯಿಂದ ಹಿಂದೆ ಸರಿದು ತಾಯಿ ದಯಾ ಮಯಿ ಎಂದು ಗೋಗರೆಯುವವನಲ್ಲ. ಹೃದಯ ಶ್ಮಶಾನಸದೃಶ್ಯವಾಗ ಬೇಕು. ಅಹಂಕಾರ ಸ್ವಾರ್ಥ ಆಸೆ ಆಕಾಂಕ್ಷೆಗಳೆಲ್ಲ ಚೂರ್ಣೀಭೂತ ವಾಗಬೇಕು. ಆಗ ಮಾತ್ರ ತಾಯಿ ಅಲ್ಲಿ ತಾಂಡವಾಡುವಳು."

"ನಾನು ರೌದ್ರವನ್ನು ರೌದ್ರಕ್ಕಾಗಿ ಪ್ರೀತಿಸುತ್ತೇನೆ" ಎಂದು ಹೇಳ ತೊಡಗಿದರು. "ನಿರಾಶೆಯನ್ನು ನಿರಾಶೆಗಾಗಿ ದುಃಖವನ್ನು ದುಃಖಕ್ಕಾಗಿ ಪ್ರೀತಿಸುತ್ತೇನೆ. ಹೋರಾಡಿ, ಸತತ ಹೋರಾಡಿ. ಸೋಲುತ್ತಿದ್ದರೂ ಹೋರಾಡಿ. ಅದೇ ಆದರ್ಶ, ಅದೇ ಆದರ್ಶ."

"ಎಲ್ಲಾ ಜೀವಿಗಳ ಮೊತ್ತವೇ ಈಶ್ವರ. ಸಮಷ್ಟಿಯ ಇಚ್ಛೆಯನ್ನು ಯಾರೂ ಧಿಃಕರಿಸಲಾರರು. ಇದನ್ನೇ ನಾವು ಋತ ಎನ್ನುವುದು. ಇದನ್ನೇ ನಾವು ಶಿವ, ಶಕ್ತಿ, ಕಾಳಿ ಎನ್ನುವುದು."

ಪ್ರಪಂಚದ ಸುಂದರತರ ದೃಶ್ಯಗಳ ಸಾನ್ನಿಧ್ಯದಲ್ಲಿ ಸ್ವಾಮಿಜಿಯವರ ವಾಣಿಯನ್ನು ಆಲಿಸಿದ ಮೇಲೆ ಅವು ಸುಂದರತಮವಾಗಿವೆ.

ನಾವು ಸಿಸಲಿಯನ್ನು ಸಮೀಪಿಸಿದಾಗ ಕತ್ತಲಾಗಿತ್ತು. ಪಶ್ಚಿಮ ದಿಗಂತಕ್ಕೆ ಅಭಿಮುಖವಾಗಿದ್ದ ಎಟ್ನ ಜ್ವಾಲಾಮುಖಿ ಸ್ವಲ್ಪ ಕೆರಳಿತ್ತು. ನಾವು ಮೆಸ್ಸೀನ ಜಲಸಂಧಿಯನ್ನು ಪ್ರವೇಶಿಸಿದ ಮೇಲೆ ಚಂದ್ರೋದಯ ವಾಯಿತು. ನಾನು ಸ್ವಾಮಿಜಿ ಜೊತೆಯಲ್ಲಿ ಡೆಕ್ಕಿನಮೇಲೆ ಸಂಚಾರ ಮಾಡುತ್ತಿದ್ದೆ. ಆಗ ಸ್ವಾಮಿಜಿ ಸೌಂದರ್ಯವೆಂಬುದು ಹೊರಗಿಲ್ಲ, ಅದು ಅಂತರ್ಯದ ವಸ್ತು ಎಂಬುದನ್ನು ವಿವರಿಸುತ್ತಿದ್ದರು. ಒಂದು ಕಡೆ ಇಟಲಿ ಕರಾವಳಿಯತೀರ ಕೋಪದಿಂದ ಮುನಿಸಿಕೊಂಡಂತೆ ಕಪ್ಪಾಗಿತ್ತು. ಮತ್ತೊಂದುಕಡೆ ಇದ್ದ ದ್ವೀಪ ಚಂದ್ರಮನ ಸ್ನಿಗ್ಧ ಕಾಂತಿಯಲ್ಲಿ ಬೆಳಗುತ್ತಿತ್ತು. "ಮೆಸ್ಸಿನ ನನಗೆ ವಂದಿಸಬೇಕು. ಏಕೆಂದರೆ ನಾನೆ ಇದಕ್ಕೆ ಸೌಂದರ್ಯವನ್ನು ಕೊಡುವವನು" ಎಂದರು ಸ್ವಾಮಿಜಿ.

ಅನಂತರ ಸ್ವಾಮಿಜಿ ತಮ್ಮ ಬಾಲ್ಯದಲ್ಲಿ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಉತ್ಕಟಾಕಾಂಕ್ಷೆಯನ್ನು ಕುರಿತು ಹೇಳತೊಡಗಿದರು. ಸೂರ್ಯೋದಯಕ್ಕೆ ಮುಂಚೆ ಯಾವುದಾದರೂ ಶಾಸ್ತ್ರವನ್ನು ಪಾರಾಯಣ ಮಾಡಲು ಪ್ರಾರಂಭಿಸಿ ದಿನವೆಲ್ಲ ಅದರಲ್ಲೆ ಉದ್ಯುಕ್ತರಾಗಿರುತ್ತಿದ್ದರು. ತಪಸ್ಯ ಎಂದರೆ ಏನು ಎಂದು ಕೇಳಿದಾಗ ಹಿಂದಿನಕಾಲದ ಒಂದು ವ್ರತವನ್ನು ಹೇಳಿದರು. ನಾಲ್ಕು ಕಡೆಯೂ ಬೆಂಕಿ ಹಚ್ಚಿ ಕಾಯುತ್ತಿರುವ ಸೂರ್ಯನ ಕೆಳಗೆ ಕುಳಿತು ಧ್ಯಾನಮಾಡುವ ಪಂಚತಪವನ್ನು ವಿವರಿಸಿದರು. "ರೌದ್ರೋಪಾಸಕರಾಗಿ, ಮೃತ್ಯುವನ್ನು ಆರಾಧಿಸಿ. ಉಳಿದವೆಲ್ಲ ವ್ಯರ್ಥ; ಉಳಿದ ಹೋರಾಟವೆಲ್ಲ ವ್ಯರ್ಥ. ಇದೇ ಪರಮನೀತಿ. ಆದರೂ ಇದು ಹೇಡಿಯ ಮೃತ್ಯು ಪ್ರೇಮವಲ್ಲ, ದುರ್ಬಲನ ಹತ್ಯಾಕಾಂಕ್ಷಿಯ ಮೃತ್ಯುಪ್ರೇಮವಲ್ಲ. ಇದು ಧೀರಾಧಿ ಧೀರನ ಮೃತ್ಯುಸ್ವಾಗತ. ಪ್ರಪಂಚದಲ್ಲಿ ಪ್ರತಿಯೊಂದು ವಸ್ತುವನ್ನೂ ಆದ್ಯಂತವಾಗಿ ವಿಮರ್ಶಿಸಿ ಇನ್ನು ಬೇರೆ ವಿಧಿಯೇ ಇಲ್ಲ ಎಂದು ಅರಿತವನ ಆಲಿಂಗನ ಮೃತ್ಯುಪ್ರೇಮ."

೧೩

## ಮಹಾಪುರುಷರ ಸ್ಮೃತಿ ಚಿತ್ರಗಳು

ಸ್ವಾಮಿಜಿಯವರು ತಾವು ಕಂಡ ಮಹಾಪುರುಷರ ವಿಷಯವಾಗಿ ಒಂದು ದಿನ ಮಾತನಾಡಿದರು. ವಿಷಯ ಬಹುಶಃ ನಾಗಮಹಾಶಯ ರಿಂದ ಪ್ರಾರಂಭವಾಗಿರಬಹುದು. ಕೆಲವು ವಾರಗಳ ಹಿಂದೆ ಅವರು ಕಲ್ಕತ್ತೆಯಲ್ಲಿ ಸ್ವಾಮಿಜಿಯವರ ದರ್ಶನಕ್ಕಾಗಿ ಬಂದರು. ನಾವು ಕಲ್ಕತ್ತೆ ಬಿಡುವುದಕ್ಕೆ ಒಂದೆರಡುದಿನಗಳಮುಂಚೆ ನಾಗಮಹಾಶಯರು ಕಾಲವಾಗಿದ್ದರು. ಹಡಗು ಇನ್ನೂ ನದಿಯಮೇಲೆ ಹೋಗುತ್ತಿದ್ದಾಗ ಅವರಿಗೆ ನಾಗಮಹಾಶಯರ ನಿಧನವಾರ್ತೆ ತಿಳಿಯಿತು. ನಾಗಮಹಾಶಯ ಶ್ರೀರಾಮಕೃಷ್ಣರ ಒಂದು ಶ್ರೇಷ್ಠತಮಕೃತಿ ಎಂದು ಪದೇಪದೇ ಹೇಳುತ್ತಿದ್ದರು. ಭಕ್ತಿಯ ಆವಶ್ಯಕಥೆಯನ್ನು ಕುರಿತು ಅವರು ಮಾತನಾಡುತ್ತಿದ್ದಾಗ ತನ್ನಂತಹ (ನಾಗಮಹಾಶಯರಂತಹ) ಭಕ್ತಿಹೀನನಾದ ಅಯೋಗ್ಯನ ದೇಹಕ್ಕೆ ಊಟವನ್ನು ಏತಕ್ಕೆ ಕೊಡಬೇಕೆಂದು ಅದಕ್ಕೆ ಆಹಾರವನ್ನೇ ಕೆಲವುದಿನಗಳು ಕೊಡಲಿಲ್ಲ. ಒಂದುದಿನ ಅವರ ಮನೆಗೆ ಅತಿಥಿ ಬಂದಾಗ ಅಡಿಗೆಮಾಡಲು ಸೌದೆ ಇಲ್ಲದಿರುವಾಗ ಅವರು ತಮ್ಮ ಮನೆಯ ಛಾವಣಿಯನ್ನೇ ಹೇಗೆ ಮುರಿದು ಒಲೆಗೆ ಹಾಕಿದರು ಎಂಬುದನ್ನು ಕುರಿತು ಹೇಳಿದರು.

ಶ್ರೀರಾಮಕೃಷ್ಣಪರಮಹಂಸರು ಸ್ಪರ್ಶಿಸಿದ ಯುವಕನ ಕಥೆಯನ್ನು ಅನಂತರ ಹೇಳಿದರೆಂದು ಕಾಣುವುದು. ಆ ಹುಡುಗ ಅನಂತರ "ನನ್ನ ಪ್ರಿಯತಮ, ನನ್ನ ಪ್ರಿಯತಮ" ಎಂದಲ್ಲದೆ ಮತ್ತೇನನ್ನೂ ಮಾತನಾಡಲಿಲ್ಲ. ಆತ ಹತ್ತುವರುಷ ಅನಂತರ ಬದುಕಿದ್ದ. ಆದರೆ ಮತ್ತೇನನ್ನೂ ಅವನು ಮಾತನಾಡಲಿಲ್ಲ.

ಶ್ರೀರಾಮಕೃಷ್ಣರ ಕಾಲದಲ್ಲಿ ಬಂದು ಹೋದವರಲ್ಲಿ ಇವರು ಸ್ಪರ್ಶಿಸಿದಾಗ ಸಮಾಧಿ ಪಡೆದ ಅನೇಕರ ಹೆಸರುಗಳು ಶ್ರೀರಾಮಕೃಷ್ಣರ ಸಂಘದ ಸನ್ಯಾಸಿಗಳಿಗೆ ಗೊತ್ತಿವೆ. ಅನೇಕವೇಳೆ ಈ ಘಟನೆಯಲ್ಲದೆ ಅವರ ಪೂರ್ವಾಪರ ವಿಚಾರಗಳಾವುದೂ ಗೊತ್ತಿಲ್ಲ. ಇದು ಒಬ್ಬ ಸ್ತ್ರೀಯ ವಿಷಯದಲ್ಲಿಂದು ಪ್ರಮುಖವಾಗಿದೆ. ಒಂದುದಿನ ಒಬ್ಬಾಕೆ ಗಾಡಿಯಲ್ಲಿ ದಕ್ಷಿಣೇಶ್ವರಕ್ಕೆ ಬಂದಳು. ಶ್ರೀರಾಮಕೃಷ್ಣರು ಇವರನ್ನು ನೋಡಿ

ದೊಡನೆಯೆ ಇವಳು ದೈವೀಶಕ್ತಿಯ ಅಂಶವೆಂದು ಗ್ರಹಿಸಿದರು. ಈ ಸ್ತ್ರೀ ಯನ್ನು ಜಗನ್ಮಾತೆಯಂತೆ ನೋಡಿ ಅವರಿಗೆ ನಮಸ್ಕರಿಸಿ ಪಾದಗಳಿಗೆ ಪುಷ್ಪ ವನ್ನು ಅರ್ಪಿಸಿ ಧೂಪವನ್ನು ನಿವಾಳಿಸಿದರು. ಆಕೆ ತಕ್ಷಣ ಗಾಢಸಮಾಧಿ ಸ್ಥಳಾದಳು. ಇದರಲ್ಲಿ ಆಶ್ಚರ್ಯವೇ ಇರಲಿಲ್ಲ. ಆಕೆಯನ್ನು ಪ್ರಕೃತಿಸ್ಥ ಳನ್ನಾಗಿ ಮಾಡಲು ಆಗಲೇ ಇಲ್ಲ. ಆಕೆಗೆ ಪ್ರಪಂಚದ ಮೇಲೆ ಪ್ರಜ್ಞೆ ಬಂದಾಗ ಎರಡು ಮೂರು ಗಂಟೆಗಳಾಗಿತ್ತು. ಆಕೆ ಪ್ರಪಂಚಕ್ಕೆ ಬಂದಾಗ ಅವಳ ಮುಖವೆಲ್ಲ ಅಮಲೇರಿದವಳಂತೆ ಭಾವಾವಿಷ್ಟಳಾಗಿ ಹೋಗಿದ್ದಳು. ಈಕೆಗೆ ಬಾಹ್ಯಜ್ಞಾನ ಬಂದಾಗ ಸುತ್ತಲಿದ್ದವರಿಗೆ ಸ್ವಲ್ಪ ಸಮಾಧಾನ ವಾಯಿತು. ಏಕೆಂದರೆ ಈಕೆಗೆ ಬೇಗ ಪ್ರಜ್ಞೆ ಬರದೇ ಇದ್ದರೆ ಇವರ ಮನೆ ಯವರಿಗೆ ಸ್ತ್ರೀಯ ಸಮಾಚಾರ ಗೊತ್ತಾಗದೆ ಎಲ್ಲಿ ವ್ಯಸ್ಥರಾಗುವರೋ ಎಂದು ಸುತ್ತಲಿದ್ದವರು ಭಾವಿಸುತ್ತಿದ್ದರು. ಈಕೆಗೆ ಪ್ರಜ್ಞೆ ಬಂದುದನ್ನು ನೋಡಿ ಎಲ್ಲರೂ ನಿಶ್ಚಿಂತರಾಗಿ ಆಕೆ ಹಿಂತಿರುಗಿ ಹೋಗುವುದಕ್ಕೆ ಸಹಾಯ ಮಾಡಿದರು. ಯಾರಿಗೂ ಅವಳ ಹೆಸರು, ಆಕೆ ಎಲ್ಲಿಂದ ಬರುವಳು ಎಂಬುದನ್ನು ಕೇಳಲು ಜ್ಞಾಪಕವೇ ಬರಲಿಲ್ಲ. ಶ್ರೀರಾಮಕೃಷ್ಣರು ಆರಾಧಿ ಸಿದ ಒಂದು ಆದರ್ಶ ಕೃಪಾಪೂರ್ಣಸತೀತ್ವ ಮತ್ತು ಮಾತೃತ್ವ ಎಂಬ ಘಟನೆ ಸಂಘದ ಸ್ಮೃತಿಯಲ್ಲಿ ಚಿರಮುದ್ರಿತವಾಗಿದೆ. ಶ್ರೀರಾಮಕೃಷ್ಣರೇ ಈಕೆಯನ್ನು ದೈವೀಶಕ್ತಿಯ ಅಂಶ ಎಂದು ಹೇಳಲಿಲ್ಲವೆ?

ನನಗೆ ಆಧ್ಯಾತ್ಮಿಕ ವಿಷಯಗಳು ಅಷ್ಟು ಪರಿಚಯವಿಲ್ಲದಾಗ ನನ್ನ ಮನಸ್ಸು ಪರಮಹಂಸರ ಪ್ರಭಾವಕ್ಕೆ ಸಿಕ್ಕಿದ ಮೇಲಿನಂತಹ ಅಪರೂಪ ನಿದರ್ಶನಗಳನ್ನು ಯೋಚಿಸತೊಡಗಿತು. ಇವು ದೂರದಲ್ಲಿ ತಮ್ಮದೇ ಪಥ ದಲ್ಲಿ ಸಂಚರಿಸುತ್ತಿರುವ ಬೆಳಗುವ ತಾರೆಗಳಂತೆ. ಅವು ನಮ್ಮ ವಾತಾ ವರಣಕ್ಕೆ ಪುನಃ ಬರುವಂತೆಯೇ ಇಲ್ಲ. ಇಂತಹ ಜೀವನಗಳಲ್ಲಿ ಕೂಡ ಹಲವು ವರುಷಗಳ ಹಿಂದೆ ಅವರು ಹಿಂದೆ ಪಡೆದ ಅನುಭವವನ್ನು ಮರೆತು ಬಿಡಲು ಸಾಧ್ಯವೆ? ಈಗ ನಾವು ಅವರ ವಿಷಯವನ್ನು ಕೇಳುವಂತೆ ಅವರ ಜೀವನದಲ್ಲಿ ಒಬ್ಬ ಮಹಾಪುರುಷನ ಸಾನ್ನಿಧ್ಯ ಮತ್ತು ಸ್ಪರ್ಶ ಯಾವುದೋ ಅತಿ ಹಿಂದಿನಕಾಲದ ಸ್ವಪ್ನದ ಒಂದು ಘಟನೆಯಂತೆ ಆಗಿರಬಹುದೆ? ನಾನು ಇಂತಹ ಅನುಭವಗಳಿಂದ ಆಗುವ ಪ್ರಯೋಜನವನ್ನೆಲ್ಲಾ ವಿಮರ್ಶೆ ಮಾಡಬೇಕೆಂದು ಇದ್ದೆ. ಆದರೆ ಇಡೀ ಹಿಂದೂ ಜನಾಂಗ ಇಂತಹ ಅನುಭವಕ್ಕೆ ಅದ್ಭುತವಾದ ಬೆಲೆಯನ್ನು ಇತ್ತಿದೆ ಎಂಬುದು ಆಗ ನನಗೆ

ಅರಿವಾಗಲಿಲ್ಲ. ಸ್ವಾಮಿಜಿಗೆ ನನ್ನ ಸಮಸ್ಯೆ ಸರಿಯಾಗಿ ಗೊತ್ತಾಗಲಿಲ್ಲ. ಸ್ವಾಮಿಜಿ "ಶ್ರೀರಾಮಕೃಷ್ಣರು ಮತ್ತೊಂದು ಜೀವವನ್ನು ಮುಟ್ಟುವುದೇನೊ ಹಾಸ್ಯ ಎಂದುಕೊಂಡೆಯಾ? ಅವರಿಗೆ ಕ್ಷಣಕಾಲ ಇಂತಹ ಸಂಪರ್ಕ ಸಿಕ್ಕಿದರೂ ಶ್ರೀರಾಮಕೃಷ್ಣರು ಅಂತಹವರನ್ನು ಹೊಸ ಮನುಷ್ಯರನ್ನಾಗಿ ಮಾಡಿಬಿಡುತ್ತಿದ್ದರು" ಎಂದರು. ಅನಂತರ ಹಲವು ಶಿಷ್ಯರ ಕಥೆಗಳನ್ನು ಒಂದಾದಮೇಲೊಂದು ಹೇಳುತ್ತಿದ್ದರು. ಒಬ್ಬ ಶಿಷ್ಯ ಪದೇ ಪದೇ ಬರುತ್ತಿದ್ದ. ಶ್ರೀರಾಮಕೃಷ್ಣರನ್ನು ಅರಿಯಲು ಪ್ರಯತ್ನಪಡುತ್ತಿದ್ದ. ಶ್ರೀರಾಮಕೃಷ್ಣರು ಅವನನ್ನು ನೋಡಿ "ಹೋಗು ಸ್ವಲ್ಪ ದುಡ್ಡು ಮಾಡು, ಅನಂತರ ಬಾ" ಎಂದು ಕಳುಹಿಸಿಬಿಟ್ಟರು. ಆತ ಈಗ ಹಣ ಗಳಿಸುತ್ತಿರುವನು. ಆದರೂ ಹಿಂದೆ ಶ್ರೀರಾಮಕೃಷ್ಣರ ಮೇಲಿದ್ದ ಪ್ರೇಮ ಕ್ರಮೇಣ ಜಾಗ್ರತವಾಗುತ್ತಿದೆ. ಈ ಶಿಷ್ಯನ ಅಥವಾ ಇತರರ ಲೋಪ ದೋಷಗಳನ್ನು ಕುರಿತು ಸ್ವಾಮಿಜಿ ಹೇಳಲಿಲ್ಲ. ಸ್ವಾಮಿಜಿ ನುಡಿಯನ್ನು ಆಲಿಸುತ್ತಿದ್ದರೆ ಪ್ರತಿಯೊಂದು ಜೀವ ಹೋರಾಡುತ್ತಿರುವಾಗ ಅದರಲ್ಲಿರುವ ಔದಾರ್ಯ ನಮ್ಮೆದೆಗೆ ತಾಕುವುದು. ಪ್ರತಿಯೊಬ್ಬರೂ ಏತಕ್ಕೆ ಸನ್ಯಾಸಿಯಾಗಬೇಕು? ಅವನ ಕರ್ಮ ಕ್ಷಯವಾಗುವುದಕ್ಕೆ ಮುಂಚೆ ಇದು ಹೇಗೆ ಸಾಧ್ಯ? ಆದರೆ ಕೊನೆಗೆ ಇದರಲ್ಲಿ ಯಾವ ಸಂಶಯವೂ ಇಲ್ಲ. ಕೊನೆಗೆ ಇವರೆಲ್ಲ ಅವರಿಗೇ ಸೇರಿದವರು.

ಇದರಂತೆಯೇ ಇತರ ಮಹಾತ್ಮರು. ತಮ್ಮ ಮನಸ್ಸಿನಲ್ಲಿ ಮೂಡಿದ ಯಾವುದಾದರೂ ಮಹಾತ್ಮನ ಚಿತ್ರವನ್ನು ಹೃತ್ಪೂರ್ವಕ ಬಣ್ಣಿಸುವರು. ಕೇಳಿದವರಿಗೆ ಈತನನ್ನು ಬಿಟ್ಟರೆ ಇನ್ನು ಯಾರೂ ಇಷ್ಟು ದೊಡ್ಡ ಮಹಾತ್ಮರಿಲ್ಲ ಎನ್ನುವಂತೆ ಇತ್ತು. ಪವಹಾರಿಬಾಬನ ವಿಷಯವಾಗಿ ಅವರು ನಮಗೆ ಎಲ್ಲಾ ವಿಷಯಗಳನ್ನೂ ಹೇಳಿದರು. ಆತನನ್ನು ಕುರಿತು ಬೇರೆಬೇರೆ ಪ್ರಶ್ನೆ ಕೇಳುವುದು ಅನುಚಿತ ಎನ್ನುವಂತೆ ಕಾಣುತ್ತಿತ್ತು. ಅವರ ಮರಣಕಾಲದಲ್ಲಿ ಸ್ವಾಮಿಜಿ ಪವಹಾರಿಬಾಬರನ್ನು ಶ್ರೀರಾಮಕೃಷ್ಣರಿಗೆ ಮಾತ್ರ ಎರಡನೆಯವರೆಂದು ಭಾವಿಸಿದ್ದರು. ಅವರು ತಮ್ಮ ಮೇಲೆ ಇಟ್ಟ ಪ್ರೇಮಕ್ಕೆ ತಾವೆಂದೆಂದಿಗೂ ಕೃತಜ್ಞರೆಂದು ಭಾವಿಸಿದ್ದರು.

ಅನಂತರ ಒಂದು ಗಂಟೆವರೆಗೆ ಸ್ವಾಮಿಜಿ ಅವರು ಕಂಡ ಇತರ ಮಹಾತ್ಮರ ವಿಷಯದ ಮೇಲೆ ಹೇಳಲು ಪ್ರಾರಂಭಿಸಿದರು. ತ್ರೈಲಿಂಗ ಸ್ವಾಮಿಗಳನ್ನು ಅವರ ಬಹಳ ವೃದ್ಧಾಪ್ಯದಲ್ಲಿ ಕಂಡಿದ್ದರು. ಆಗ ಅವರಿಗೆ

ನೂರು ವರುಷಗಳ ಮೇಲೆ ವಯಸ್ಸಾಗಿತ್ತು. ಯಾವಾಗಲೂ ಅವರು ಮೌನವಾಗಿಯೇ ಇರುತ್ತಿದ್ದರು. ಇವರು ಕಾಶಿಯಲ್ಲಿ ಒಂದು ಶಿವ ದೇವಾಲಯದಲ್ಲಿ ಶಿವಲಿಂಗದ ಮೇಲೆಯೇ ಕಾಲುಚಾಚಿಕೊಂಡು ಮಲಗಿ ರುತ್ತಿದ್ದರು. ನೋಡುವುದಕ್ಕೆ ಹುಚ್ಚರಂತೆಯೇ ಇರುತ್ತಿದ್ದರು. ಜನರು ಬೇಕಾದರೆ ಏನಾದರೂ ಪ್ರಶ್ನೆಯನ್ನು ಚೀಟಿಯಲ್ಲಿ ಬರೆದುಕೊಡಬಹು ದಾಗಿತ್ತು. ಮನಸ್ಸು ಬಂದರೆ ಅವುಗಳಲ್ಲಿ ಯಾವುದಾದರೂ ಒಂದಕ್ಕೆ ಸಂಸ್ಕೃತದಲ್ಲಿ ಉತ್ತರ ಬರೆದುಕೊಡುತ್ತಿದ್ದರು. ಇತ್ತೀಚೆಗೆ ಇವರು ಕಾಲವಾಗಿದ್ದರು.

ರಘುನಾಥದಾಸ್ ಎಂಬ ಮತ್ತೊಬ್ಬ ಸಾಧು; ಸ್ವಾಮಿಜಿ ಅವರ ಆಶ್ರಮಕ್ಕೆ ಹೋಗುವುದಕ್ಕೆ ಎರಡುತಿಂಗಳು ಮುಂಚೆ ಕಾಲವಾಗಿದ್ದರು. ಇವರು ಮೊದಲು ಇಂಗ್ಲೀಷರ ಕೆಳಗೆ ಸೈನ್ಯದಲ್ಲಿದ್ದರು. ಗಡಿರಕ್ಷಣೆಯಲ್ಲಿ ಪಹರೆಯವರಾಗಿದ್ದಾಗ ಒಳ್ಳೆಯವರಾಗಿ ಕಾರ್ಯತತ್ಪರರಾಗಿದ್ದರು. ಮೇಲಿನ ಅಧಿಕಾರಿಗಳಿಗೆಲ್ಲ ಬೇಕಾದವರಾಗಿದ್ದರು. ಒಂದು ರಾತ್ರಿ ರಾಮಭಜನೆ ಕೇಳಿದರು. ತಮ್ಮ ಕಾರ್ಯದಲ್ಲಿ ಎಂದಿನಂತೆ ಕಾರ್ಯತತ್ಪರರಾಗಲು ಯತ್ನಿಸಿ ದರು. ಆದರೆ 'ಜಯಬೋಲೋ ರಾಮಚಂದ್ರಕಿ ಜೈ' ಎಂಬ ನಾಮ ಅವರನ್ನು ಹುಚ್ಚರನ್ನಾಗಿ ಮಾಡಿತು. ಅವರು ತಮ್ಮ ಆಯುಧ ಡ್ರೆಸ್ ಎಲ್ಲವನ್ನೂ ಆಚೆಗೆ ಎಸೆದು ಭಜನೆಯಲ್ಲಿ ಸೇರಿದರು.

ಹೀಗೆಯೇ ಕೆಲವುದಿನಗಳು ಆಯಿತು. ಈ ಸಮಾಚಾರ ಮೇಲಿನ ಅಧಿಕಾರಿಗೆ ಗೊತ್ತಾಯಿತು. ಅವರು ರಘುನಾಥದಾಸನನ್ನು ಕರೆಸಿ ಈ ಸಮಾಚಾರ ನಿಜವೆ, ಇದಕ್ಕೆ ಶಿಕ್ಷೆ ಏನು ಗೊತ್ತೆ ಎಂದು ಕೇಳಿದರು. ಹೌದು ಗೊತ್ತಿದೆ, ಇದಕ್ಕೆ ಗುಂಡಿನಿಂದ ಹೊಡೆಯುವುದೆ ಶಿಕ್ಷೆ ಎಂದರು. ಅಧಿಕಾರಿ "ಈ ಸಲಿ ಹೊರಡು, ನಾನು ಇದನ್ನು ಯಾರಿಗೂ ಹೇಳುವು ದಿಲ್ಲ. ಈ ಸಲಿ ನಿನ್ನನ್ನು ಕ್ಷಮಿಸುತ್ತೇನೆ. ಆದರೆ ನೀನು ಹೀಗೆಯೆ ಪುನಃ ಮಾಡಿದರೆ ಶಿಕ್ಷೆಯನ್ನು ಅನುಭವಿಸಬೇಕಾಗುವುದು" ಎಂದು ಹೇಳಿ ಕಳುಹಿಸಿದರು.

ಅಂದಿನ ರಾತ್ರಿಯೂ ಪಹರೆಯವರು ಭಜನೆಪಂಗಡದ ರಾಮನಾಮ ವನ್ನು ಕೇಳಿದರು. ಹೋಗಕೂಡದೆಂದು ಎಷ್ಟೋ ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಕೊನೆಗೆ ಎಲ್ಲವನ್ನೂ ಮರೆತು ಭಜನೆಯಲ್ಲಿ ಬೆಳಗಿನ ತನಕ ಸೇರಿದರು.

ಮೇಲಿನ ಅಧಿಕಾರಿಗೆ ರಘುನಾಥದಾಸರ ಮೇಲೆ ಬಹಳ ನಂಬಿಕೆ ಇತ್ತು. ಯಾರು ಏನು ಹೇಳಲಿ ಅವರ ಮೇಲೆ ಅವರು ಅದನ್ನು ಕೇಳು ತ್ತಿರಲಿಲ್ಲ. ರಘುನಾಥದಾಸರೇ ಒಪ್ಪಿಕೊಂಡರೂ ಈತ ಅದನ್ನು ನಂಬು ತ್ತಿರಲಿಲ್ಲ. ಆದಕಾರಣ ತಾನೇ ಪರೀಕ್ಷಿಸುವುದಕ್ಕಾಗಿ ಅಧಿಕಾರಿ ರಾತ್ರಿ ಗಡಿಯ ಹತ್ತಿರ ಹೋದರು. ಆಗ ರಘುನಾಥದಾಸ್ ಅಲ್ಲಿಯೇ ಇದ್ದರು. ಮೂರುವೇಳೆ ಅವರೊಡನೆ ಮಾತನಾಡಿದರು. ಅಧಿಕಾರಿಗೆ ಇವರು ಇಲ್ಲೇ ಇರುವರೆಂದು ಧೈರ್ಯವಾಗಿ ಮಲಗಲು ಹಿಂತಿರುಗಿದರು.

ಮಾರನೆದಿನ ಬೆಳಗ್ಗೆ ರಘುನಾಥದಾಸ್ ಹಾಜರಾಗಿ ತನ್ನ ಆಯುಧ ವನ್ನು ಅಧಿಕಾರಿಗೆ ಒಪ್ಪಿಸಿದರು. ಆದರೆ ಅಧಿಕಾರಿ ಅದಕ್ಕೆ ಒಡಂಬಡಲಿಲ್ಲ. ಏಕೆಂದರೆ ಹಿಂದಿನ ದಿನ ರಾತ್ರಿ ತಾನೆ ಅವರನ್ನು ನೋಡಿದ್ದರು. ರಘುನಾಥ ದಾಸರಿಗೆ ಆಶ್ಚರ್ಯವಾಯಿತು. ಹೇಗೋ ನನ್ನನ್ನು ಕೆಲಸದಿಂದ ವಜಾಮಾಡಿ ಎಂದು ಬೇಡಿಕೊಂಡರು. ಶ್ರೀರಾಮ ತನ್ನ ದಾಸನಿಗೆ ಇದನ್ನು ಮಾಡಿದ ವನು. ಆದಕಾರಣ ಇಂದಿನಿಂದ ರಾಮನನ್ನಲ್ಲದೆ ಮತ್ತಾರ ಸೇವೆಯನ್ನೂ ಮಾಡಲಾರೆ ಎಂದರು.

ಈತ ಸರಸ್ವತಿ ನದೀತೀರದಲ್ಲಿ ಬೈರಾಗಿಯಾದರು. ಜನ ಇವರನ್ನು ಪೆದ್ದ ಎನ್ನುತ್ತಿದ್ದರು. ಆದರೆ ನನಗೆ ಅವರ ಶಕ್ತಿ ಗೊತ್ತಿತ್ತು ಎಂದರು ಸ್ವಾಮಿಜಿ. ಇವರು ಪ್ರತಿದಿನ ಸಹಸ್ರಾರು ಜನರಿಗೆ ಊಟವಿಡುತ್ತಿದ್ದರು. ಇವರಿಗೆ ದವಸಕೊಟ್ಟ ವರ್ತಕ ಕೆಲವುದಿನಗಳಾದ ಮೇಲೆ ದುಡ್ಡಿಗೆ ಬರು ವನು. ಆಗ ರಘುನಾಥದಾಸ್ "ಏನು ಒಂದು ಸಾವಿರ ರೂಪಾಯಿಯೆ. ನೋಡೋಣ ನನಗೆ ದುಡ್ಡು ಬಂದು ಒಂದು ತಿಂಗಳು ಆಗುತ್ತಾ ಬಂತು. ಬಹುಶಃ ನಾಳೆ ದುಡ್ಡು ಬಂದೀತು" ಎಂದು ಹೇಳಿ ಕಳುಹಿಸುತ್ತಿದ್ದರು. ಮಾರನೆದಿನ ದುಡ್ಡು ಯಾವಾಗಲೂ ಬರುತ್ತಿತ್ತು!

ಯಾರೊ ರಘುನಾಥದಾಸರನ್ನು ರಾಮರಾಮ ಪಾರ್ಟಿಯ ಕಥೆ ನಿಜವೆ ಎಂದು ಕೇಳಿದರು. ಇಂತಹ ವಿಷಯವನ್ನು ತಿಳಿದುಕೊಂಡು ಏನು ಪ್ರಯೋಜನ ಎಂದರು ಅವರು. ನಾನು ಕೇವಲ ಕುತೂಹಲದಿಂದ ಕೇಳು ತ್ತಿಲ್ಲ; ಇಂತಹ ಘಟನೆ ಸಾಧ್ಯವೆ ಎನ್ನುವುದನ್ನು ತಿಳಿಯುವುದಕ್ಕೆ ನಿಮ್ಮನ್ನು ಕೇಳುತ್ತಿರುವೆನು ಎಂದಾಗ, "ಭಗವಂತನಿಗೆ ಯಾವುದೂ ಅಸಾಧ್ಯವಲ್ಲ" ಎನ್ನುತ್ತಿದ್ದರು ರಘುನಾಥದಾಸರು.

ನಾನು ಹೃಷೀಕೇಶದಲ್ಲಿ ಹಲವು ಮಹಾತ್ಮರನ್ನು ನೋಡಿರುವೆನು

ಎಂದು ಸ್ವಾಮಿಜಿ ಪ್ರಾರಂಭಮಾಡಿದರು: "ನನಗೆ ಒಬ್ಬ ಹುಚ್ಚನಂತೆ ಇದ್ದ ಮನುಷ್ಯನ ಪ್ರಸಂಗ ಜ್ಞಾಪಕವಿದೆ. ಆತ ಬೆತ್ತಲೆ ಒಂದು ಬೀದಿಯಲ್ಲಿ ಬರುತ್ತಿದ್ದ. ಹುಡುಗರು ಅವನನ್ನು ಬೆನ್ನಟ್ಟಿಕೊಂಡು ಬರುತ್ತ ಕಲ್ಲಿನಿಂದ ಹೊಡೆಯುತ್ತಿದ್ದರು. ಆತನ ಮುಖ ಮತ್ತು ಕತ್ತಿನಿಂದ ರಕ್ತ ಸುರಿಯುತ್ತಿದ್ದರೂ ಆತ ನಲಿದಾಡುತ್ತಿದ್ದ. ನಾನು ಅವನನ್ನು ಕರೆದುಕೊಂಡು ಹೋಗಿ ಗಾಯವನ್ನು ತೊಳೆದು ಬೂದಿಹಾಕಿ ಕಟ್ಟಿದೆ. ಆಗ ಅವನು 'ಹುಡುಗರು ಮತ್ತು ನಾವು ಕಲ್ಲೆಸೆದು ಆಟವಾಡುತ್ತಿದ್ದೆವು' ಎಂದು ನಗುತ್ತ ಹೇಳುತ್ತಿದ್ದ. 'ತಂದೆ ಹೀಗೆ ಆಟವಾಡುವನು' ಎಂದು ಅತ ಹೇಳಿದ.

"ಜನರಿಂದ ಪಾರಾಗುವುದಕ್ಕೆ ಅನೇಕಜನ ಹೀಗೆ ಗೋಪ್ಯವಾಗಿರುವರು. ಜನರ ಕಾಟವನ್ನು ಅವರು ಸಹಿಸಲಾರರು. ಒಬ್ಬ ತಾನು ವಾಸಿಸುತ್ತಿದ್ದ ಗುಹೆಯ ಹೊರಗೆ ಮನುಷ್ಯನ ಮೂಳೆಯನ್ನು ಎಸೆದಿದ್ದ. ಇದರಿಂದ ಆತ ನರಭಕ್ಷಕ ಎಂದು ಜನ ಅಂಜಿ ಇವನ ಹತ್ತಿರ ಬರದೆ ಇರಲಿ ಎಂದು. ಮತ್ತೊಬ್ಬ ಜನರ ಮೇಲೆ ಕಲ್ಲೆಸೆಯುತ್ತಿದ್ದ; ಹೀಗೆಯೆ.

"ಕೆಲವು ವೇಳೆ ಸತ್ಯ ಇದ್ದಕ್ಕೆ ಇದ್ದಂತೆಯೆ ಅವರಿಗೆ ಮಿಂಚಿನಂತೆ ಹೊಳೆಯುವುದು. ಒಬ್ಬ ಹುಡುಗ ಸ್ವಾಮಿ ಅಭೇದಾನಂದರ ಹತ್ತಿರ ಉಪನಿಷತ್ತನ್ನು ಓದಲು ಬರುತ್ತಿದ್ದ. ಒಂದು ದಿನ ಆ ಹುಡುಗ "ಸ್ವಾಮಿ ಇದೆಲ್ಲ ನಿಜವೆ?" ಎಂದು ಕೇಳಿದ. ಅದಕ್ಕೆ ಅಭೇದಾನಂದರು "ಇದೆಲ್ಲ ನಿಜ. ಇದನ್ನೆಲ್ಲಾ ಸಾಕ್ಷಾತ್ಕಾರ ಮಾಡಿಕೊಳ್ಳಲು ಕಷ್ಟವಿರಬಹುದು. ಆದರೆ ಇದು ಸತ್ಯ" ಎಂದರು. ಮಾರನೆದಿನ ಆ ಹುಡುಗ ಮೌನಸನ್ಯಾಸಿಯಾಗಿ ಬೆತ್ತಲೆ ಕೇದಾರನಾಥಕ್ಕೆ ಹೋಗುತ್ತಿದ್ದ. ಅವನಿಗೆ ಏನಾಯಿತು ಎಂದು ನೀವು ಕೇಳಬಹುದು. ಅವನು ಮೌನಿಯಾದ.

"ಸನ್ಯಾಸಿ ಪೂಜೆ ಯಾತ್ರೆ ಯಾಗ ಯಜ್ಞಗಳನ್ನು ಮಾಡಬೇಕಾದ್ದಿಲ್ಲ. ಆದರೂ ಅವನೇಕೆ ತೀರ್ಥದಿಂದ ತೀರ್ಥಕ್ಕೆ, ದೇವಸ್ಥಾನದಿಂದ ದೇವಸ್ಥಾನಕ್ಕೆ ಹೋಗುತ್ತಿರುವುದು? ಒಂದು ತಪಸ್ಸಾದ ಮೇಲೆ ಮತ್ತೊಂದು ತಪಸ್ಸು ಮಾಡುತ್ತಿರುವುದು? ಅವನು ಪುಣ್ಯಗಳಿಸಿ ಅದನ್ನು ಪ್ರಪಂಚಕ್ಕೆ ಕೊಡುವುದಕ್ಕಾಗಿ ಇದನ್ನು ಮಾಡುತ್ತಿರುವನು."

ಅನಂತರ ಶಿಬಿರಾಜನ ಕಥೆ ಬಂತು ಎಂದು ಕಾಣುವುದು. ಕಥೆಯನ್ನು ಹೇಳುತ್ತಿದ್ದ ಸ್ವಾಮಿಜಿ ಹೀಗೆಂದರು: "ಹೌದು, ಈ ಕಥೆಗಳೆಲ್ಲ

ನಮ್ಮ ಜನಾಂಗದ ಅಂತರಾಳದಲ್ಲಿ ಸುಪ್ತವಾಗಿವೆ. ಸನ್ಯಾಸಿ ಎರಡು ಪ್ರತಿಜ್ಞೆ ಮಾಡುವನೆಂಬುದನ್ನು ಮರೆಯದಿರು. ಅದೇ ಆತನ ಮೋಕ್ಷ ಮತ್ತು ಜಗತ್ತಿನ ಹಿತ. ಅತ್ಯಂತ ಕಠಿಣತಮವಾದುದೆ ಸ್ವರ್ಗಾದಿಕಾಮನೆಗಳನ್ನು ಎಂದೆಂದಿಗೂ ತ್ಯಜಿಸುವುದು."



೧೪

## ಭರತಖಂಡದ ಭೂತ ಭವಿಷ್ಯತ್ತು

ಪ್ರಪಂಚವನ್ನು ಸುತ್ತುತ್ತಿರುವಾಗ ಒಬ್ಬನು ಗುರುವಿನೊಂದಿಗೆ ಹೋದರೆ ಅದೂಕೂಡ ಒಂದು ಯಾತ್ರೆಯಾಗುವುದು. ಒಂದು ದಿನ ಹಡಗು ಕೆಂಪು ಸಮುದ್ರದಲ್ಲಿ ಹೋಗುತ್ತಿದ್ದಾಗ ಸಂಜೆಯಾಗಿತ್ತು. ಇತರರಿಗೆ ಸೇವೆಮಾಡುವಾಗ ಯಾವುದು ಸರಿಯಾದ ದೃಷ್ಟಿ ಎಂಬ ವಿಷಯ ವಾಗಿ ನಾನು ಅವರನ್ನು ಕೇಳಿದೆನು. ಇಂತಹ ಪ್ರಶ್ನೆಗೆ ಉತ್ತರಕೊಡು ತ್ತಿದ್ದಾಗ ಬಹಳ ಅಪರೂಪ ಅವರು ಯಾವುಧಾದರೊಂದು ಸ್ತೋತ್ರವನ್ನು ಉದಹರಿಸದೆ ಇದ್ದುದು. ಒಬ್ಬ ಅನಂತರದ ಜೀವನದಲ್ಲಿ ಇದಕ್ಕಾಗಿ ಎಷ್ಟು ಕೃತಜ್ಞನಾಗುತ್ತಾನೆ! ಅವರ ಸ್ವಂತ ಅಭಿಪ್ರಾಯ ನನಗೆ ಬೇಕಾಗಿ ದ್ದುದು. ಆದರೆ ಇದನ್ನು ಒಂದು ಸ್ತೋತ್ರದ ಮೇಲಿನ ಭಾಷ್ಯದಂತೆ ಕೊಟ್ಟುದರಿಂದ ಅದು ನನ್ನ ಮನಸ್ಸಿನ ಆಳಕ್ಕೆ ಹೋಗಲು ಸಾಧ್ಯವಾಯಿತು. ಅವರು ಬರೀ ತಮ್ಮ ಅಭಿಪ್ರಾಯವೊಂದನ್ನೇ ಕೊಡುವುದಕ್ಕಿಂತ ಮತ್ತೂ ಹೆಚ್ಚು ವಿಷಯಗಳನ್ನು ಉದಹರಿಸಬೇಕಾಯಿತು.

ಯಾರು ವ್ರತಭ್ರಷ್ಟರಾಗುವರೊ ಅವರ ಗತಿ ಏನಾಗುವುದೆಂದು ಪ್ರಶ್ನಿಸಿದಾಗ ಅವರು ಮತ್ತೊಂದು ಸುಂದರವಾದ ಸಂಸ್ಕೃತ ಶ್ಲೋಕವನ್ನು ಹೇಳತೊಡಗಿದರು. ಈಗಲೂ ಕೂಡ ಅರ್ಜುನ ಯಾವ ಪ್ರಶ್ನೆಯನ್ನು ಕೇಳಿದನೊ ಅದನ್ನು ಸ್ವಾಮಿಜಿ ಅತಿಮಧುರವಾಗಿ ಉಚ್ಚರಿಸಿದ್ದು ಇನ್ನೂ ಜ್ಞಾಪಕವಿದೆ.

ಅಯತಿಃ ಶ್ರಧ್ಧಯೋಪೇತೋ ಯೋಗಾಚ್ಚಲಿತಮಾನಸಃ ।
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿ ಕೃಷ್ಣ ಗಚ್ಛತಿ ॥
ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವನಶ್ಯತಿ ।
ಅಪ್ರತಿಷ್ಠೋ ಮಹಾಬಾಹೊ ವಿಮೂಢೋ ಬ್ರಾಹ್ಮಣಃ ಪಥಿ ॥

ಯಾರು ಶ್ರದ್ಧೆಯಿಂದ ಪ್ರಾರಂಭಮಾಡಿ ಕೊನೆಗೆ ಯೋಗಭ್ರಷ್ಟರಾದರೆ ಇಂತಹವರು ಯಾವ ಸ್ಥಿತಿಗೆ ಬರುತ್ತಾರೆ? ಗ್ರೀಷ್ಮಕಾಲದ ಛಿನ್ನಮುಗಿಲಿ ನಂತೆ ಇಲ್ಲಿಯೂ ಭ್ರಷ್ಟರಾಗಿ ಮುಂದೆಯೂ ಭ್ರಷ್ಟರಾಗುತ್ತಾರೆಯೇ?

ಶ್ರೀಕೃಷ್ಣ ಅದಕ್ಕೆ ಧೈರ್ಯವಾಗಿ ಉತ್ತರ ಹೇಳುತ್ತಾನೆ:

ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ
ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ

ಹೇ ಪಾರ್ಥ ಇಲ್ಲಿಯಾಗಲಿ ಅನಂತರದಲ್ಲಾಗಲಿ ಇಂತಹವನು ಎಂದಿಗೂ ನಾಶವಾಗುವುದಿಲ್ಲ. ಮಗು, ಒಳ್ಳೆಯದನ್ನು ಮಾಡಿದವನು ಎಂದಿಗೂ ನಾಶವಾಗುವುದಿಲ್ಲ.

ಅನಂತರ ಅವರು ಬೇರೊಂದು ಮಾತನ್ನು ಎತ್ತಿದರು. ಅದನ್ನು ನಾನು ಎಂದಿಗೂ ಮರೆಯುವಂತಿಲ್ಲ. ಮೊದಲು ನಾವು ಕಾಯಾವಾಚಾ ಮನಸಾ ನಿಗ್ರಹಿಸದೆ ಇರುವುದೆಲ್ಲ ಸ್ವೇಚ್ಛಾಜೀವನ ನಡೆಸಿದಂತೆ. ಕೆಲವು ವೇಳೆ ಭ್ರಷ್ಟರಾದವರು ರಾಜರಾಗಿ ಹುಟ್ಟಿ ತಮ್ಮ ಇಚ್ಛೆಯನ್ನು ಪೂರೈಸಿ ಕೊಳ್ಳುವರು. ಅವನು ಸಿಂಹಾಸನದ ಮೇಲೆ ಇದ್ದರೂ ಹಿಂದಿನ ಜನ್ಮದ ಆ ಸಾಧುವಿನ ಚಿಹ್ನೆ ಅವನಲ್ಲಿ ಇರುವುದು. ಇಂತಹ ಒಂದು ನೆನಪಿನ ಛಾಯೆ ಇರುವುದೇ ಮಹಾಪುರುಷನ ಒಂದು ಲಕ್ಷಣ ಎಂದು ಹೇಳು ತ್ತಿದ್ದರು. ಅಕ್ಬರನಿಗೆ ಇಂತಹ ಒಂದು ಜ್ಞಾಪಕವಿತ್ತು. ತಾನೊಬ್ಬ ಭ್ರಷ್ಟನಾದ ಬ್ರಹ್ಮಚಾರಿ ಎಂದು ತಿಳಿದಿದ್ದನು. ಆದರೆ ಮುಂದಿನ ಜನ್ಮ ದಲ್ಲಿ ಒಳ್ಳೆಯ ಅನುಕೂಲವಾದ ವಾತಾವರಣದಲ್ಲಿ ಹುಟ್ಟಿ ಅಲ್ಲಿ ಜಯ ಶೀಲನಾಗುವನು. ಅನಂತರ ನನ್ನ ಗುರುದೇವರು ತಮ್ಮ ಬಾಲ್ಯದ ವಿಷಯ ವನ್ನು ಹೇಳಿದರು. ಅಪರೂಪ ಅವರು ಇದನ್ನು ಪ್ರಸ್ತಾಪಮಾಡುತ್ತಿದ್ದುದು. ನೆನಪಿನ ವಿಷಯವಾಗಿ ಮಾತನಾಡುತ್ತಿದ್ದಾಗ ಸ್ವಲ್ಪ ಹೊತ್ತು ತಮ್ಮ ಬಾಲ್ಯದ ವಿಷಯವನ್ನೇ ಹೇಳತೊಡಗಿದರು. ನನ್ನ ಕಡೆ ತಿರುಗಿನೋಡಿ ನನ್ನ ಹೆಸರನ್ನು ಹೇಳುತ್ತ ಹೀಗೆಂದರು: ''ನೀನು ಏನಾದರೂ ತಿಳಿದುಕೊ, ನನಗೇನೊ ಅಂತಹ ನೆನಪಿದೆ. ನನಗೆ ಎರಡು ವರುಷವಾದಾಗ ನಾನು ಕುದುರೆಯವನೊಡನೆ ಆಡುತ್ತಿದ್ದಾಗ ಮೈಗೆ ಬೂದಿ ಬಳಿದುಕೊಂಡು ಕೌಪೀನ ಧರಿಸಿ ಭೈರಾಗಿಯಂತೆ ಆಡುತ್ತಿದ್ದೆ. ಯಾರಾದರೂ ಸಾಧುಗಳು ಮನೆಗೆ ಬಂದರೆ ನನ್ನನ್ನು ಒಂದು ರೂಮಿನಲ್ಲಿ ಕೂಡಿಹಾಕುತ್ತಿದ್ದರು. ಎಲ್ಲಿ ಅವರಿಗೆ ಹೆಚ್ಚಾಗಿ ಕೊಟ್ಟುಬಿಡುವೆನೊ ಎಂದು. ನಾನು ಕೂಡ ಶಿವನ ಹತ್ತಿರ ಭೈರಾಗಿಯಂತೆ ಇದ್ದೆ. ಏನೊ ತಪ್ಪುಮಾಡಿದುದಕ್ಕಾಗಿ ನನ್ನನ್ನು ಭೂಲೋ ಕಕ್ಕೆ ಕಳುಹಿಸಿರಬೇಕೆಂದು ಯೋಚಿಸುತ್ತಿದ್ದೆ. ನನ್ನ ಮನೆಯವರು ಕೂಡ ಈ ಅಭಿಪ್ರಾಯವನ್ನೇ ಪುಷ್ಟಿಗೊಳಿಸಿದರು. ನಾನು ಬಹಳ ಚೇಷ್ಟೆ ಮಾಡು

ತ್ತಿದ್ದಾಗ "ಅಯ್ಯೋ ರಾಮ, ನಾನು ಎಷ್ಟು ತಪಸ್ಸುಮಾಡಿದರೂ ಶಿವ ಕೊನೆಗೆ ಈ ದುಷ್ಟನನ್ನು ಕಳುಹಿಸಿದನಲ್ಲ, ಇನ್ನು ಯಾವುದಾದರೂ ಒಳ್ಳೆಯ ಮಗುವನ್ನು ಕಳುಹಿಸುವುದುಬಿಟ್ಟು" ಎಂದು ಹೇಳುತ್ತಿದ್ದರು. ಅಥವಾ ತುಂಬಾ ಅಸಾಧ್ಯವಾದಾಗ ನನ್ನ ತಲೆಯ ಮೇಲೆ ಒಂದು ಕೊಡ ನೀರನ್ನು ಸುರಿದು 'ಶಿವಶಿವ' ಎನ್ನುತ್ತಿದ್ದರು. ಅನಂತರ ನಾನು ಯಾವಾಗಲೂ ತೆಪ್ಪಗಾಗುತ್ತಿದ್ದೆ. ಈಗಲೂ ಕೂಡ ತುಂಟತನ ಜಾಸ್ತಿಯಾದಾಗ ಆ ಪದ ನನ್ನನ್ನು ಸರಿಮಾಡುವುದು. ಇಲ್ಲ ಇನ್ನು ಮೇಲೆ ಹೀಗೆ ಮಾಡುವುದಿಲ್ಲ ಎಂದುಕೊಳ್ಳುತ್ತೇನೆ."

ಅನಂತರ ಗೀತೆಯ ವಿಷಯವಾಗಿ ಸದ್ಯದಲ್ಲಿ ಮಾತನಾಡತೊಡಗಿದರು. ಗೀತೆಯಲ್ಲಿ ತಾಮಸ ರಾಜಸಿಕ ಮತ್ತು ಸಾತ್ತ್ವಿಕ ಎಂಬ ಮೂರು ಬಗೆಯ ದಾನಗಳಿವೆ ಎನ್ನುತ್ತಾರೆ. ತಾಮಸದಾನ ಉದ್ವೇಗದಿಂದ ಮಾಡುವ ದಾನ. ಅದು ಯಾವಾಗಲೂ ತಪ್ಪುಮಾಡುವುದು. ಕೊಡುವವನು ತಾನು ದಾಸಿಯಾಗಬೇಕೆಂದು ಬಯಸುವನೇ ಹೊರತು ಸ್ವೀಕರಿಸುವವನ ಹಿತವನ್ನೇ ಬಯಸುವುದಿಲ್ಲ. ರಾಜಸಿಕದಾನ ಕೀರ್ತಿಗೋಸುಗವಾಗಿ ಮಾಡುವುದು. ಸಾತ್ತ್ವಿಕದಾನ ಸಕಾಲದಲ್ಲಿ ಸರಿಯಾದ ಪಾತ್ರನನ್ನು ನೋಡಿ ಮಾಡುವ ದಾನ. ನಾನು ಕೇಳಿದ ಪ್ರಸಂಗವನ್ನು ತೆಗೆದುಕೊಂಡು ನಿನ್ನ ದಾನವಾದರೋ ತಾಮಸಿಕ ಎಂದರು. ಸಾತ್ತ್ವಿಕದಾನವನ್ನು ನಾನು ಆಲೋಚಿಸಿದರೆ ಒಬ್ಬ ಪ್ರಖ್ಯಾತ ಪಾಶ್ಚಾತ್ಯ ಮಹಿಳೆಯಲ್ಲಿ ನಾನು ಇದನ್ನು ನೋಡಿರುವೆನು. ಆಕೆ ಯಾವಾಗಲೂ ಸರಿಯಾದ ಮನುಷ್ಯನಿಗೆ ಸರಿಯಾದ ರೀತಿಯಲ್ಲಿ ಸರಿಯಾದ ಕಾಲದಲ್ಲಿ ಸದ್ದುಗದ್ದಲವಿಲ್ಲದೆ ಕೊಡುತ್ತಿರುವಳು ಎಂದರು. ದಾನಕೂಡ ಕೆಲವುವೇಳೆ ಮಿತಿಮೀರಬಹುದೆಂದು ನಾನು ಯೋಚಿಸುವೆನು ಎಂದರು.

ಮಾತನಾಡುತ್ತಿದ್ದಂತೆ ಅವರು ಮೌನವಾದರು. ನಾವು ತಾರಾಕಾಂತಿಯ ಕೆಳಗಡೆ ಇದ್ದ ಸಾಗರವನ್ನು ನೋಡುತ್ತಿದ್ದೆವು. ಅನಂತರ ಅವರು ಪುನಃ ಮಾತನಾಡತೊಡಗಿದರು: "ನನಗೆ ವಯಸ್ಸಾದಂತೆ ಸಣ್ಣ ಸಣ್ಣ ವಿಷಯಗಳಲ್ಲಿ ಮಹಾತ್ಮ್ಯೆಯನ್ನು ನಾನು ನೋಡಲಪೇಕ್ಷಿಸುವೆನು. ಒಬ್ಬ ಮಹಾಪುರುಷ ಏನು ಉಡುತ್ತಾನೆ, ಏನು ತಿನ್ನುತ್ತಾನೆ, ಅವನು ಆಳುಗಳೊಡನೆ ಹೇಗೆ ಮಾತನಾಡುತ್ತಾನೆ ಎಂಬುದನ್ನು ನೋಡಬಯಸುತ್ತೇನೆ. ಸರ್ ಫಿಲಿಪ್ ಸಿಡ್ನಿಯ ಮಹಾತ್ಮ್ಯೆಯನ್ನು ನೋಡಬಯ

ಸುತ್ತೇನೆ. ತಾವು ಸಾಯುವಾಗಲೂ ಇತರರ ದಾಹವನ್ನು ನೆನಪಿನಲ್ಲಿಡು. ವಂತಹವರು ಬಹಳ ಅಪರೂಪ."

"ಒಂದು ಕೀಟ ಮೌನವಾಗಿ ಎಡಬಿಡದೆ ತನ್ನ ಕರ್ತವ್ಯವನ್ನು ಪರಿಪಾಲಿಸುವುದರಲ್ಲಿ ನಿಜವಾದ ಮಹಾತ್ಮ್ಯೆ ಹೆಚ್ಚು ವ್ಯಕ್ತವಾಗುವುದು."

ಭೂಪಟದ ಮೇಲಿರುವ ಹಲವು ಸ್ಥಳಗಳು ನನಗೀಗ ಎಷ್ಟು ಸುಂದರವಾಗಿ ಕಾಣುತ್ತಿವೆ! ಆಯಾ ಸ್ಥಳದಲ್ಲಿ ಯಾವ ವಿಷಯವನ್ನು ಸ್ವಾಮಿಜಿ ಮಾತನಾಡಿದರು ಎಂಬುದನ್ನು ಅದು ನನ್ನ ನೆನಪಿಗೆ ತರುತ್ತದೆ. ನಾವು ಇಟಲಿಯ ತೀರದಲ್ಲಿ ಹೋಗುತ್ತಿದ್ದಾಗ ಚರ್ಚಿನ ವಿಷಯ ಮಾತನಾಡಿದೆವು. ಬೋನಿಫ್ಯಾಟಿಯೊ ಜಲಸಂಧಿಯ ಮೂಲಕ ಹೋಗುತ್ತಿದ್ದಾಗ ಕಾರ್ಸಿಕಾ ದ್ವೀಪದ ದಕ್ಷಿಣ ಭಾಗವನ್ನು ನೋಡುತ್ತಾ ಕುಳಿತರು. ಯೋಧ ಸಾಮ್ರಾಟ್ ನೆಪೋಲಿಯನ್‌ಗೆ ಜನ್ಮವಿತ್ತ ದ್ವೀಪದ ವಿಷಯವಾಗಿ ಮೆಲ್ಲನೆ ಮಾತನಾಡತೊಡಗಿದರು. ರಾಬಸ್‌ಪಿಯರಿನ ಶಕ್ತಿ ಮತ್ತು ವಿಕ್ಟರ್ ಹ್ಯೂಗೊ ಮೂರನೆ ನೆಪೋಲಿಯನ್‌ನನ್ನು ನಿಕೃಷ್ಟ ದೃಷ್ಟಿಯಿಂದ ನೋಡುತ್ತಿದ್ದುದು ಇವನ್ನೆಲ್ಲಾ ವಿವರಿಸಿದರು

ನಾವು ಜಿಬ್ರಾಲ್ಟರ್ ಜಲಸಂಧಿಯನ್ನು ದಾಟಿದ ಪ್ರಾತಃಕಾಲ ಡೆಕ್ಕಿನ ಮೇಲೆ ಬಂದಾಗ ಸ್ವಾಮಿಜಿ, "ನೀನು ಅವರನ್ನು ಕಂಡೆಯಾ? "ದೀನ್ ಮಹಮದ್" ಎಂದು ಘೋಷಿಸುತ್ತಾ ದಂಡಯಾತ್ರೆ ಎತ್ತಿದವರನ್ನು?" ಎಂದು ನನ್ನನ್ನು ಪ್ರಶ್ನಿಸಿದರು. ಸುಮಾರು ಅರ್ಧಗಂಟೆಯ ಕಾಲ ಮೂರರು ಸ್ಪೈಯಿನ್ ದೇಶವನ್ನು ಆಕ್ರಮಿಸಿದ ವಿಚಾರವನ್ನು ಕಣ್ಣಿಗೆ ಕಟ್ಟುವಂತೆ ನಾಟಕೀಯವಾಗಿ ಚಿತ್ರಿಸಿದರು.

ಪುನಃ ಭಾನುವಾರ ಸಾಯಂಕಾಲ ಬುದ್ಧನ ವಿಷಯವನ್ನು ಮಾತನಾಡತೊಡಗಿದರು. ಎಲ್ಲರಿಗೂ ಪರಿಚಿತವಾದ ಅವನ ಘಟನೆಗಳಲ್ಲಿ ಹೊಸ ಚೇತನವನ್ನು ತುಂಬಿ ಎಂತಹ ಅದ್ಭುತವಾದ ತ್ಯಾಗ ಅವನದು ಎಂದು ಅವನ ದೃಷ್ಟಿಯಿಂದ ವಿವರಿಸತೊಡಗಿದರು.

ಅವರ ಮಾತೆಲ್ಲ ಮನೋರಂಜಕವಾಗಿರಲಿಲ್ಲ, ಶಿಕ್ಷಣಪ್ರದವಾಗಿಯೂ ಇರಲಿಲ್ಲ. ಮಧ್ಯೆ ಮಧ್ಯೆ ಜೀವನದ ಉದ್ದೇಶವನ್ನು ಕುರಿತು ಉತ್ಸಾಹ

ಪೂರಿತವಾಗಿ ಮಾತನಾಡುತ್ತಿದ್ದರು. ಅವರು ಹಾಗೆ ಮಾತನಾಡಿದಾಗ ಲ್ಲೆಲ್ಲ, ಅವರು ಹೇಳಿದ ಪ್ರತಿಯೊಂದು ಮಾತನ್ನೂ ಅನರ್ಘ್ಯರತ್ನದಂತೆ ನನ್ನ ಹೃದಯದಲ್ಲಿ ಸಂರಕ್ಷಿಸತೊಡಗಿದೆ. ಸ್ವಾಮಿಜಿ ಇತ್ತುದನ್ನು ಅವರ ದೇಶದವರಿಗೆ ರವಾನೆಮಾಡುವುದಕ್ಕೆ ಇರುವ ವ್ಯಕ್ತಿಯೆಂದೂ, ಅವರಿಗೂ ದೇಶದ ಅಸಂಖ್ಯಾತ ಜನರಿಗೂ ಇರುವ ಸೇತುವೆ ನಾನು ಎಂದು ಭಾವಿಸಿದೆ. ಭರತಖಂಡದ ಜನರು ಜಾಗ್ರತರಾಗಿ ಸ್ವಾಮಿಜಿಯವರ ಕನಸುಗಳನ್ನು ಒಂದಲ್ಲ ಒಂದುದಿನ ಕಾರ್ಯಗತಮಾಡುವರು.

ಇಂತಹ ಒಂದು ಸನ್ನಿವೇಶ ನಾವು ಒಂದುದಿನ ಸಂಜೆ ಏಡನ್ ನಗರವನ್ನು ಸಮಿಾಪಿಸಿದಾಗ ಬಂತು. ನಾನು ಅಂದಿನ ಬೆಳಿಗ್ಗೆ ಭರತಖಂಡದ ಹಿತಕ್ಕಾಗಿ ಸ್ವಾಮಿಜಿ ಯೋಜನೆಗೂ ಇತರರ ದೃಷ್ಟಿಗೂ ಏನು ವ್ಯತ್ಯಾಸ ಎಂಬುದನ್ನು ಕೇಳಿದೆ. ಈ ವಿಷಯದ ಮೇಲೆ ಅವರ ಅಭಿಪ್ರಾಯವನ್ನು ತಿಳಿದುಕೊಳ್ಳಲು ಆಗಲಿಲ್ಲ. ಅದಕ್ಕೆ ಬದಲು ಇತರರು ಮಾಡುತ್ತಿರುವ ಕೆಲಸ ಅವರ ವ್ಯಕ್ತಿತ್ವ ಇವುಗಳನ್ನು ಶ್ಲಾಘಿಸತೊಡಗಿದರು. ಪ್ರಶ್ನೆ ಇಲ್ಲಿಗೇ ಮುಕ್ತಾಯವಾಯಿತೆಂದು ಭಾವಿಸಿದೆ. ಅಂದಿನ ಸಂಜೆ ಇದ್ದಕ್ಕಿದ್ದಂತೆ ಸ್ವಾಮಿಜಿ ಬೆಳಗಿನ ಪ್ರಶ್ನೆಯನ್ನೆ ಪ್ರಸ್ತಾಪಿಸತೊಡಗಿದರು.

"ನಮ್ಮ ಜನರಿಗೆ ಮೂಢನಂಬಿಕೆಗಳನ್ನು ಪುನಃ ಕೊಡಲು ಪ್ರಯತ್ನಿಸುತ್ತಿರುವವರನ್ನು ನಾನು ಮೆಚ್ಚುವುದಿಲ್ಲ. ಈಜಿಪ್ಟಿನ ಪ್ರಾಕ್ತನ ವಿಮರ್ಶಕನಿಗೆ ( Egyptologist ) ಗತಕಾಲದ ಈಜಿಪ್ಟಿನಲ್ಲಿರುವ ಆಸಕ್ತಿಯಂತೆ ಇದೆ ಭರತಖಂಡದ ಜನರಮೇಲೆ ಇವರಿಗೆ ಇರುವ ಆಸಕ್ತಿ. ಅದು ಬರೀ ಸ್ವಾರ್ಥ. ನಾವು ಹಿಂದೆ ಗ್ರಂಥಗಳಲ್ಲಿ ಓದಿದ ಭರತಖಂಡವನ್ನು, ಕನಸಿನಲ್ಲಿ ಕಟ್ಟಿಕೊಂಡ ಭರತಖಂಡವನ್ನು ನೋಡಲು ಇಚ್ಛಿಸಬಹುದು. ಆದರೆ ನನ್ನ ದೃಷ್ಟಿಯಲ್ಲಿ ಹಿಂದಿನಕಾಲದ ಒಳ್ಳೆಯದೂ ಇರಬೇಕು, ಜೊತೆಗೆ ಈಗಿನಕಾಲದ ಒಳ್ಳೆಯದೂ ಇರಬೇಕು. ಇವೆರಡೂ ಸ್ವಾಭಾವಿಕವಾಗಿ ಸಮ್ಮಿಲನವಾಗಿರಬೇಕು.

"ಆದಕಾರಣವೆ ನಾನು ಬರೀ ಉಪನಿಷತ್ತನ್ನು ಬೋಧಿಸುವುದು. ನೀನು ಹಾಗೆಯೇ ನೋಡಿದರೆ ನಾನು ಉಪನಿಷತ್ತಲ್ಲದೆ ಬೇರೆ ಏನನ್ನೂ ಉದಹರಿಸಿಲ್ಲ. ಉಪನಿಷತ್ತಿನಲ್ಲಿ ಕೂಡ 'ಬಲ' ಎಂಬ ಒಂದು ಮಾತನ್ನು ಮಾತ್ರ. ವೇದ ವೇದಾಂತಗಳ ಸಾರವೆಲ್ಲ ಆ ಒಂದು ಮಾತಿನಲ್ಲಿ ಹುದು

ಗಿದೆ. ಬುದ್ಧ ಅಹಿಂಸೆಯನ್ನು ಬೋಧಿಸಿದ. ಆದರೆ ಅದನ್ನೇ ಬೋಧಿಸು ವುದಕ್ಕೆ ಇದು ಉತ್ತಮ ಮಾರ್ಗ ಎಂದು ನಾನು ಭಾವಿಸುತ್ತೇನೆ. ಆ ಅಹಿಂಸೆಯ ಹಿಂದೆ ಅತಿ ಹೀನವಾದ ದೌರ್ಬಲ್ಯವಿತ್ತು. ಎದುರಿಸಬೇಕು ಎಂಬ ಭಾವನೆಗೆ ಮೂಲ ದೌರ್ಬಲ್ಯ. ನಾನೊಂದು ಕೀಟವನ್ನು ಶಿಕ್ಷಿಸ ಬೇಕೆಂದಾಗಲಿ, ಅದರಿಂದ ಪಾರಾಗಬೇಕೆಂದಾಗಲಿ ಯೋಚಿಸುವುದಿಲ್ಲ. ನಾನು ಇದನ್ನು ಗಣನೆಗೇ ತರುವುದಿಲ್ಲ. ಆದರೆ ಸೊಳ್ಳೆಗೆ ಇದೊಂದು ಮಹಾ ಪ್ರಮಾದ. ಎಲ್ಲಾ ಹಿಂಸೆಯನ್ನೂ ನಾನು ಈ ದೃಷ್ಟಿಯಿಂದ ನೋಡು ತ್ತೇನೆ. ಧೈರ್ಯ ಮತ್ತು ಬಲ ಬೇಕಾಗಿರುವುದು. ನನ್ನ ಆದರ್ಶವೇ ಸಿಪಾಯಿದಂಗೆಯಲ್ಲಿ, ಖೂನಿಗೆ ತುತ್ತಾದ ಆ ಮಹಾ ಸಾಧುಪುರುಷ. ಆತನನ್ನು ಯಾರೋ ತಿವಿದಾಗ ಕೊಲೆಪಾತಕನನ್ನು ನೋಡಿ "ನೀನು ಕೂಡ ಅವನೆ" ಎಂದನು.

"ಇಲ್ಲಿ ಶ್ರೀರಾಮಕೃಷ್ಣರ ಸ್ಥಾನ ಯಾವುದು ಎಂದು ನೀವು ಕೇಳ ಬಹುದು?

"ಅವರೇ ಮಾರ್ಗ, ಅದ್ಭುತವಾದ ನಮಗೆ ಅರಿವಿಲ್ಲದ ಮಾರ್ಗ. ಅವರು ತಮ್ಮನ್ನೇ ತಿಳಿದಿರಲಿಲ್ಲ, ಅವರಿಗೆ ಇಂಗ್ಲೆಂಡಾಗಲಿ, ಇಂಗ್ಲೀಷ ರಾಗಲಿ ಯಾರೂ ಪರಿಚಯವಿರಲಿಲ್ಲ. ಎಲ್ಲೊ ಸಮುದ್ರದಾಚೆಯಿಂದ ಬರುವ ವಿಚಿತ್ರ ಮನುಷ್ಯರು ಇವರು ಎಂದು ಭಾವಿಸಿದ್ದರು. ಆದರೆ ಅವರು ಅದ್ಭುತವಾದ ಜೀವನವನ್ನು ಬಾಳಿದರು. ನನಗೆ ಅದರ ಮಹಾತ್ಮ್ಯೆ ಗೊತ್ತಾಯಿತು. ಯಾರನ್ನೂ ಒಮ್ಮೆಯೂ ಜರೆದವರಲ್ಲ. ನಾನು ಒಂದು ಸಲ ವಾಮಾಚಾರವನ್ನು ಖಂಡಿಸುತ್ತಿದ್ದೆ. ನಾನು ಮೂರು ಗಂಟೆಗಳ ಕಾಲ ಸಿಕ್ಕಾಪಟ್ಟೆ ಮಾತನಾಡಿದೆ. ಸಾವಧಾನದಿಂದ ನಾನು ಪೂರೈಸಿದ ಮೇಲೆ "ಆಗಲಿ, ಆಗಲಿ, ಪ್ರತಿಯೊಂದು ಮನೆಗೂ ಒಂದು ಹಿತ್ತಿಲ ಬಾಗಿಲು ಇರಬಹುದು" ಎಂದರು ಆ ವೃದ್ಧರು ಕೊನೆಗೆ.

"ಇದುವರೆಗೆ ನಮ್ಮ ಹಿಂದೂ ಧರ್ಮದಲ್ಲಿ ಇವೆರಡೇ ಪದಗಳಿರುವುವು. ತ್ಯಾಗ ಮತ್ತು ಮುಕ್ತಿ. ಇದೇ ಮಹಾ ದೋಷ. ಇಲ್ಲಿ ಮುಕ್ತಿ ಮಾತ್ರ, ಗೃಹಸ್ಥನಿಗೆ ಏನೂ ಇಲ್ಲ. ಇದೇ ಮಹಾ ದೋಷ.

"ನಾನು ಸಹಾಯಮಾಡಬೇಕೆಂದಿರುವುದು ಗೃಹಸ್ಥರಿಗೆ. ಎಲ್ಲಾ ಆತ್ಮರೂ ಒಂದೇ ಅಲ್ಲವೆ? ಎಲ್ಲರ ಗುರಿಯೂ ಒಂದೇ ಅಲ್ಲವೆ? ಆದಕಾರಣವೆ ಶಿಕ್ಷಣದ ಮೂಲಕ ಶಕ್ತಿ ಬರಬೇಕು."

ನನ್ನ ಗುರುದೇವನ ಈ ಒಂದು ಮಾತನ್ನು ಕೇಳಿದ್ದು ಸಾಕು, ಇದರಿಂದ ನನ್ನ ಇಡೀ ಪ್ರಯಾಣ ಸಾರ್ಥಕವಾಯಿತು ಎಂದು ನಾನಂದು ಭಾವಿಸಿದೆ. ಇಂದೂ ದಿನ ಕಳೆದಂತೆ ಅದನ್ನು ಹೆಚ್ಚು ಹೆಚ್ಚು ಮನನ ಮಾಡುತ್ತಿರುವೆನು.



೧೫

## ಹಿಂದೂ ಧರ್ಮದ ಮೇಲೆ

ಸ್ವಾಮಿಜಿ ಅವರು ಪೂರ್ಣದೃಷ್ಟಿಯಲ್ಲಿ ಹಿಂದೂಧರ್ಮವನ್ನು ನೋಡುವುದರಲ್ಲಿ ತನ್ಮಯರಾಗಿ ಹೋಗಿದ್ದರು. ಈ ಸಮಯದಲ್ಲಿ ಅವರು ವೈಷ್ಣವ ಸಂಪ್ರದಾಯವನ್ನು ಪದೇಪದೇ ಹೇಳುತ್ತಿದ್ದರು. ಸ್ವಾಮಿಜಿ ಸನ್ಯಾಸಿಗಳಾಗಿದ್ದುದರಿಂದ ಮನಸ್ಸೆಲ್ಲಾ ಶೈವಭಾವನೆಗಳಿಂದ ತುಂಬಿ ಹೋಗಿತ್ತು ಎಂದು ಕಾಣುವುದು. ಆದರೆ ವೈಷ್ಣವ ಸಂಪ್ರದಾಯದ ಮೇಲೆ ಇವರು ಪದೇಪದೇ ಅತಿ ಸ್ವಾರಸ್ಯವಾಗಿ ಮಾತನಾಡುತ್ತಿದ್ದರು. ಅನುಭವದ ಮೂಲಕ ಇವರಿಗೆ ಗೊತ್ತಿದ್ದುದು ಅದ್ವೈತ ಸಿದ್ಧಾಂತ. ಈ ಭಾವನೆಗಳನ್ನು ಅವರು ಸನ್ಯಾಸ ಆದರ್ಶದಮೂಲಕ ಮತ್ತು ಕಾಳಿ ಪೂಜೆಯಮೂಲಕ ವ್ಯಕ್ತಗೊಳಿಸಿದರು. ಆದರೆ ಈ ಸತ್ಯಗಳು ಮಹಾ ವೀರರಿಗೆ. ಇವುಗಳ ಮೂಲಕ ಒಂದು ಸೈನ್ಯವನ್ನು ಬೇಕಾದರೆ ಸಜ್ಜುಗೊಳಿಸ ಬಹುದು. ಜನಸಾಮಾನ್ಯರು ಯಾವಾಗಲೂ ದೇವರನ್ನು ಒಬ್ಬ ರಕ್ಷಕ ನೆಂದೂ ಹಿತಚಿಂತಕನೆಂದೂ ಪರಿಗಣಿಸುವರು. ಈ ಭಾವನೆ ಮತ್ತು ಶ್ರೇಷ್ಠವಾದ ತತ್ತ್ವಭಾವನೆ ಇವನ್ನು ಹೇಗೆ ಒಂದುಗೂಡಿಸುವುದು ಎಂಬುದೇ ಸಮಸ್ಯೆ ಪಾಶ್ಚಾತ್ಯದೇಶದಲ್ಲಿ ಇವೆರಡಕ್ಕೆ ಸಂಬಂಧವನ್ನು ಇನ್ನೂ ಕಲ್ಪಿಸ ಬೇಕಾಗಿದೆ. ಅದ್ವೈತ ತತ್ತ್ವವನ್ನು ವಿವರಿಸಬೇಕಾಗಿದೆ, ಅದನ್ನು ಸಾರ ಬೇಕಾಗಿದೆ. ಆದರೆ ಇಂಡಿಯಾ ದೇಶದಲ್ಲಿ ಇದನ್ನೆಲ್ಲಾ ಆಗಲೇ ಮಾಡಿದೆ. ಎಲ್ಲರೂ ಇದನ್ನು ಒಪ್ಪಿಕೊಂಡಿರುವರು. ಎಲ್ಲಾ ಧರ್ಮದ ಶ್ರದ್ಧೆಯೂ ಹಿಂದೂ ಧರ್ಮದ ಶಾಖೆಗಳು ಎಂಬುದನ್ನು ಜನರಿಗೆ ಹೇಳಬೇಕಾಗಿದೆ. ಶ್ರೇಷ್ಠತಮ ತತ್ತ್ವಕ್ಕೆ ವೈಷ್ಣವ ಸಿದ್ಧಾಂತವೂ ಅದ್ವೈತ ತತ್ತ್ವದಷ್ಟೇ ಮುಖ್ಯ ಎಂಬುದನ್ನು ಜನರಿಗೆ ತೋರಬೇಕಾಗಿದೆ.

ಹಿಂದೂಧರ್ಮ ಹೇಗೆ ಕ್ರಮೇಣ ಬೆಳೆಯಿತು ಎಂಬುದನ್ನು ಉತ್ಸಾಹ ದಿಂದ ವಿವರಿಸಲು ಯತ್ನಿಸುತ್ತಿದ್ದರು. ಯಾವುದಾದರೂ ಒಂದು ಘಟ ನೆಯ ಹಿಂದೆ ಇರುವ ಮಹಾಶಕ್ತಿಯನ್ನು ಹುಡುಕುವುದರಲ್ಲಿ ಉದ್ಯುಕ್ತ ರಾದರು. ಧರ್ಮ ಸಂಸ್ಥಾಪನೆಯ ಹಿಂದೆ ಇರುವ ದಾರ್ಶನಿಕನೆಲ್ಲಿ? ಆದರ್ಶವನ್ನು ಪೂರ್ಣಗೊಳಿಸುವ ಹೃದಯವೆಲ್ಲಿ? ಬುದ್ಧ ಪಂಚತತ್ತ್ವಗಳ ಸಿದ್ಧಾಂತವನ್ನು (ಆಕಾರ, ಭಾವನೆ, ವೇದನೆ, ಚಲನೆ, ಜ್ಞಾನ) ಕಪಿಲ

ನಿಂದ ಪಡೆದನು. ಆದರೆ ಬುದ್ಧ ಆ ತತ್ತ್ವಕ್ಕೆ ಪ್ರಾಣಪ್ರತಿಷ್ಠಾಪನೆ ಮಾಡುವಂತಹ ಪ್ರೀತಿಯನ್ನು ತಂದನು. ಇದರ ವಿಷಯವಾಗಿ ಯಾವುದಾದರೂ ಸ್ಥಿರ ಎಂದು ಕಪಿಲ ಹೇಳಿದನೇನು? ಯಾವುದೂ ಸ್ಥಿರವಲ್ಲ. ಅದು ಇತ್ತು ಹೋಯಿತು. "ಪ್ರತಿಯೊಂದೂ ನೀರಿನಮೇಲಿನ ಅಲೆಯಂತೆ. ಮಾನವ, ಅರಿ, ನೀನೇ ಸಾಗರ ಎಂಬುದನ್ನು."

ಶ್ರೀಕೃಷ್ಣನೇ ಹಿಂದೂ ಧರ್ಮದ ತಿರುಳು. ಅದನ್ನು ಜನ ಸಾಮಾನ್ಯರಿಗೆ ಪ್ರಚಾರಮಾಡಿದನು. ಇವನ ವಿಷಯವಾಗಿ ಪೂಜ್ಯತಮ ಭಾವನೆಗಳಿದ್ದುವು ಸ್ವಾಮಿಜಿಯವರಲ್ಲಿ. ಇದು ಬುದ್ಧನ ಮೇಲೆ ಅವರಿಗೆ ಇದ್ದ ಪರಮಪೂಜ್ಯಸ್ಥಾನಕ್ಕೆ ಸ್ವಲ್ಪ ಕೆಳಗೊ ಅಥವಾ ಸರಿಸಮನಾಗಿಯೋ ಇತ್ತು. ಶ್ರೀಕೃಷ್ಣನ ಜೀವನದ ಬಹುಮುಖತೆಯೊಂದಿಗೆ ಹೋಲಿಸಿ ನೋಡಿದರೆ ಬುದ್ಧನ ಸನ್ಯಾಸವನ್ನು ಒಂದು ದೌರ್ಬಲ್ಯವೆಂತಲೇ ಹೇಳಬಹುದಾಗಿತ್ತು. ಗೀತೆ ಎಷ್ಟು ಅದ್ಭುತವಾಗಿದೆ! ಹುಡುಗರಾಗಿ ಪಾರಾಯಣಮಾಡುತ್ತಿದ್ದಾಗ ಯಾವುದಾದರೂ ಮುಖ್ಯ ಶ್ಲೋಕಗಳು ಬಂದಾಗ ಅಲ್ಲಿಯೇ ನಿಲ್ಲಿಸುತ್ತಿದ್ದರು. ಹಲವು ದಿನಗಳವರೆಗೆ ಈ ಭಾವನೆಯಲ್ಲಿಯೇ ತನ್ಮಯರಾಗಿರುತ್ತಿದ್ದರು. "ಯಾರು ಸುಖದುಃಖ, ಶೀತೋಷ್ಣ, ವೈರಿಮಿತ್ರ ಇವರನ್ನು ಒಂದೇ ಸಮನಾಗಿ ನೋಡುವನೋ!" ಆ ಸಮರಾಂಗಣದ ವರ್ಣನೆ,—ಛಲದಿಂದ ಮಾಡಿದ ಯುದ್ಧ,—ಪ್ರಾರಂಭದಲ್ಲಿ ಶ್ರೀಕೃಷ್ಣ "ಕುತಸ್ತ್ವಾ ಕಶ್ಮಲಮಿದಂ ವಿಷಮೇಸಮುಪಸ್ಥಿತಂ" ಎನ್ನುವನು. ಎಂತಹ ಪೌರುಷದ ನುಡಿಗಳಿವು! ಆದರೆ ಜೊತೆಯಲ್ಲಿಯೇ ಸೌಂದರ್ಯವೂ ಇದೆ. ಬೌದ್ಧರ ಗ್ರಂಥಗಳಾದ ಮೇಲೆ ಗೀತೆಯನ್ನು ಓದುವುದು ಮನಸ್ಸಿಗೊಂದು ಉಲ್ಲಾಸ. ಬುದ್ಧ ಪದೇಪದೇ ನಾನು ಜನಸಾಮಾನ್ಯರಿಗೆ ಎಂದು ಹೇಳುತ್ತಿದ್ದ. ಅವನ ಹೆಸರಿನಲ್ಲಿ ಪಾಂಡಿತ್ಯ ಮತ್ತು ಕಲೆಯ ಸೊಬಗನ್ನು ನಾಶಮಾಡಿದರು. ಬೌದ್ಧರು ಮಾಡಿದ ಒಂದು ದೊಡ್ಡ ತಪ್ಪೇ ಹಳೆಯದನ್ನು ನಾಶಮಾಡಿದ್ದು.

ಬೌದ್ಧ ಗ್ರಂಥಗಳನ್ನು ಓದುವುದಕ್ಕೆ ಬೇಜಾರಾಗುವುದು. ಇದನ್ನು ಕೇವಲ ಅಜ್ಞರಿಗೆ ಬರೆದುದರಿಂದ ದೊಡ್ಡದೊಂದು ಗ್ರಂಥದಲ್ಲೆಲ್ಲಾ ಒಂದೋ ಎರಡೊ ಭಾವನೆಗಳು ಬರುತ್ತವೆ. ಇಂತಹ ಒಂದು ಕೊರತೆಯನ್ನು ತಪ್ಪಿಸುವುದಕ್ಕಾಗಿಯೇ ಪುರಾಣಗಳು ಹುಟ್ಟಿದುವು. ಈ ಆವಶ್ಯಕತೆಯನ್ನು ಭರತಖಂಡದಲ್ಲೆಲ್ಲಾ ಮನಗಂಡವನು ಒಂದು ವ್ಯಕ್ತಿ. ಅವನೇ ಕೃಷ್ಣ. ಬಹುಶಃ ಪ್ರಪಂಚದಲ್ಲಿ ಜೀವಿಸಿದ ಶ್ರೇಷ್ಠತಮ ವ್ಯಕ್ತಿ ಅವನು. ಜನರ

ಆವಶ್ಯಕತೆ ಮತ್ತು ಅದುವರೆವಿಗೂ ಏನು ಬೆಳೆದಿರುವುದೊ ಅದನ್ನೆಲ್ಲಾ ರಕ್ಷಿಸಲು ಯತ್ನಿಸುವನು. ಗೋಪಿಯ ಕಥೆ ಮತ್ತು ಗೀತೆ ಒಂದರ ಮೂಲಕ ಮಾತ್ರ ಅಲ್ಲ ಅವನು ಅವಿದ್ಯಾವಂತರ ಹೃದಯಕ್ಕೆ ಪ್ರವೇಶಮಾಡಿದ್ದು. ಮಹಾಭಾರತದಲ್ಲೆಲ್ಲಾ ಅವನೇ ಉತ್ಸವಮೂರ್ತಿ. ಅವನ ಉಪಾಸಕರು ಇದನ್ನು ಪೂರ್ಣಗೊಳಿಸಿದರು. ಇವನು ಇರುವುದೆ ಜನಸಾಮಾನ್ಯರಿಗೆ ಎಂದು ಪ್ರಾರಂಭವಾಗುವುದು.

"ವಿಷ್ಣುವಿನ ಆರಾಧನೆಯಲ್ಲಿ ಪರಿಸಮಾಪ್ತವಾಗುವ ಧರ್ಮ ಹೀಗೆ ಸೃಷ್ಟಿಯಾಯಿತು. ಇವನೇ ಲೋಕರಕ್ಷಕ ಮತ್ತು ಅದರ ಆನಂದದ ಹಿಂದೆ ಇರುವವನು. ಇವನ ಮೂಲಕ ಸಾಕ್ಷಾತ್ಕಾರವನ್ನು ಪಡೆಯಬಹುದು. ನಮ್ಮ ಕೊನೆಯ ಚಳುವಳಿಯೆ ಚೈತನ್ಯನದು. ಚೈತನ್ಯ ಆನಂದಾನುಭವಕ್ಕೆ ನಿಂತವನು. ಜೈನಧರ್ಮ ಮತ್ತೊಂದು ಅತಿರೇಕಕ್ಕೆ ಉದಾಹರಣೆಯಾಗಿದೆ. ದಂಡನೆಯಿಂದ ದೇಹವನ್ನು ಕ್ರಮೇಣ ನಾಶ ಮಾಡುವುದು. ಆದಕಾರಣವೇ ಬೌದ್ಧದರ್ಮ ಸುಧಾರಿತ ಜೈನಧರ್ಮ. ಬುದ್ಧ ಐದು ಜನ ತಪಸ್ವಿಗಳನ್ನು ಬಿಟ್ಟುಹೋದ ಎಂದು ಇದೆಯಲ್ಲ, ಇದರ ನಿಜವಾದ ಅರ್ಥವೇ ಇದು. ಭರತಖಂಡದಲ್ಲಿ ಪ್ರತಿಯೊಂದು ಕಾಲದಲ್ಲಿಯೂ ಉಗ್ರದೇಹದಂಡನೆಯಿಂದ ಮಿತಿಮೀರಿದ ದೇಹಭೋಗದವರೆಗೆ ಆದರ್ಶಗಳಿವೆ. ಅದೇಕಾಲದಲ್ಲಿ ಪ್ರತಿಯೊಂದು ಆದರ್ಶದ ಮೂಲಕವೂ ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವಂತಹ ಪಂಗಡಗಳಿವೆ. ಇಂದ್ರಿಯಗಳನ್ನು ಒಂದು ನಿಮಿತ್ತವಾಗಿ ಉಪಯೋಗಿಸಿಕೊಳ್ಳುವುದರಿಂದ ಹಿಡಿದು ಅದರ ನಾಶದವರೆಗೆ ಹಲವು ಆದರ್ಶಗಳಿವೆ. ಹಿಂದೂಧರ್ಮದಲ್ಲಿ ಯಾವಾಗಲೂ ಒಂದೇ ಕೇಂದ್ರದ ಸುತ್ತಲೂ ಎರಡು ಪಥಗಳನ್ನು ನೋಡುತ್ತೇವೆ.

"ವೈಷ್ಣವಧರ್ಮ ಹೀಗೆ ಹೇಳುವುದು: 'ತಂದೆ ತಾಯಿ ಸಹೋದರ ಪತಿ ಸುತರ ಮೇಲೆ ಇರುವ ಅದ್ಭುತವಾದ ಪ್ರೀತಿ ಒಳ್ಳೆಯದು. ಅದರಲ್ಲೇನೂ ತಪ್ಪಿಲ್ಲ. ಆದರೆ ನೀವು ಕೃಷ್ಣನನ್ನು ಮಗುವಿನಂತೆ ನೋಡಬೇಕು, ಮಗುವಿಗೆ ಆಹಾರ ಕೊಡುವಾಗ ಕೃಷ್ಣನಿಗೆ ಆಹಾರ ಕೊಡುತ್ತಿರುವೆ ಎಂದು ತಿಳಿಯಬೇಕು ಎನ್ನುವರು. ಚೈತನ್ಯ, ದೇವರನ್ನು ಇಂದ್ರಿಯಗಳ ಮೂಲಕ ಆರಾಧಿಸಿ ಎಂದ. ವೇದಾಂತ ಇಂದ್ರಿಯಗಳನ್ನು ನಿಗ್ರಹಿಸಿ ಅದಕ್ಕೆ ಅತೀತವಾಗಿ ಹೋಗಿ ಎಂದಿತು."

"ಸದ್ಯದಲ್ಲಿ ಭರತಖಂಡದಲ್ಲಿ ಮೂರು ಧರ್ಮಶಾಖೆಗಳನ್ನು ನೋಡುತ್ತೇವೆ. ಅವರೇ ಸಂಪ್ರದಾಯ ಬದ್ಧರು, ಆರ್ಯಸಮಾಜ ಮತ್ತು ಬ್ರಹ್ಮ ಸಮಾಜ. ಮಹಾಭಾರತ ಕಾಲದ ವೈದಿಕರೇ ಸಂಪ್ರದಾಯಸ್ಥರು. ಆರ್ಯ ಸಮಾಜ ಜೈನರನ್ನು ಹೋಲುವುದು. ಬ್ರಹ್ಮಸಮಾಜ ಬೌದ್ಧರನ್ನು ಹೋಲುವುದು.

"ಭರತಖಂಡ ಇನ್ನೂ ತಾರುಣ್ಯದಲ್ಲಿದೆ; ಜೀವಿಸುತ್ತಿದೆ. ಇದು ನನಗೆ ಕಾಣುತ್ತಿದೆ. ಯೂರೋಪು ಕೂಡ ತಾರುಣ್ಯದಲ್ಲಿದೆ, ಜೀವಂತ ವಾಗಿದೆ. ಇವರಲ್ಲಿ ಎರಡೂ ತಮ್ಮ ಗಂತವ್ಯವನ್ನು ಸೇರಿಲ್ಲ. ಇವೆರಡೂ ಒಂದು ಮಹಾ ಪ್ರಯೋಗದ ಸ್ಥಿತಿಯಲ್ಲಿವೆ. ಯಾವುದೂ ಪೂರ್ಣವಾಗಿಲ್ಲ. ಇಂಡಿಯಾದೇಶದಲ್ಲಿ ಎಲ್ಲರೂ ಸಮಾಜಕ್ಕೆ ಅಡಿಯಾಳಾಗಬೇಕು. ಆದರೆ ಅದ್ವೈತದ ದೃಷ್ಟಿಯಿಂದ ಪ್ರತಿಯೊಬ್ಬರೂ ತಮಗೆ ತೋರಿದ ರೀತಿಯಲ್ಲಿ ಅವನ್ನು ಉಪಾಸನೆ ಮಾಡಲು ಅವಕಾಶವಿದೆ. ಯೂರೋಪಿನಲ್ಲಿ ವ್ಯಕ್ತಿಗೆ ಸಾಮಾಜಿಕ ದೃಷ್ಟಿಯಿಂದ ಸ್ವಾತಂತ್ರ್ಯವಿದೆ. ಆದರೆ ನೀವು ದ್ವೈತಿಗಳು. ಇದು ಆಧ್ಯಾತ್ಮಿಕ ಸಮಾನತೆ. ಒಂದರಲ್ಲಿ ವೈಯಕ್ತಿಕ ಸ್ವಾತಂತ್ರ್ಯದಿಂದ ಸುತ್ತುವರಿಯಲ್ಪಟ್ಟ ಸಾಮಾಜಿಕ ಸಂಸ್ಥೆಗಳಿವೆ. ಮತ್ತೊಂದರಲ್ಲಿ ಸಮುದಾರುಕ ಆಲೋಚನೆಯಿಂದ ಸುತ್ತುವರಿಯಲ್ಪಟ್ಟ ವೈಯಕ್ತಿಕ ಸಂಸ್ಥೆಗಳಿವೆ.

"ಇಂಡಿಯಾ ಯಾವ ಮಾರ್ಗದಲ್ಲಿ ಹೋಗುತ್ತಿದೆಯೋ ಅದೇ ದಾರಿಯಲ್ಲಿ ಅದಕ್ಕೆ ಸಹಾಯಮಾಡಬೇಕು. ಇರುವ ಸ್ಥಿತಿಯಲ್ಲಿ ಅದಕ್ಕೆ ಸಹಾಯಮಾಡದ ಯಾವ ಚಳುವಳಿಯಿಂದಲೂ ಪ್ರಯೋಜನವಿಲ್ಲ. ಯೂರೋಪಿನಲ್ಲಿ ನಾನು ಮದುವೆಯಾಗಿರುವವರನ್ನು, ಆಗದೇ ಇರುವವರನ್ನು ಗೌರವಿಸುವಂತೆಯೇ ಗೌರವಿಸುತ್ತೇನೆ. ಮನುಷ್ಯ ತಾನು ಮಹಾತ್ಮನಾಗಬೇಕಾದರೆ ಎಷ್ಟುಮಟ್ಟಿಗೆ ಒಳ್ಳೆಯ ಗುಣಗಳು ಅವನಿಗೆ ಸಹಾಯಕವಾಗಿವೆಯೋ ಅಷ್ಟೇ ಮಟ್ಟಿಗೆ ಅವನ ದೌರ್ಬಲ್ಯಗಳೂ ಸಹಾಯಕವಾಗಿವೆ. ಆ ದೇಶದ ದೌರ್ಬಲ್ಯವೆಲ್ಲಾ ದೋಷಮಯ ಎಂದು ಅರಿತರೂ ಅದರ ವೈಶಿಷ್ಟ್ಯವನ್ನು ಹಾಳುಮಾಡಲು ನಾವು ಯತ್ನಿಸಕೂಡದು.

ವೈಶಿಷ್ಟ್ಯದ ವಿಷಯದಲ್ಲಿ ಸ್ವಾಮಿಜಿ ಅವರ ಅಭಿಪ್ರಾಯ ಬಹಳ ಸ್ಪಷ್ಟವಾಗಿತ್ತು. ಅವರು ಅನೇಕ ವೇಳೆ ನನಗೆ "ನೀನು ಇಂಡಿಯಾದೇಶವನ್ನು ಇನ್ನೂ ಚೆನ್ನಾಗಿ ತಿಳಿದುಕೊಂಡಿಲ್ಲ. ಅಂತೂ ಭಾರತೀಯರಾದ ನಾವೆಲ್ಲಾ ಮಾನವಾರಾಧಕರು. ನಮ್ಮ ದೇವರು ಮನುಷ್ಯ" ಎಂದರು.

ಇಲ್ಲಿ ಆತ್ಮಸಾಕ್ಷಾತ್ಕಾರವನ್ನು ಪಡೆದ ಮಹಾ ವ್ಯಕ್ತಿಗಳನ್ನು ಕುರಿತು ಹೇಳುತ್ತಿದ್ದರು. ಬುದ್ಧ ಕೃಷ್ಣ ಇವರು ಗುರುಗಳು, ಮಹಾಪುರುಷರು ಇವರು. ಮತ್ತೊಂದು ವೇಳೆ ಬೇರೆ ದೃಷ್ಟಿಯಿಂದ ಈ ಪದವನ್ನು ಉಪಯೋಗಿಸುತ್ತ "ಮಾನವಾರಾಧನೆ ಭ್ರೂಣಸ್ಥಿತಿಯಲ್ಲಿ ಭರತಖಂಡದಲ್ಲಿದೆ. ಆದರೆ ಅದನ್ನು ಚೆನ್ನಾಗಿ ವೃದ್ಧಿಪಡಿಸಿಲ್ಲ. ನೀವು ಅದನ್ನು ಪೋಷಿಸಬೇಕಾಗಿದೆ. ಅದನ್ನು ಒಂದು ಕಾವ್ಯಮಾಡಬೇಕಾಗಿದೆ. ಕಲೆ ಮಾಡಬೇಕಾಗಿದೆ. ಮಧ್ಯಕಾಲದ ಯೂರೋಪಿನಲ್ಲಿ ನೀವು ಮಾಡುತ್ತಿದ್ದಂತೆ ಭಿಕ್ಷುಕರ ಪಾದಗಳನ್ನು ತೊಳೆಯಬೇಕಾಗಿದೆ. ಮಾನವೋಪಾಸಕರನ್ನಾಗಿ ಮಾಡಬೇಕಾಗಿದೆ."

ವಿಗ್ರಹಗಳ ಉಪಯೋಗವಾಗಿಯೂ ಅವರು ಸ್ಪಷ್ಟ ಅಭಿಪ್ರಾಯವನ್ನೆ ಹೊಂದಿದ್ದರು. ವಿಗ್ರಹವೇ ದೇವರು ಎಂದು ನೀವು ಹೇಳಬಹುದು, ಆದರೆ ದೇವರೇ ವಿಗ್ರಹ ಎನ್ನಕೂಡದು. ಇದರಿಂದ ದೂರವಿರಬೇಕು ಎನ್ನುತ್ತಿದ್ದರು. ಹಾಟೆಂಟಾಟ್ ಜನರು ನಿರ್ಜೀವ ವಸ್ತುಗಳನ್ನ ದೇವರೆಂದು ಆರಾಧಿಸುತ್ತಿದ್ದುದನ್ನು ಖಂಡಿಸಿ ಎಂದು ಯಾರೊ ಸ್ವಾಮಿಜಿಗೆ ಹೇಳಿದರು. ನನಗೆ Fetishism ಎಂದರೆ ಏನೊ ಗೊತ್ತಿಲ್ಲ ಎಂದರು ಸ್ವಾಮಿಜಿ.

ಹಾಗೆಂದರೆ ಏನು ಎಂಬುದನ್ನು ಸ್ವಾಮಿಜಿಗೆ ವಿವರಿಸಿದರು. ಒಂದು ಕಾಡುವಸ್ತುವನ್ನು ಮೊದಲು ದೇವರೆಂದು ಪೂಜಿಸಿ ಅನಂತರ ಅದನ್ನು ಹೊಡೆಯುವುದು, ಅದಾದಮೇಲೆ ಪುನಃ ಅವಕ್ಕೇ ಧನ್ಯವಾದಗಳನ್ನು ಅರ್ಪಿಸುವುದು ಎಂದು ಯಾರೋ ಹೇಳಿದರು. ನಾನು ಅದನ್ನು ಮಾಡುತ್ತೇನೆ ಎಂದರು ಸ್ವಾಮಿಜಿ. ತಿಳಿಯದ ಜನರಿಗೆ ಅನ್ಯಾಯಮಾಡುತ್ತಿರುವುದಕ್ಕೆ ಇವರು ರೇಗಿ ಅನಂತರ ಹೀಗೆ ಹೇಳಿದರು: "ಇಲ್ಲಿ ಯಾವ ಫೆಟಿಸಿಸಮ್ ಕೂಡ ಇಲ್ಲ ಎನ್ನುವುದು ಇವರಿಗೆ ಗೊತ್ತಾಗುವುದಿಲ್ಲವೆ? ನಿಮ್ಮ ಹೃದಯ ಕಲ್ಲಾಗಿದೆ. ಮಗುವಿನ ದೃಷ್ಟಿಯಿಂದ ನೀವು ನೋಡಲಾರಿರಿ. ಮಗುವಿಗೆ ಎಲ್ಲಾ ಕಡೆಯಲ್ಲಿಯೂ ಒಂದು ವ್ಯಕ್ತಿ ಕಾಣುವುದು. ಅಲ್ಪಜ್ಞಾನ ನಮ್ಮಲ್ಲಿರುವ ಶಿಶುಸಹಜ ದೃಷ್ಟಿಯನ್ನು ಅಪಹರಿಸುವುದು. ಕೊನೆಗೆ ಪರಮಜ್ಞಾನ ನಮಗೆ ಅದನ್ನು ಪುನಃ ತಂದುಕೊಡುವುದು. ಅವನು ಬೆಟ್ಟ ಮರ ದೊಣ್ಣೆ ಮುಂತಾದುವುಗಳಲ್ಲಿ ಒಂದು ಜೀವ ಇದೆ ಎಂದು ಭಾವಿಸು

ವನು. ಅವುಗಳ ಹಿಂದೆ ಒಂದು ಸಚೇತನ ಶಕ್ತಿ ಇಲ್ಲವೆ? ಇದು ಫೆಟಿಸಿಸವ್ ಅಲ್ಲ, ಒಂದು ಚಿಹ್ನೆ. ನಿನಗೆ ಇದು ಗೊತ್ತಾಗುವುದಿಲ್ಲವೆ?"

ಪ್ರತಿಯೊಬ್ಬರ ದೃಷ್ಟಿಯೂ ಅವರಿಗೆ ಪವಿತ್ರವಾಗಿದ್ದರೂ ಹಿಂದೂಗಳ ತತ್ತ್ವದ ಪ್ರಾಮುಖ್ಯತೆಯನ್ನು ಅವರು ಎಂದಿಗೂ ಮರೆತವರಲ್ಲ. ಕೇವಲ ವಕೀಲರುಗಳಿಗೆ ಮಾತ್ರ ಪರಿಚಿತವಾದಂತಹ ವಾದಗಳನ್ನೂ ಅವರು ಕಾವ್ಯಮಯವಾಗಿ ಮಾಡಬಲ್ಲವರಾಗಿದ್ದರು ಅವುಗಳನ್ನು ಉದಹರಿಸುವಾಗ. ಮೀಮಾಂಸಕ ದರ್ಶನವನ್ನು ಎಷ್ಟು ವಿಶ್ವಾಸದಿಂದ ಅವರು ನೋಡುತ್ತಿದ್ದರು! ಎಂತಹ ಅಭಿಮಾನದಿಂದ ಆರ್ಯ ಋಷಿಗಳ ದೃಷ್ಟಿಯಿಂದ "ಪ್ರಪಂಚವೆಲ್ಲಾ ಕೇವಲ ಶಬ್ದಕ್ಕೆ ಇರುವ ಅರ್ಥ. ಶಬ್ದವಾದ ಮೇಲೆ ಅದಕ್ಕೆ ಸಂಬಂಧಪಟ್ಟ ವಸ್ತು ನಮಗೆ ಅರಿವಾಗುವುದು. ಆದಕಾರಣವೇ ಭಾವನೆಯೇ ಸರ್ವಸ್ವ" ಎಂಬುದನ್ನು ಕೇಳುವವರಿಗೆ ವಿಶದಪಡಿಸುತ್ತಿದ್ದರು. ಇದನ್ನು ಅವರು ವಿವರಿಸುವಾಗಲಂತೂ ಮೀಮಾಂಸಕರ ವಾದಗಳ ಹಿಂದೆ ಇರುವ ಧೈರ್ಯ, ಅವರ ಅನುಮಾನಗಳ ಹಿಂದೆ ಇರುವ ದೃಢತೆ ಮತ್ತು ದಿಟ್ಟತನದಿಂದ ಒಪ್ಪಿಕೊಳ್ಳುವುದು, ಇವೆಲ್ಲ ಹಿಂದೂಧರ್ಮದ ಮಹಿಮೆಯಂತೆ ಕಾಣುತ್ತಿದ್ದವು ತಾರ್ತಿಕವಾಗಿ ಬರುವ ನಿರ್ಣಯವನ್ನು ತಪ್ಪಿಸಿಕೊಳ್ಳಲು ಇವರು ಯತ್ನಿಸುವುದೇ ಇಲ್ಲ. ವಿಗ್ರಹಗಳನ್ನು ಪೂಜಿಸುವಾಗಲೂ ಕೇವಲ ಸ್ಥೂಲವಾದ ನಮ್ಮ ಭಾವನೆಗಳು ಇವು ಎನ್ನುವರು. ಪ್ರಾರ್ಥನೆಯಲ್ಲಿ ಎಷ್ಟು ಏಕಾಗ್ರತೆ ಇದೆಯೋ ಅದಕ್ಕೆ ತಕ್ಕ ಪ್ರಮಾಣದಲ್ಲಿ ಪ್ರಾರ್ಥನೆ ಫಲಕಾರಿಯಾಗುವುದು. ದೇವರು ಮನಸ್ಸಿನಲ್ಲೇ ಇರುವವನು ಆದರೂ ನಿಜವಾಗಿ ಹೊರಗೂ ಇರುವವನು. ಈ ವಾದಸರಣಿಯೆಲ್ಲ ವಿಗ್ರಹಭೇದಕನ ಕೈಯಲ್ಲಿ ಇರುವ ಶಸ್ತ್ರದಂತೆ ಇದೆ. ಆದರೂ ಇವುಗಳಿಂದಲೇ ಧರ್ಮವನ್ನು ವಿವರಿಸಲು ಉಪಯೋಗಿಸುವರು! ಒಂದು ದಿನ ಇವರು ಸತ್ಯಭಾಮೆಯ ವ್ರತವನ್ನು ಕುರಿತು ಮಾತನಾಡಿದರು: "ಶ್ರೀಕೃಷ್ಣನನ್ನು ತಕ್ಕಡಿಯಲ್ಲಿಟ್ಟು ತೂಗುತ್ತಿದ್ದಾಗ ಇವಳು ಶ್ರೀಕೃಷ್ಣನ ಹೆಸರನ್ನೇ ಒಂದು ಕಾಗದದ ಮೇಲೆ ಬರೆದು ತಕ್ಕಡಿಯ ಬೇರೊಂದು ಕಡೆ ಹಾಕಿದಾಗ ಇದೇ ಶ್ರೀಕೃಷ್ಣನಿಗಿಂತ ಭಾರವಾಯಿತು. ಹಿಂದೂಧರ್ಮದ ಸಂಪ್ರದಾಯಸ್ಥರು ಶೃತಿಯನ್ನೇ ಪರಮ ಪ್ರಾಮಾಣ್ಯವಾಗಿ ಮಾಡುವರು. ಎದುರಿಗೆ ಕಾಣುವ ವಸ್ತು ಎಂದೆಂದಿಗೂ ಪ್ರಪಂಚದಲ್ಲಿರುವ ಭಾವನೆಯ ಒಂದು ಸ್ಥೂಲ ಆವಿರ್ಭಾವ ಎನ್ನುವರು. ಆದಕಾರಣ ದೇವರ ಹೆಸರೇ ಸರ್ವಸ್ವ.

ದೇವರೆನ್ನುವುದೇ ಸನಾತನವಾದ ಮನಸ್ಸಿನಲ್ಲಿರುವ ಭಾವನೆಯ ಒಂದು ಸ್ಥೂಲ ಆವಿರ್ಭಾವ. ನಿನಗಿಂತ ನಿನ್ನ ಹೆಸರು ಹೆಚ್ಚು ಪರಿಪೂರ್ಣ. ದೇವರಿಗಿಂತ ದೇವರ ಹೆಸರು ಹೆಚ್ಚು. ನಿಮ್ಮ ಮಾತನ್ನು ಲಕ್ಷ್ಯದಲ್ಲಿಡಿ." ನಿಜವಾಗಿ ಹಿಂದೂಧರ್ಮದಂತೆ ಸತ್ಯಕ್ಕೆ ಅಂಜದ ಮತ್ತೊಂದು ಧರ್ಮವಿಲ್ಲ. ಇವರು ಮಾತನಾಡುತ್ತಿದ್ದಾಗ ಮಾತಿಗೆ ಅತೀತವಾದ ಒಂದು ನಂಬಿಕೆ ಇವರಲ್ಲಿ ವ್ಯಕ್ತವಾಗುತ್ತಿತ್ತು. ಪೌರಾತ್ಯರಿಗೆ ಇದು ಸ್ವತಃ ಸಿದ್ಧವಾಗಿದೆ. ಬೇರೆ ಎಲ್ಲೊ ಸ್ವಾಮಿಜಿ ಹೇಳಿದಂತೆ, ಧರ್ಮ ಎಂಬುದು ಒಂದು ಸಿದ್ಧಾಂತವಲ್ಲ; ಇದು ಅದರಂತೆ ಇರುವುದು, ಅದರಂತೆ ಆಗುವುದು. ಈ ದೃಷ್ಟಿ ನಮ್ಮನ್ನು ವೈವಿಧ್ಯತೆಯಿಂದ ಐಕ್ಯತೆಗೆ ಕೊನೆಗೆ ಒಯ್ಯುವುದು ಸತ್ಯವಾದರೆ ಎಲ್ಲವೂ ಮನಸ್ಸಿನಲ್ಲಿದೆ. ಹೊರಗೆ ಕಾಣುವ ವಸ್ತುಗಳು ಮನದಲ್ಲಿರುವ ಭಾವನೆಯ ಸ್ಥೂಲ ಆವಿರ್ಭಾವ ಎಂಬುದುಕೂಡ ಸತ್ಯವಾಗುವುದು. ಪ್ಲೇಟೋವಿನ ಗ್ರೀಕ್ ದರ್ಶನ ಮೀಮಾಂಸಕರ ದರ್ಶನದಲ್ಲಿದೆ. ಯೂರೋಪಿನಲ್ಲಿ ಯಾವುದು ಕೇವಲ ಪ್ರಾಯೋಗಿಕವಾಗಿದೆಯೋ ಅದು ವಿಚಾರ ಮತ್ತು ಆವಶ್ಯಕತೆಯಿಂದ ಪೋಶಿತ ಸಿದ್ಧಾಂತವಾಗಿದೆ ಭರತ ಖಂಡದಲ್ಲಿ. ಸತ್ಯ ಸ್ವತಸಿದ್ಧವಾದುದು ಎಂದು ಸಾರಿದಹಾಗೆಯೆ ಮತ್ತೊಂದುವೇಳೆ ಅವರು "ನಾನು ಗ್ರೀಕ್ ದೇವರುಗಳನ್ನು ಕೂಡ ಪೂಜಿಸುವುದಿಲ್ಲ. ಏಕೆಂದರೆ ಅವರು ಮಾನವಕೋಟಿಯಿಂದ ಬೇರೆ ಇದ್ದರು! ಯಾರು ನಮ್ಮಂತೆ ಇರುವರೋ, ನಮಗಿಂತ ಮೇಲಾಗಿರುವರೋ ಅವರನ್ನು ಮಾತ್ರ ಪೂಜಿಸಬೇಕು. ದೇವರಿಗೂ ನನಗೂ ಇರುವ ವ್ಯತ್ಯಾಸ ತರತಮದಲ್ಲಿ ಮಾತ್ರ ಇರಬೇಕು."

ಸ್ವಾಮಿಜಿ ತತ್ತ್ವವನ್ನು ನಿದರ್ಶಿಸುತ್ತಿದ್ದಾಗ ಕೇವಲ ಇಂತಹ ಅಲಂಕಾರಿಕ ಪ್ರಯೋಗಗಳನ್ನು ಮಾತ್ರ ಕೊಡುತ್ತಿರಲಿಲ್ಲ. ನಾವು ಯುಕ್ತಿಯನ್ನು ಅನುಸರಿಸಬೇಕೆಂದು ಅವರು ನಿರ್ದಾಕ್ಷಿಣ್ಯವಾಗಿ ಹೇಳುತ್ತಿದ್ದರು. ಹಿಂದೂ ದರ್ಶನದ ವಿಚಾರವಾಗಿ ಏನೂ ಅರಿಯದ ಪ್ರೇಕ್ಷಕರನ್ನು ಅವರಿಗೆ ಬೇಜಾರಾಗದಂತೆ ಹಲವು ಗಂಟೆಗಳವರೆಗೆ ಕೇಳುವಂತೆ ಅವರು ಮಾಡಬಲ್ಲವರಾಗಿದ್ದರು. ಅವರ ಮಾತನ್ನು ಕೇಳುತ್ತಿದ್ದರೆ ಮತ್ತಾವುದೋ ಭಾಷೆಯ ವಿಚಾರಸರಣಿಯನ್ನು ಅವರು ಅನುಸರಿಸುತ್ತಿದ್ದುದು ವೇದ್ಯವಾಗುತ್ತಿತ್ತು. ಏಕೆಂದರೆ ಅವರು ಪಾರಿಭಾಷಿಕ ಪದಗಳನ್ನು ಒಂದೊಂದು ವೇಳೆ ಒಂದೊಂದು ವಿಧವಾಗಿ ಭಾಷಾಂತರಿಸುತ್ತಿದ್ದರು.

ಹೀಗೆ ವೈಶೇಶಿಕರ ದೃಷ್ಟಿಯಿಂದ ಪ್ರಪಂಚ ಆರು ವಸ್ತುಗಳಿಂದ ಆಗಿದೆ ಎಂದು ಹೇಳಿದರು. ಇವೇ ದ್ರವ್ಯ ಗುಣ ಕರ್ಮ ಸಾಮಾನ್ಯ ಸಮವಾಯ ಮತ್ತು ವಿಶೇಷ. ಇವುಗಳೊಂದಿಗೆ ಬೌದ್ಧರ ಪಂಚತತ್ತ್ವಗಳನ್ನು ತುಲನೆಮಾಡುತ್ತಿದ್ದರು. ಇವೇ ರೂಪ ವೇದನ ಸಂಜ ಸಂಸ್ಕಾರ ಮತ್ತು ವಿಜ್ಞಾನ. ಬೌದ್ಧರಲ್ಲಿ ಬರುವ ನಾಮ ಇವುಗಳೆಲ್ಲದರ ಪ್ರತಿಫಲ. ನಾಮವೇ ಪ್ರತ್ಯೇಕ ಇರಲಾರದು. ಆದಕಾರಣವೆ ಬೌದ್ಧರ ಗುರಿ ಪಂಚತತ್ತ್ವಗಳಾಚೆ ಇದೆ. ಇದರ ಜೊತೆಗೆ ವೇದಾಂತದ (ಮತ್ತು ಕ್ಯಾಂಟಿಗೆ ಸೇರಿದ) ದೇಶಕಾಲ ನಿಮಿತ್ತವೆಂಬ ಪ್ರಾತಿಭಾಸಿಕ ವಸ್ತುವನ್ನು ಉಲ್ಲೇಖಿಸುತ್ತಿದ್ದರು. ಇವು ಮಾಯ ಅಂದರೆ ಇವೆ ಎಂತಲೂ ಹೇಳಲಾಗುವುದಿಲ್ಲ, ಇಲ್ಲ ಎಂತಲೂ ಹೇಳಲಾಗುವುದಿಲ್ಲ. ಇದರ ದೃಷ್ಟಿಯಲ್ಲಿ ಯಾವುದು ನಮಗೆ ಕಾಣುವುದೊ ಅದು ಸತ್ಯವಲ್ಲ ಎಂಬುದು ಸ್ಪಷ್ಟವಾಯಿತು. ಇದು ಎಂದೆಂದಿಗೂ ಬದಲಾಯಿಸುತ್ತಿರುವುದು. ಇರುವುದೊಂದು, ಆದರೆ ವಿಕಾಸದ ದೃಷ್ಟಿಯಿಂದ ನೋಡಿದಾಗ ಇದು ಹಲವದರಂತೆ ಕಾಣುತ್ತಿದೆ. ಮಾಯೆಯಲ್ಲಿ ಕ್ರಮಸಂಕೋಚ ( Involution ) ಮತ್ತು ಕ್ರಮವಿಕಾಸ ( Evolution ) ಎರಡೂ ಒಂದರಂತೆಯೇ ಕಾಣುವುದು. ಇವೆಂದಿಗೂ ಸತ್ಯದಲ್ಲಿ ಇಲ್ಲ, ಅದು ಎಂದೆಂದಿಗೂ ಒಂದೇ ಸಮನಾಗಿ ಉಳಿದಿರುವುದು.

ಹಿಂದೂಜನಾಂಗದ ಪುನರುದ್ಧಾರದ ಸಮಯದಲ್ಲಿ ಪಾಶ್ಚಾತ್ಯ ಊಹಾಪೋಹಗಳನ್ನು ನಿರ್ಲಕ್ಷಿಸಲಿಲ್ಲ. ಏಕೆಂದರೆ ಇವರಲ್ಲಿರುವ ಅನ್ವೇಷಣಾ ಮನೋಭಾವ, ಪರೀಕ್ಷಾಮನೋಭಾವ, ವಿಚಾರಸರಣಿ ಇವುಗಳನ್ನೆಲ್ಲಾ ಲಕ್ಷಿಸುತ್ತಿದ್ದರು. ಇಲ್ಲಿ ಅಂದು ಮತ್ತು ಇಂದು ಎಂಬ ಕೃತಕ ಭೇದಭಾವಗಳಿರಲಿಲ್ಲ. ಆಧುನಿಕ Syllogism ಜೊತೆಗೆ ಪಂಚಪ್ರಮಾಣಗಳನ್ನು ಉದಹರಿಸುತ್ತಿದ್ದರು. ಇವೇ ಪ್ರತ್ಯಕ್ಷ ಅನುಮಾನ ಉಪಮಾನ ಮತ್ತು ಶಬ್ದ. ಈ ನ್ಯಾಯದ ಪ್ರಕಾರ ಆಧುನಿಕರ Induction ಮತ್ತು Deduction ಇವುಗಳನ್ನು ಒಪ್ಪಿಕೊಳ್ಳುತ್ತಿರಲಿಲ್ಲ. ಅನುಮಾನ ಯಾವಾಗಲೂ ಸಾಮಾನ್ಯದಿಂದ ವಿಶೇಷಕ್ಕೆ ಬರುವುದು ಅಥವಾ ವಿಶೇಷದಿಂದ ಸಾಮಾನ್ಯಕ್ಕೆ ಹೋಗುವುದು. ಪ್ರತ್ಯಕ್ಷದ ಮೇಲೆ ನಿಂತ ಅನುಮಾನವನ್ನು ಮೂರು ವಿಭಾಗ ಮಾಡಿದ್ದರು. ಮೊದಲನೆಯದು ಕಾರಣದಿಂದ ಕಾರ್ಯಕ್ಕೆ ಬರುವುದು, ಎರಡನೆಯದು ಕಾರ್ಯದಿಂದ ಕಾರಣವನ್ನು ಊಹಿಸುವುದು, ಮೂರನೆಯದೆ ಸುತ್ತುಮುತ್ತಲ ಘಟನೆಗಳ ಹೆಚ್ಚು ಕಡಿಮೆಯಿಂದ ಕಾರಣ

ವನ್ನು ಊಹಿಸುವುದು. ಅನುಮಾನ ಐದು ಬಗೆಯಾಗಿತ್ತು. ಮೊದಲನೆಯದೆ Agreement (ಹೋಲಿಕೆ). ಎರಡನೆಯದೆ Difference (ವ್ಯತ್ಯಾಸ) ಮೂರನೆಯದೆ Agreement & Difference. (ಹೋಲಿಕೆ ಮತ್ತು ವ್ಯತ್ಯಾಸಗಳು ಎರಡೂ ಸೇರಿರುವುದು, ಸ್ವಲ್ಪ Agreement ಸ್ವಲ್ಪ Difference ಇರುವುದು). ಕೊನೆ ಎರಡು Residuem. ಇದರಲ್ಲಿ ಮೂರನೆಯದೆ ಸರಿಯಾದ ಪ್ರಮಾಣವಾಗಬಲ್ಲದು ಎಂಬುದು ನಿರ್ವಿವಾದವಾಯಿತು. ಪ್ರಮಾಣ ಸತ್ಯವಾಗಬೇಕಾದರೆ Positive ಮತ್ತು Negative ಎರಡು ದೃಷ್ಟಿಯಿಂದಲೂ ಅದನ್ನು ವಿಶದಪಡಿಸಬೇಕಾಗಿದೆ. ಈ ದೃಷ್ಟಿಯಿಂದ ದೇವರು ಪ್ರಪಂಚಕ್ಕೆ ಕಾರಣ ಎಂದು ನಾವು ಎಂದಿಗೂ ಸಮರ್ಥಿಸಲಾರೆವು.

"ವ್ಯಾಪಿತ್ವದ ಮತ್ತೊಂದು ಸಂಗತಿ ಇದೆ. ಕಲ್ಲೊಂದು ಬಿದ್ದು ಕೀಟವನ್ನು ನಾಶಮಾಡುವುದು. ಇದರಿಂದ ಬೀಳುವ ಕಲ್ಲುಗಳೆಲ್ಲ ಕೀಟವನ್ನು ನಾಶಮಾಡುವುದು ಎಂದು ನಾವು ಊಹಿಸುವೆವು. ನಮ್ಮ ಅನುಭವವನ್ನು ನಾವು ತಕ್ಷಣ ಏತಕ್ಕೆ ಹೀಗೆ ಉಪಯೋಗಿಸುತ್ತೇವೆ? ನಮ್ಮ ಅನುಭವ ಯಾವುದೊ ಬಿದ್ದ ಒಂದು ಕಲ್ಲು ಕೀಟವನ್ನು ನಾಶಮಾಡಿದೆ ಎಂದು ಮಾತ್ರ ಹೇಳುವುದು. ಇದು ಮೊದಲನೆ ಸಲ ಮಾತ್ರ ಆಯಿತು ಎಂದು ಭಾವಿಸಿ. ಮಗುವನ್ನು ಮೇಲಕ್ಕೆ ಎಸೆದರೆ ಅದು ಅಳುವುದು. ಇದಕ್ಕೆ ಕಾರಣ ಹಿಂದಿನ ಅನುಭವ. ಆದರೆ ಇದನ್ನು ಭವಿಷ್ಯಕ್ಕೆ ಏತಕ್ಕೆ ಉಪಯೋಗಿಸುವಿರಿ? ಏಕೆಂದರೆ ಒಂದು ಸಂಬಂಧ ಇದೆ, ಹಿಂದೆ ಯಾವುದು ಆಯಿತೊ ಅದೇ ಮುಂದೆಯೂ ಆಗುವುದು. ಆದರೆ ಘಟನೆ ಆದಾಗ ಹಿಂದೆ ಇದ್ದ ವಿವರಣೆಗಳೆಲ್ಲವೂ ಇರಬೇಕು. ಈ ವಿವೇಕದ ಮೇಲೆ ಮಾನವನ ಜ್ಞಾನವೆಲ್ಲ ನಿಂತಿರುವುದು.

"ಪ್ರತ್ಯಕ್ಷ ಒಂದೇ ಸರಿಯಾದ ಪ್ರಮಾಣ. ಆದರೆ ಆ ಪ್ರತ್ಯಕ್ಷವನ್ನು ನೋಡುವ ಯಂತ್ರಮಾತ್ರ ಸರಿಯಾಗಿರಬೇಕು. ಮತ್ತು ಆ ಅನುಭವ ದೀರ್ಘಕಾಲ ಇರಬೇಕು. ಅನಾರೋಗ್ಯ ಮತ್ತು ಉದ್ವೇಗಗಳು ನೋಡುವವನನ್ನು ಚಂಚಲಗೊಳಿಸುವುವು. ಆದಕಾರಣ ಪ್ರತ್ಯಕ್ಷಪ್ರಮಾಣ ಕೂಡ ಒಂದು ಬಗೆಯ ಅನುಮಾನವೆ. ಆದಕಾರಣ ಮಾನವನ ಜ್ಞಾನವೆಲ್ಲ ಅನಿಶ್ಚಿತ ಮತ್ತು ತಪ್ಪಾಗಿರಬಹುದು. ನಿಜವಾದ ಸಾಕ್ಷಿ ಯಾರು? ಯಾರಿಗೆ ವಸ್ತು ಪ್ರತ್ಯಕ್ಷ ಕಾಣುತ್ತಿದೆಯೊ ಅವನು ಮಾತ್ರ. ಆದಕಾರಣವೆ

ವೇದ ಸತ್ಯ. ಏಕೆಂದರೆ ಇದು ಯೋಗ್ಯವ್ಯಕ್ತಿಗಳ ಆಪ್ತವಾಕ್ಯ. ಆದರೆ ಹೀಗೆ ನೋಡುವ ಶಕ್ತಿ ಯಾರಿಗಾದರೂ ಮೀಸಲಾಗಿದೆಯೆ? ಇಲ್ಲ. ಋಷಿ ಆರ್ಯರು ಮತ್ತು ಮ್ಲೇಚ್ಛರು ಎಲ್ಲರೂ ಬೇಕಾದರೆ ಇದನ್ನು ಪಡೆಯ ಬಹುದು.

"ಆಧುನಿಕ ವಂಗದೇಶದವರು ಆಪ್ತವಾಕ್ಯಕೂಡ ಒಂದು ಬಗೆಯ ವಿಶೇಷವಾದ ಪ್ರತ್ಯಕ್ಷಪ್ರಮಾಣವೆ ಆಯಿತು ಎನ್ನುವರು. ಉಪಮಾನ ಮತ್ತು ಸಾದೃಶ್ಯ ಇವು ತಪ್ಪು ಅನುಮಾನವಾದುವು. ಆದಕಾರಣ ನಿಜ ವಾದ ಪ್ರಮಾಣ ಎರಡೇ, ಅವೇ ಪ್ರತ್ಯಕ್ಷ ಮತ್ತು ಅನುಮಾನ.

"ಕೆಲವರು ಬಾಹ್ಯಕ್ಕೆ ಪ್ರಾಧಾನ್ಯತೆ ಕೊಡುವರು, ಮತ್ತೆ ಕೆಲವರು ಆಂತರಿಕ ಭಾವನೆಗಳಿಗೆ ಪ್ರಾಧಾನ್ಯತೆ ಕೊಡುವರು. ಇದರಲ್ಲಿ ಯಾವುದು ಮೊದಲು? ಹಕ್ಕಿಯೆ ಆಮೇಲೆ ಮೊಟ್ಟೆಯೆ? ಅಥವಾ ಮೊದಲು ಮೊಟ್ಟೆಯೆ ಆಮೇಲೆ ಹಕ್ಕಿಯೆ? ಎಣ್ಣೆ ಬಟ್ಟಲನ್ನು ಹಿಡಿದಿದೆಯೆ, ಬಟ್ಟಲು ಎಣ್ಣೆ ಯನ್ನು ಹಿಡಿದಿದೆಯೆ? ಈ ಸಮಸ್ಯೆಗೆ ಪರಿಹಾರವೇ ಇಲ್ಲ. ಇದನ್ನು ತ್ಯಜಿಸಿ, ಮಾಯೆಯಿಂದ ಪಾರಾಗಿ."

---

## ೧೬

## ಪಾಶ್ಚಾತ್ಯದೇಶದಲ್ಲಿ ಸ್ವಾಮಿಜಿಯವರೊಡನೆ ಕೆಲವು ದಿನಗಳು

ಜುಲೈ ಮೂವತ್ತೊಂದರಲ್ಲಿ ನಾವು ಲಂಡನ್ ತಲಪಿದೆವು. ನಾನು ಎಂದೆಂದಿಗೂ ಮರೆಯದಿರುವ ಸಮುದ್ರಪ್ರಯಾಣ ಕೊನೆಗೊಂಡಿತು. ಸ್ವಾಮಿಜಿ ಎಂಬಲ್‌ಡನ್ನಿನಲ್ಲಿ ಕೆಲವು ವಾರಗಳು ಕಳೆದರು. ಆದರೆ ಆ ಸಮಯದಲ್ಲಿ ಅವರ ಅನೇಕ ಸ್ನೇಹಿತರು ಊರಿನಲ್ಲಿ ಇರಲಿಲ್ಲ. ಅಮೆರಿಕಾ ದಿಂದ ಇವರಿಗೆ ಬರಬೇಕೆಂದು ಪತ್ರಗಳು ಬರುತ್ತಿದ್ದವು. ಶೀಘ್ರದಲ್ಲಿಯೇ ಅವರು ಅಮೆರಿಕಾದೇಶಕ್ಕೆ ಹೊರಟರು. ಅಲ್ಲಿ ಹಡ್‌ಸನ್ ನದೀತೀರದ ಒಂದು ಸುಂದರವಾದ ಮನೆಯಲ್ಲಿ ಮುಂದಿನ ಕೆಲಸಕ್ಕಾಗಿ ಕಾಯುತ್ತ ಕುಳಿತರು. ಒಂದು ತಿಂಗಳ ನಂತರ ನಾನು ಕೂಡ ಅವರಿದ್ದ ಮನೆಗೇ ಬಂದೆ. ಅಲ್ಲಿ ಪ್ರತಿದಿನವೂ ಅವರನ್ನು ನೋಡುತ್ತಿದ್ದೆ. ಸುಮಾರು ಆರು ಏಳುವಾರಗಳವರೆಗೂ ಅಲ್ಲಿದ್ದೆ. ಅನಂತರ ನಮ್ಮ ಗುಂಪಿನವರೆಲ್ಲ ಚದುರಿ ಹೋದರು. ಸ್ವಾಮಿಜಿ ನ್ಯೂಯಾರ್ಕ್ ಮತ್ತು ಸುತ್ತಮುತ್ತ ಹೋಗಿ ಬಂದರು. ತಿಂಗಳ ಕೊನೆಗೆ ಕ್ಯಾಲಿಫೋರ್ನಿಯಾಕ್ಕೆ ಹೋಗುವುದಕ್ಕಾಗಿ ಅವರು ಚಿಕಾಗೊ ಮೇಲೆ ಹೋದರು. ಅದಾದಮೇಲೆ ನಾನು ಸ್ವಾಮಿಜಿ ಯನ್ನು ಜೂನ್ ತಿಂಗಳಲ್ಲಿ [೧೯೦೦] ಚಿಕಾಗೊನಗರದಲ್ಲಿ ನೋಡಿದೆ. ಅಲ್ಲಿ ಕೆಲವು ವಾರಗಳು ಮತ್ತು ಅನಂತರ ಪ್ಯಾರಿಸ್ಸಿನಲ್ಲಿ ಕೆಲವು ವಾರಗಳು ಅವರನ್ನು ಮಧ್ಯೆ ಮಧ್ಯೆ ನೋಡುತ್ತಿದ್ದೆ. ಕೊನೆಗೆ ಸೆಪ್ಟೆಂಬರ್ ತಿಂಗಳಲ್ಲಿ ಬ್ರಿಟನಿಯಲ್ಲಿ ಸ್ವಾಮಿಜಿಯ ಅಮೆರಿಕಾ ಸ್ನೇಹಿತರೊಡನೆ ನಾನು ಕೆಲವು ದಿನಗಳು ಕಳೆದೆ. ಅವರ ಕೆಳಗೆ ಹಲವು ವರುಷ ಶಿಕ್ಷಣ ಪಡೆದ ಪವಿತ್ರ ಸ್ಮೃತಿ ಕೊನೆಗಾಣುವುದು. ನಾನು ಅನಂತರ ನನ್ನ ಗುರುದೇವನನ್ನು ೧೯೦೨ ನೇ ಪ್ರಾರಂಭದಲ್ಲಿ ಕಂಡಾಗ ಅವರ ಕಟ್ಟಕೊನೆಯ ಆಶೀರ್ವಾದ ವನ್ನು ಪಡೆ ದು ಅವರನ್ನು ಬೀಳ್ಕೊಡುವುದಕ್ಕೆ ಬಂದಂತೆ ಆಯಿತು.

ಶಿಷ್ಯ ಯಾವಾಗಲೂ ಶಾಂತವಾಗಿ ಗುರುವಿನಿಂದ ಬರುವುದನ್ನೆಲ್ಲಾ ಸ್ವೀಕರಿಸುತ್ತಿರು ವನು. ಆದರೆ ಗುರುವಿನ ಸಮೀಪ್ಯದಿಂದ ದೂರವಾ ದೊಡನೆಯೆ ಶಿಷ್ಯ ಪ್ರಚಂಡ ಸಾಧನೆಯಲ್ಲಿ ತತ್ಪರನಾಗುವನು. ಇದನ್ನೇ ನನ್ನ ಗುರುದೇವ ಶಿಷ್ಯರಿಂದ ನಿರೀಕ್ಷಿಸುತ್ತಿದ್ದುದು. ಯಾರಾದರೂ ಮಠಕ್ಕೆ ಹೊಸದಾಗಿ ಸೇರಿ ದವರು ಕೆಲವುವಾರ ಅಥವಾ ತಿಂಗಳುಗಳಾದ ಮೇಲೆ

ಆತ ನಾನು ಏನು ಮುಂದುವರಿದಂತೆ ಕಾಣಲಿಲ್ಲ ಎಂದಾಗ ಅವರನ್ನು ಪುನಃ ಪ್ರಪಂಚಕ್ಕೆ ಸ್ವಲ್ಪಕಾಲ ಕಳುಹಿಸುತ್ತಿದ್ದರು. ಆಗ ಅಲ್ಲಿಯ ಪರಿಸ್ಥಿತಿಯೊಂದಿಗೆ ಹೋಲಿಸಿದಾಗ ಶಿಷ್ಯನಿಗೆ ಅರಿವಾಗುತ್ತಿತ್ತು ತಾನು ಎಷ್ಟು ಮುಂದುವರಿದಿರುವೆನು ಎಂಬುದು. ಹೀಗೆ ಸ್ವಾಮಿಜಿಯೇ ಒಮ್ಮೆ ಹೇಳಿದರು. ಅವರಿಂದ ಪ್ರತಿಯೊಂದು ಸಲಿ ಬೀಳ್ಕೊಡುವಾಗಲೂ ಜೀವನದಲ್ಲಿ ಹೋರಾಡುವಾಗ ಎಂತಹ ಆದರ್ಶವಿಟ್ಟುಕೊಂಡಿರಬೇಕೆಂಬುದನ್ನು ನಮ್ಮೆದೆಗೆ ತಾಕುವಂತೆ ಹೇಳುತ್ತಿದ್ದರು. ಒಂದು ಸಲಿ ಹುಡುಗಿಯೊಬ್ಬಳು ಗಂಡನನ್ನು ಬೀಳ್ಕೊಡುವಾಗ ಅಳುವುದನ್ನು ನೋಡಿ ಸ್ವಾಮಿಜಿ "ವೀರ ಕ್ಷತ್ರಿಯ ರಮಣಿಯಾಗು" ಎಂದರು. ಈ ಮಾತುಗಳು ಒಳ್ಳೆಯ ಮಂತ್ರ ಹಾಕಿದಂತೆ ಪರಿಣಾಮಕಾರಿಯಾಯಿತು. ಚಿಕಾಗೊ ನಗರದಲ್ಲಿ ಅವರನ್ನು ಬೀಳ್ಕೊಡುವಾಗ ಅವರಾಡಿದ ಕೊನೆಯಮಾತೆ "ನೆನಪಿನಲ್ಲಿ ಇಡೀ ಭರತ ಖಂಡದ ಸಂದೇಶವೇ ಆತ್ಮ ಪ್ರಕೃತಿಗಲ್ಲ ಇರುವುದು, ಪ್ರಕೃತಿ ಆತ್ಮನಿಗಾಗಿ" ಎಂಬುದು.

ಸೆಪ್ಟೆಂಬರ್ ೧೯೦೦ ರಲ್ಲಿ ನಾನು ಅವರನ್ನು ಬೀಳ್ಕೊಟ್ಟು ಒಬ್ಬಳೆ ಇಂಗ್ಲೆಂಡಿಗೆ ಹೋಗುವುದರಲ್ಲಿದ್ದೆ. ಅಲ್ಲಿ ನನ್ನ ಇಂಡಿಯಾ ಕೆಲಸಕ್ಕೆ ಸ್ನೇಹಿತರು ಮತ್ತು ಇತರ ಸಹಾಯ ದೊರಕುವುದೇನೊ ಎಂದು ನೋಡುವುದಕ್ಕೆ ಹೋಗುತ್ತಿದ್ದೆ. ನಾನು ಇಂಗ್ಲೆಂಡಿನಲ್ಲಿ ಎಷ್ಟು ದಿನಗಳು ಇರಬೇಕಾಗುವುದೊ ಅದು ಗೊತ್ತಿರಲಿಲ್ಲ. ನನ್ನ ಮನಸ್ಸಿನಲ್ಲಿ ಯಾವ ಯೋಚನೆಯೂ ಇರಲಿಲ್ಲ. ಪರದೇಶದ ಸ್ನೇಹಿತರನ್ನು ನೆಚ್ಚುವುದಕ್ಕೆ ಆಗುವುದಿಲ್ಲ ಎಂಬ ಭಾವನೆ ಸ್ವಾಮಿಜಿ ಮನಸ್ಸಿನಲ್ಲಿ ಮೂಡಿರಬಹುದು. ಎಷ್ಟೋ ಜನ ಹೀಗೆಯೇ ಅವರಿಗೆ ಕೈಕೊಟ್ಟಿದ್ದರು. ಮುಂದೆ ಏನಾದರೂ ಹೀಗೆ ಆದರೆ ಅದಕ್ಕೆ ಅವರು ಸಿದ್ಧರಾಗಿದ್ದರು ಎಂದು ಕಾಣುವುದು. ಆದರೆ ಶಿಷ್ಯೆಯ ಜೀವನದಲ್ಲಿ ಇದೊಂದು ಸಂದಿಗ್ಧ ಸಮಯವಾಯಿತು. ಇದು ಸ್ವಾಮಿಜಿ ಅವರಿಗೆ ತಿಳಿಯದೆ ಇರಲಿಲ್ಲ. ನಾನು ಬ್ರಿಟೀನಿಯಲ್ಲಿ ಕಳೆದ ಕೊನೆಯ ರಾತ್ರಿ ನಮ್ಮ ಊಟವಾದ ಮೇಲೆ ಸ್ವಾಮಿಜಿ ನಮ್ಮ ಕೋಣೆಯ ಹೊರಗೆ ಬಂದು ತೋಟದೊಳಕ್ಕೆ ಬರುವಂತೆ ಹೇಳಿದರು. ನಾನು ಹೊರಗೆ ಬಂದು ನೋಡಲಾಗಿ ಸ್ವಾಮಿಜಿ ಮತ್ತೊಬ್ಬ ಸ್ನೇಹಿತರೊಡನೆ ಅವರಿಬ್ಬರೂ ಇದ್ದ ಬೇರೊಂದು ಮನೆಗೆ ಹೋಗುವುದಕ್ಕೆ ಮುಂಚೆ ನನ್ನನ್ನು ಬೀಳ್ಕೊಟ್ಟು ಆಶೀರ್ವದಿಸುವುದಕ್ಕೆ ಬಂದಿದ್ದರು.

ನನ್ನನ್ನು ನೋಡಿದಾಗ ಅವರು ಹೀಗೆಂದರು: "ಮಹಮ್ಮದೀಯ ರಲ್ಲಿ ಒಂದು ವಿಚಿತ್ರ ಪಂಗಡ ಇದೆ. ಅವರು ಹೊಸದಾಗಿ ತಮಗಾದ ಮಕ್ಕಳನ್ನು ಹೊರಗಿಟ್ಟು "ದೇವರು ನಿನ್ನನ್ನು ಮಾಡಿದ್ದರೆ ನಾಶವಾಗು, ಅಲಿ ನಿನ್ನನ್ನು ಮಾಡಿದ್ದರೆ ಜೀವಿಸು" ಎಂದು ಹೇಳುತ್ತಿದ್ದರು. ಯಾವು ದನ್ನು ಅವರು ಮಗುವಿಗೆ ಹೇಳುತ್ತಿದ್ದರೋ ಅದನ್ನೇ ಬೇರೆ ಅರ್ಥದಲ್ಲಿ ನಿನಗೆ ಈ ರಾತ್ರೆ ಹೇಳುತ್ತೇನೆ: 'ಪ್ರಪಂಚಕ್ಕೆ ಹೋಗು, ನಾನು ನಿನಗೆ ಕಾರಣ ನಾಗಿದ್ದರೆ ನಾಶವಾಗು, ಜಗನ್ಮಾತೆ ಅದಕ್ಕೆ ಕಾರಣವಾಗಿದ್ದರೆ ಬದುಕು.'"

ಆದರೂ ಮಾರನೆ ದಿನ ಹೊತ್ತಿಗೆ ಮುಂಚೆಯೇ ಬೀಳ್ಕೊಡಲು ಪುನಃ ಬಂದರು. ನಾನು ಯೂರೋಪಿನಲ್ಲಿ ಅವರನ್ನು ಕಂಡ ಕೊನೆ ದೃಶ್ಯ ಜ್ಞಾಪಕ ಬರುವುದು. ಲ್ಯಾನಿಯಾನ್ ಗ್ರಾಮದಲ್ಲಿ ಮನೆಯ ಮುಂದೆ ನಿಂತಿರುವ ಹಳ್ಳಿಯ ಗಾಡಿಯೊಳಗೆ ನಾನಿದ್ದೆ. ಹೊರಗೆ ಪ್ರಾತಃಕಾಲದ ಆಗಸದ ಹಿನ್ನೆಲೆಯಲ್ಲಿ ಸ್ವಾಮಿಜಿ ಕರಗಳನ್ನು ಮೇಲೆತ್ತಿ ನನ್ನನ್ನು ಆಶೀರ್ವ ದಿಸುವಂತೆ ನಿಂತಿದ್ದರು.

ಅಮೆರಿಕಾ ಮತ್ತು ಯೂರೋಪಿನ ಜೀವನದಲ್ಲೆಲ್ಲ ಸ್ವಾಮಿಜಿ ಸುತ್ತ ಲಿನ ವಾತಾವರಣವನ್ನು ಸ್ವಲ್ಪವೂ ಲಕ್ಷಿಸುತ್ತಿರಲಿಲ್ಲ ಎಂಬುದನ್ನು ಗಮನಿ ಸಬಹುದು. ಈಗಿನವರು ಯಾವುದನ್ನು ಪ್ರಮುಖವಾಗೆಣಿಸುವರೊ ಅವರು ಅದನ್ನು ಗಮನಿಸುತ್ತಲೇ ಇರಲಿಲ್ಲ. ಜಯ ಬಂದಾಗ ಅವರೆಂದಿಗೂ ಆಶ್ಚರ್ಯಪಡಲಿಲ್ಲ. ಏಕೆಂದರೆ ಯಾವ ಮಹಾಶಕ್ತಿ ತಮ್ಮ ಮೂಲಕ ಕೆಲಸ ಮಾಡುತ್ತಿದೆ ಎಂಬುದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಸೋಲಾದಾಗಲೂ ಅವರು ಉದ್ವಿಗ್ನರಾಗುತ್ತಿರಲಿಲ್ಲ. ಜಯಾಪಜಯಗಳೆರಡೂ ಬಂದು ಹೋಗುತ್ತಿದ್ದುವು ಅಷ್ಟೆ. ಸ್ವಾಮಿಜ ಕೇವಲ ಸಾಕ್ಷಿಯಾಗಿದ್ದರು. "ಪ್ರಪಂಚವೇ ಮಂಗಮಾಯವಾದರೂ ನಾನೇಕೆ ವ್ಯಥೆಪಡಬೇಕು. ನನ್ನ ಸಿದ್ಧಾಂತದ ಪ್ರಕಾರ ಹೀಗೆ ಆದರೆ ಅದೇ ಬಹಳ ಮೇಲು" ಎಂದರು. ಸ್ವಲ್ಪ ಗಂಭೀರವಾಗಿ ಪುನಃ "ಯಾವುದು ಈಗ ನನಗೆ ವಿರೋಧವಾಗಿದೆಯೊ ಇವುಗಳೆಲ್ಲ ಕೊನೆಗೆ ನನ್ನೊಡನೆ ಇರಬೇಕಾಗಿದೆ. ನಾನು ಅವಳ ಯೋಧ ನಲ್ಲವೆ?" ಎಂದರು.

ಸ್ವಾಮಿಜಿ ಭೋಗಜೀವನದ ಮಧ್ಯೆ ನಿರ್ಭೀತಿಯಿಂದ ಸ್ವಲ್ಪವೂ ಅನುಮಾನವಿಲ್ಲದೆ ಸಂಚರಿಸುತ್ತಿದ್ದರು. ಭರತಖಂಡದಲ್ಲಿದ್ದಾಗ ಸಾಧಾರಣ ಜನರು ಧರಿಸುವ ಎರಡು ಬಟ್ಟೆ, ನೆಲದ ಮೇಲೆ ಕುಳಿತುಕೊಳ್ಳುವುದು,

ಬೆರಳಿನಿಂದ ಊಟಮಾಡುವುದು ಇವುಗಳನ್ನೆಲ್ಲಾ ಹೇಗೆ ನೋಡುತ್ತಿದ್ದರೊ ಅಮೆರಿಕಾ ಅಥವಾ ಫ್ರಾನ್ಸ್‌ದೇಶದ ಭೋಗ ಜೀವನವನ್ನೂ ಅಷ್ಟೇ ಅನುಮಾನವಿಲ್ಲದೆ ಸ್ವೀಕರಿಸಿದರು. ಸನ್ಯಾಸಿ ಮತ್ತು ರಾಜ ಇಬ್ಬರೂ ಒಂದೇ ನಾಣ್ಯದ ಎರಡು ಕಡೆಯಂತೆ. ಎಲ್ಲಾ ಶ್ರೇಷ್ಠ ವಸ್ತುಗಳನ್ನೂ ಅನುಭವಿಸುವುದು ಎಲ್ಲವನ್ನೂ ತ್ಯಜಿಸುವುದಕ್ಕಿಂತ ಒಂದು ಮೆಟ್ಟಲು ಕೆಳಗೆ ಇದೆ. ಹಿಂದೆ ಭರತಖಂಡ ಬಡತನಕ್ಕೂ ಹೆಚ್ಚುಗಾರಿಕೆ ಕೊಟ್ಟಿತ್ತು. ಇನ್ನು ಮುಂದೆ ಸ್ವಲ್ಪ ಹೆಚ್ಚುಗಾರಿಕೆಯನ್ನು ಐಶ್ವರ್ಯಕ್ಕೆ ಕೊಡಬೇಕಾಗಿದೆ.

ಪಾಶ್ಚಾತ್ಯರ ಆತಿಥ್ಯವನ್ನು ಮನೆಯಿಂದ ಮನೆಗೆ ಸ್ವೀಕರಿಸುತ್ತಿರುವಾಗ ಬಹುಬೇಗ ವ್ಯತ್ಯಾಸವಾಗುವುದು ಅನಿವಾರ್ಯ. ಆದರೆ ಸ್ವಾಮಿಜಿ ಇದನ್ನು ಗಮನಿಸುವಂತೆಯೇ ಕಾಣುತ್ತಿರಲಿಲ್ಲ. ಯಾವ ಪರಿಸ್ಥಿತಿಯಾಗಲಿ, ಸಂಸ್ಥೆಯಾಗಲಿ ಇವರಿಗೂ ಮತ್ತೊಂದು ಮಾನವಕೋಟಿಗೂ ಮಧ್ಯೆ ನಿಲ್ಲುತ್ತಿರಲಿಲ್ಲ. ಅವರು ತಾವು ಬೋಧಿಸುತ್ತಿದ್ದ ಎಲ್ಲರಲ್ಲಿಯೂ ಪರಮಾತ್ಮನಿರುವನು ಎಂಬುದು ಸಾರ್ವಭೌಮ ಸರ್ಕಾರದ ಶ್ರೀಮಂತರೊಂದಿಗೆ ಮಾತನಾಡುತ್ತಿರಲಿ, ಅಮೆರಿಕಾದೇಶದ ಕೋಟ್ಯಾಧೀಶ್ವರರೊಂದಿಗೆ ಮಾತನಾಡುತ್ತಿರಲಿ ಅಥವಾ ಅತಿದೀನದಳಿತರೊಡನೆ ಮಾತನಾಡುತ್ತಿರಲಿ, ಎಲ್ಲರಲ್ಲಿಯೂ ನೇರವಾಗಿ ವ್ಯಕ್ತಪಡಿಸುತ್ತಿದ್ದರು. ಆದರೆ ಯಾವಾಗಲೂ ಸರಳಜೀವಿಗಳ ಮೇಲೆ ಇವರ ಪ್ರೀತಿ ವಿಶ್ವಾಸವೆಲ್ಲ ಅಧಿಕ ಪ್ರಮಾಣದಲ್ಲಿತ್ತು.

ಅಮೆರಿಕಾದೇಶದಲ್ಲಿ ಪ್ರಯಾಣಮಾಡುತ್ತಿದ್ದಾಗ ಕೆಲವು ವೇಳೆ ಇವರನ್ನು ನೀಗ್ರೋ ಕುಲಕ್ಕೆ ಸೇರಿದವರೆಂದು ಹೋಟಲಿಗೆ ಸೇರಿಸುತ್ತಿರಲಿಲ್ಲ. ಆದರೆ ಸ್ವಾಮಿಜಿ ತಾವು ನೀಗ್ರೋ ಕುಲಕ್ಕೆ ಸೇರಿದವರಲ್ಲ ಎಂದು ಹೇಳದೆ ನೀಗ್ರೋ ಜನರೊಡನೆ ಬೆರೆಯತೊಡಗಿದರು. ಕೆಲವು ಆ ನಗರದ ಶ್ರೀಮಂತರಿಗೆ ಇದು ಗೊತ್ತಾಗಿ ಸ್ವಾಮಿಜಿ ಅವರಿಗೆ, ಇದೊಂದು ದೊಡ್ಡ ಅಪಮಾನ ನಿಮಗೆ ಮಾಡಿದೆವು ಎಂದು ಕ್ಷಮಾಪಣೆ ಕೇಳಿದರು. ಯಾರೋ ಅನಂತರ ಏತಕ್ಕೆ ತಾವು ಆರ್ಯಜನಾಂಗವೆಂದು ಹೇಳಲಿಲ್ಲ ಎಂದು ಪ್ರಶ್ನಿಸಿದಾಗ, "ಏನು, ಮತ್ತೊಬ್ಬನನ್ನು ಅಪಮಾನಮಾಡಿ ನಾನು ಮೇಲೇಳಬೇಕೆ? ನಾನು ಇದಕ್ಕಾಗಿ ಪ್ರಪಂಚಕ್ಕೆ ಬರಲಿಲ್ಲ" ಎಂದರು. ಸನ್ಯಾಸಿ ಇದೇ ಬೇಕು ಅದೇ ಬೇಕು ಎಂದು ಆಜ್ಞೆ ಕೊಡುವುದಿಲ್ಲ, ಬಂದುದನ್ನು ಅವನು ಸ್ವೀಕರಿಸುವನು. ಆ ಸಮಯದಲ್ಲಿ ಜನರು ತಾವು ಮೇಲಿನ ಕುಲಕ್ಕೆ ಸೇರಿದವರೆಂದು ಹೆಮ್ಮೆಪಡುತ್ತಿದ್ದಾಗ ಸ್ವಾಮಿಜಿ ಎಷ್ಟು ವ್ಯಥೆ

ಪಟ್ಟರು. ಸ್ವಾಮಿಜಿಗೆ ತುಂಬಾ ಸಂತೋಷವನ್ನುಂಟುಮಾಡಿದ ಒಂದು ಘಟನೆ ಇದೆ. ಒಬ್ಬ ನೀಗ್ರೊ ರೈಲ್ವೆ ಪೋರ್ಟರ್ ಸ್ವಾಮಿಜಿ ಬಳಿಗೆ ಬಂದು "ನೀವು ನಮ್ಮ ಕುಲದ ಗೌರವವನ್ನು ಹೆಚ್ಚಿಸಿರುವಿರಿ. ನಿಮ್ಮೊಡನೆ ನಾನು ಹಸ್ತಲಾಘವ ಮಾಡಲು ಆಶಿಸುತ್ತೇನೆ" ಎಂದನು. ಬಿಳಿಯವರ ಅಯೋಗ್ಯ ಅಹಂಕಾರವನ್ನು ನೋಡಿದಾಗ ಸ್ವಾಮಿಜಿಯವರು ಖಂಡಿಸದೆ ಬಿಡಲಿಲ್ಲ. ಇಂತಹ ದುರಹಂಕಾರಗಳನ್ನು ನೋಡಿದರೆ ಸ್ವಾಮಿಜಿ ಎಷ್ಟು ಉದ್ರೇಕಗೊಳ್ಳುತ್ತಿದ್ದರು! ಅವರೆಷ್ಟು ಕಟುವಾಗಿ ಬುದ್ಧಿ ಹೇಳುತ್ತಿದ್ದರು? ಎಲ್ಲಕ್ಕಿಂತ ಹೆಚ್ಚಾಗಿ ಈ ನೀಗ್ರೋ ಕುಲದವರು ಭವಿಷ್ಯದಲ್ಲಿ ಎಲ್ಲರಿಗಿಂತ ಮುಂದುವರಿದು ಮಾನವರ ನಾಯಕರಾಗುವ ದೃಶ್ಯವನ್ನು ಎಷ್ಟು ಮನೋಹರವಾಗಿ ಬಣ್ಣಿಸುತ್ತಿದ್ದರು! ನಮ್ಮ ಸಮಾನ ಇಲ್ಲ ಎಂದು ಬಣ್ಣಕ್ಕೆ ಹೆಮ್ಮೆಪಡುವವರನ್ನು ಅತಿ ಉಗ್ರವಾಗಿಯೇ ಜರಿಯುತ್ತಿದ್ದರು. "ನಾನು ನನ್ನ ಬಿಳೀ ಬಣ್ಣದ ಆರ್ಯನಿಗೆ ಕೃತಜ್ಞನಾಗಿರುವಂತೆಯೇ ಅದಕ್ಕಿಂತ ಹೆಚ್ಚಾಗಿ ಹಳದಿ ಬಣ್ಣದ ಮಂಗೋಲಿಯನ್ನನಿಗೆ ಮತ್ತು ಎಲ್ಲರಿಗಿಂತಲೂ ಹೆಚ್ಚಾಗಿ ಕಪ್ಪು ಬಣ್ಣದ ನೀಗ್ರೋಗೆ ಕೃತಜ್ಞ" ಎನ್ನುತ್ತಿದ್ದರು.

ಮಂಗೋಲಿಯಾ ದೇಶೀಯನ ದವಡೆಯನ್ನು ಹೋಲುವಂತೆ ತಮ್ಮದು ಇದ್ದುದೆಂದು ಅವರು ಹೆಮ್ಮೆ ತಾಳುತ್ತಿದ್ದರು. ಇದು ಹಿಡಿದ ಕೆಲಸವನ್ನು ಬಿಡದೆ ಸಾಧಿಸುವ ಛಲಕ್ಕೆ ಚಿಹ್ನೆ ಎನ್ನುತ್ತಿದ್ದರು. ಈ ಜನಾಂಗದ ಅಂಶ ಆರ್ಯ ಜನಾಂಗದವರಲ್ಲೆಲ್ಲ ಇದೆ ಎಂದು ಹೇಳುತ್ತಿದ್ದರು. ಒಂದು ದಿನ "ನಿನಗೆ ಕಾಣುವುದಿಲ್ಲವೆ ಟಾರ್ಟರ್ ಜನಾಂಗವೆ ಅತಿ ಶ್ರೇಷ್ಠ. ಅವನೇ ಪ್ರತಿಯೊಂದು ಜನಾಂಗಕ್ಕೂ ಶಕ್ತಿ ಮತ್ತು ವೀರ್ಯವನ್ನು ನೀಡುವನು" ಎಂದರು.

ಸ್ವಾಮಿಜಿ ಸುಮ್ಮನೆ ಕುಳಿತು ಆಲೋಚನೆ ಮಾಡತಕ್ಕಂತಹ ಒಂದು ಸ್ಥಳವನ್ನು ಅರಸುತ್ತಿದ್ದರು. ಆದಕಾರಣವೆ ಅವರು ಬಾಹ್ಯ ಜಗತ್ತಿಗೆ ಅಷ್ಟೊಂದು ಗಮನ ಕೊಡುತ್ತಿರಲಿಲ್ಲ. ಇದರ ನಿರ್ಲಕ್ಷ್ಯದ ರಹಸ್ಯವೇ ಇದು. ಅತಿ ಉತ್ತಮವಾದ ಜ್ಞಾನಾಭಿವೃದ್ಧಿಗೆ ಸಾಧ್ಯವಾಗುವುದೆ ಎಂಬ ದೃಷ್ಟಿಯಿಂದ ಪ್ರತಿಯೊಂದು ಮನೆಯನ್ನೂ ಪ್ರತಿಯೊಂದು ಮೂಲೆಯನ್ನೂ ನೋಡುತ್ತಿದ್ದರು. ಕೆಲವರು ಸ್ವಾಮಿಜಿಯವರೊಡನೆ ೧೯೦೦ರಲ್ಲಿ ಮೈಕೇಲ್‌ಮಸ್ ದಿನದಲ್ಲಿ ಸೈಂಟ್‌ಮೈಕೇಲ್ ಬೆಟ್ಟಕ್ಕೆ ಹೋಗಿದ್ದರು. ಅಲ್ಲಿ ಮಧ್ಯಕಾಲದ ಬಂಧಿಗಳನ್ನು ಇಡುತ್ತಿದ್ದ ಗುಹೆಯಂತಹ ಕೋಣೆ

ಗಳನ್ನು ನೋಡಿ ಎಂತಹ ಪ್ರಶಾಂತವಾದ ಸ್ಥಳ ಧ್ಯಾನಕ್ಕೆ ಎಂದರಂತೆ. ಸ್ವಾಮಿಜಿಯವರಿಗೆ ಚಿಕಾಗೊ ನಗರದಲ್ಲಿ ೧೮೯೩ರಲ್ಲಿ ಆತಿಥ್ಯವನ್ನು ಇತ್ತ ಕೆಲವರು ಇರುವರು. ಅವರು ಈಗಲೂ ಹೇಳುತ್ತಾರೆ ಸ್ವಾಮಿಜಿ ಅವರಿಗೆ ಪದೇಪದೇ ಧ್ಯಾನಮುಖವಾಗುತ್ತಿದ್ದ ಮನಸ್ಸನ್ನು ತಡೆಯಲು ಎಷ್ಟು ಕಷ್ಟ ವಾಗುತ್ತಿತ್ತು ಎಂದು. ಅವರು ಎಲ್ಲಿಗಾದರೂ ಹೋಗಲು ಟ್ರಾಂನಲ್ಲಿ ಕುಳಿತು ಕೊಳ್ಳುತ್ತಿದ್ದರು. ಎಲ್ಲಿ ಇಳಿಯಬೇಕೆಂದು ಗಮನಕ್ಕೆ ಬರದೆ ಮುಂದೆ ಹೋಗಿ ಹಲವು ವೇಳೆ ಹೊಸ ಟಿಕೀಟನ್ನು ಅವರು ಕೊಳ್ಳಬೇಕಾಗಿದ್ದಿತು. ದಿನಕಳೆದಂತೆ ಸ್ವಾಮಿಜಿ ವ್ಯವಹಾರ ಜಗತ್ತಿಗೆ ತಕ್ಕ ವ್ಯಕ್ತಿಯಾಗಲು ಅಣಿ ಯಾಗುತ್ತಿದ್ದದು ಆದೇ ಸ್ನೇಹಿತರಿಗೆ ಕಂಡಿತು. ಆದರೆ ಇದು ಕೇವಲ ತೋರಿಕೆಗೆ ಮಾತ್ರ. ಒಳಗೆ ಮನಸ್ಸಿನಲ್ಲಿ ಹಿಂದಿನಂತೆಯೇ ಆ ಸ್ವಭಾವ ವಿತ್ತು. ಯಾವಾಗಲೂ ಮನಸ್ಸು ನಿರ್ವಿಕಲ್ಪಸಮಾಧಿಯ ದಡದಲ್ಲೆ ಇರು ವಂತೆ ಕಾಣುತ್ತಿತ್ತು. ಯಾವುದೋ ಒಂದು ತಮಗೆ ವಿರೋಧವಾದ ಶಕ್ತಿ ತಮ್ಮನ್ನು ಚಂಡಿನಂತೆ ಅಲ್ಲಿಂದಿಲ್ಲಿಗೆ ಒದೆಯುತ್ತಿದೆ ಎನ್ನುತ್ತಿದ್ದರು. "ನಾನು ಪ್ರಪಂಚವನ್ನೆಲ್ಲಾ ಅಲೆದಿರುವೆನು, ಆದರೆ ಇಂಡಿಯಾದೇಶದಲ್ಲಿ ಧ್ಯಾನಮಾಡುವುದಕ್ಕೆ ಒಂದು ಗುಹೆಯನ್ನು ಮಾತ್ರ ಹುಡುಕುತ್ತಿರುವೆನು" ಎಂದರು ಒಮ್ಮೆ.

ಆದರೂ ಅವರು ಕೂಲಂಕಶವಾಗಿ ಪ್ರತಿಯೊಂದನ್ನೂ ಗಮನಿಸು ತ್ತಿದ್ದರು. ಮ್ಯೂಸಿಯಮ್, ವಿಶ್ವವಿದ್ಯಾನಿಲಯ, ಸಂಸ್ಥೆಗಳು, ಸ್ಥಳ— ಪುರಾಣ ಇವುಗಳನ್ನೆಲ್ಲಾ ಆಸಕ್ತಿಯಿಂದ ಗಮನಿಸುತ್ತಿದ್ದರು. ಗಮನಿಸು ವಾಗ ಅವರು ತಮ್ಮ ಅಭಿಪ್ರಾಯವನ್ನು ಬದಿಗಿರಿಸುತ್ತಿದ್ದರು. ಪೂರ್ವಾರ್ಧ ಪಶ್ಚಿಮಾರ್ಧಗೋಳಗಳೆರಡರ ವೈಶಿಷ್ಟ್ಯವನ್ನೂ ಇವರಷ್ಟು ಉತ್ಸುಕತೆಯಿಂದ ಗಮನಿಸುವಂತಹವರು ಸಿಕ್ಕುವುದು ಕಷ್ಟ. ಪ್ರತಿಯೊಂದನ್ನೂ ಅವರವರ ಆದರ್ಶದ ದೃಷ್ಟಿಯಿಂದ ಅಳೆಯುತ್ತಿದ್ದರು. ಇಂಗ್ಲೆಂಡಿಗೆ ಪ್ರಯಾಣ ಮಾಡುತ್ತಿದ್ದಾಗ ಒಂದುದಿನ ಚೆನ್ನಾಗಿ ನಿದ್ರೆಮಾಡಿ ಡೆಕ್ಕಿನ ಮೇಲೆ ಬಂದಾಗ ಅವರು ನನಗೆ ಹೇಳಿದರು: "ನಾನು ಕನಸಿನಲ್ಲಿ ಪ್ರಾಚ್ಯಪಾಶ್ಚಾತ್ಯ ಜನಾಂಗಗಳೆರಡರ ಮದುವೆಯ ಆದರ್ಶವನ್ನು ಪರ್ಯಾಲೋಚಿಸುತ್ತಿದ್ದೆ. ಎರಡರಲ್ಲಿಯೂ ಕೆಲವು ಉತ್ತಮಾಂಶಗಳಿವೆ. ನಾವು ಅದನ್ನು ಅಲ್ಲಗಳೆಯು ವುದಕ್ಕೆ ಆಗುವುದಿಲ್ಲ." ಹೋದಸಲಿ ಅಮೆರಿಕಾ ದೇಶವನ್ನು ನೋಡಿವಾಗ

ಅದರ ನಾಗರಿಕತೆಗೆ ನಾನು ಆಕರ್ಶಿತನಾದೆ. ಆದರೆ ಈಗ ಅವರಲ್ಲಿರುವ ಅಧಿಕಾರಲಾಲಸೆ ಮತ್ತು ದುರಾಸೆ ನನಗೆ ಕಾಣುತ್ತಿದೆ ಎಂದರು. ಇದರಂತೆ ಸ್ವಾಮಿಜಿ ಮೊದಲು ಯಂತ್ರ ನಮ್ಮ ಕೃಷಿಗೆ ಬಹಳ ಸಹಾಯ ಮಾಡುವುದು ಎಂದು ಭಾವಿಸಿದ್ದೆ ಎಂದರು. ಆದರೆ ಇದು ಹಲವು ಮೈಲಿಗಳಷ್ಟು ವಿಸ್ತೀರ್ಣವಿರುವ ಅಮೆರಿಕಾ ದೇಶಕ್ಕೆ ಸರಿಹೋಗಬಹುದೇ ಹೊರತು ಭರತಖಂಡದಲ್ಲಿರುವ ಸಣ್ಣಪುಟ್ಟ ಹೊಲಗದ್ದೆಗಳಿಗೆ ಇವುಗಳಿಂದ ಪ್ರಯೋಜನವಾಗಲಾರದೆಂದು ಭಾವಿಸಿದರು. ಎರಡುದೇಶದ ಸಮಸ್ಯೆಯೇ ಬೇರೆ. ಇದು ಚೆನ್ನಾಗಿ ಅವರಿಗೆ ದೃಢವಾಯಿತು. ಕೃಷಿ ಮತ್ತು ಹಂಚುವ ವಿಷಯ ಎಲ್ಲದರಲ್ಲಿಯೂ ಎಲ್ಲಿ ಸಣ್ಣಪುಟ್ಟ ವ್ಯಾಪಾರಕ್ಕೆ ಧಕ್ಕೆ ಬರುವುದೋ ಅದನ್ನೆಲ್ಲಾ ಅನುಮಾನದಿಂದ ನೋಡುತ್ತಿದ್ದರು. ಇಲ್ಲೆ ಸನಾತನ ಹಿಂದೂಸಂಸ್ಕೃತಿಯ ಅರಿಯದ ಪ್ರಭಾವವನ್ನು ನೋಡುವೆವು. ಎಲ್ಲರೂ ಒಟ್ಟುಸೇರಿ ಒಂದು ಕೆಲಸ ಮಾಡುವುದನ್ನು ಇವರು ಮೆಚ್ಚುತ್ತಿದ್ದರು. ಆದರೆ ಒಂದು ತೋಳದಹಿಂಡು ಒಟ್ಟಗೆ ಕಲೆತರೆ ಅದರಲ್ಲಿ ಏನು ಸಂತೋಷವಿದೆ?

ಭರತಖಂಡದ ಸಮಸ್ಯೆಯನ್ನಾಗಲಿ, ಅವರ ಕುಂದುಕೊರತೆಗಳನ್ನಾಗಲಿ ಪರದೇಶದಲ್ಲಿ ಚರ್ಚಿಸಲು ಅವರಿಗೆ ಮನಸ್ಸೇ ಇರಲಿಲ್ಲ. ಯಾರಾದರೂ ಇವರ ಎದುರಿಗೆ ಇದನ್ನು ಮಾಡಿದರೆ ಇವರಿಗೆ ತುಂಬಾ ಅವಮಾನವಾದಂತೆ ಭಾವಿಸುತ್ತಿದ್ದರು. ಪ್ರಪಂಚಕ್ಕೆ ವಿರೋಧವಾಗಿಯಾದರೂ ತಮ್ಮ ದೇಶಕ್ಕೆ ಸೇರಿದವನಿಗೆ ಪ್ರೋತ್ಸಾಹ ಕೊಡುವುದನ್ನು ಅವರು ಬಿಡುತ್ತಿರಲಿಲ್ಲ. ಭಾರತೀಯನು ಯಾವುದಾದರೂ ಪ್ರಯೋಗಮಾಡಿ ಒಂದು ಸಿದ್ಧಾಂತಕ್ಕೆ ಬಂದಿದ್ದರೆ ಅದಕ್ಕೆ ವಿರೋಧವಾಗಿ ಐರೋಪ್ಯರು ತಮ್ಮ ಸಿದ್ಧಾಂತವನ್ನು ಎಷ್ಟು ಹೇಳಿದರೂ ಅವರು ಕೇಳುತ್ತಿರಲಿಲ್ಲ. ಶಿಶುಸಹಜ ಸ್ವಭಾವದಿಂದ ತಮ್ಮ ಸ್ನೇಹಿತ ತಮ್ಮ (ಸ್ವಾಮಿಜಿ) ಸಿದ್ಧಾಂತವನ್ನು ಸರಿ ಎಂದು ತೋರಲು ಮತ್ತೂ ಸೂಕ್ಷ್ಮ ಯಂತ್ರಗಳನ್ನು ಕಂಡುಹಿಡಿದು ಮತ್ತೂ ಸ್ಪಷ್ಟವಾಗಿ ವಿಶದಪಡಿಸುವನು ಎನ್ನುತ್ತಿದ್ದರು.

ಇತರರು ಸ್ವಾಮಿಜಿಯವರನ್ನು ವಿಶ್ವದಪ್ರಜೆ ವಿಶ್ವದವಿದ್ಯಾರ್ಥಿ ಎಂದು ಹೆಮ್ಮೆಯಿಂದ ಕರೆಯುತ್ತಿದ್ದರು. ಆದರೆ ಇವರು ಮಾತ್ರ ತಾವು ಇಂಡಿಯಾದೇಶದಲ್ಲಿ ಹುಟ್ಟಿದವರು ಎಂಬ ಮಹಿಮೆಯಮೇಲೆ ನಿಲ್ಲು

ಪಾಶ್ಚಾತ್ಯದೇಶದಲ್ಲಿ ಸ್ವಾಮಿಜಿಯವರೊಡನೆ ಕೆಲವು ದಿನಗಳು ಗರ್ಜಿ

ತ್ತಿದ್ದರು. ರಾಜಪುತ್ರನಿಗೆ ಯೋಗ್ಯವಾದಂತಹ ಅವಕಾಶಗಳಲ್ಲಿ ಸೌಲಭ್ಯ ಗಳಲ್ಲಿದ್ದರೂ ನಮಗೆ ಹೆಚ್ಚು ಹೆಚ್ಚು ಸ್ವಾಮಿಜಿಯಲ್ಲಿ ವ್ಯಕ್ತವಾಗುವುದು ಗೈರಿಕ ವಸನಧಾರಿಗಳಾದ ಸನ್ಯಾಸಿಗಳ ಆದರ್ಶ.



## ಸ್ವಾಮಿಜಿ ಸಂದೇಶದ ಪೂರ್ಣ ಪರ್ಯಾಲೋಚನೆ

ಕ್ರಿಸ್ತಶಕಕ್ಕೆ ಮುಂಚೆ ಜನಿಸಿದ ಬುದ್ಧನ ಉದ್ದೇಶ ಎರಡು ಬಗೆಯಾಗಿತ್ತು. ಒಂದು ದೃಷ್ಟಿಯಿಂದ ನೋಡಿದಾಗ ಅವನೊಂದು ಮಹಾಶಕ್ತಿಯ ಉಗಮಸ್ಥಾನವಾಗಿದ್ದನು. ಇದು ಭರತಖಂಡದಿಂದ ಹೊರಟು ದೂರದೇಶಗಳಲ್ಲೆಲ್ಲಾ ತನ್ನ ಪ್ರಭಾವವನ್ನು ಬೀರಿ ಅಲ್ಲೊಂದು ಭಾವನೆಯ ವಿಕಾಸಕ್ಕೆ ಸಹಾಯವಾಯಿತು. ಭರತಖಂಡ ದೂರದೇಶಕ್ಕೆ ತನ್ನ ಭಾವನೆಗಳನ್ನು ಬಿತ್ತಿ ಜನಾಂಗ ಮತ ಸಾಹಿತ್ಯ ಕಲೆ ಮತ್ತು ಹಲವು ವಿಧದ ಶಾಸ್ತ್ರಗಳ ಅಭಿವೃದ್ಧಿಗೆ ಸಹಾಯವಾಗಿದೆ. ಆದರೆ ಭರತಖಂಡದಲ್ಲಿ ಆದರೊ ತಥಾಗತ ಜನಾಂಗದ ಪ್ರಥಮ ನಿರ್ಮಾತೃವಾದನು. ಉಪನಿಷತ್ತಿನ ಆರ್ಯಸಂಸ್ಕೃತಿಯನ್ನು ಎಲ್ಲರಿಗೂ ನೀಡಿ ಭರತಖಂಡದಲ್ಲೆಲ್ಲ ಇರುವ ಸಾಮಾನ್ಯ ನಾಗರಿಕತೆಗೆ ಕಾರಣವಾಗಿ ಭವಿಷ್ಯದ ಭಾರತಜನಾಂಗಕ್ಕೆ ಮೂಲಪುರುಷನಾದನು.

ಇದರಂತೆಯೇ ನಾನು ಕಂಡ ಸ್ವಾಮಿಜಿಯ ಅದ್ಭುತ ಜೀವನದಲ್ಲಿಯೂ ಎರಡು ಉದ್ದೇಶಗಳು ಸಫಲವಾಗಿವೆ ಎಂಬುದನ್ನು ಭಾವಿಸದೆ ಇರಲಾರೆ. ಒಂದೇ ವಿಶ್ವವನ್ನು ಜಾಗ್ರತಗೊಳಿಸುವುದು. ಮತ್ತೊಂದೆ ಜನಾಂಗ ನಿರ್ಮಾತೃವಾದುದು. ಪಾಶ್ಚಾತ್ಯದೃಷ್ಟಿಯಿಂದ ನೋಡಿದಾಗ ವಿವೇಕಾನಂದರು ಅಧಿಕಾರಿಯುತವಾಣಿಯಿಂದ ವೇದ, ಉಪನಿಷತ್ತಿನ ವಾಣಿಯನ್ನು ಅಲ್ಲಿಯ ದೇಶಗಳಿಗೆ ಬೋಧಿಸಿದವರಲ್ಲಿ ಮೊದಲಿಗರು ಅವರು. ಪ್ರಚಾರಮಾಡಬೇಕೆಂದಿದ್ದ ತಮ್ಮದೇ ಆದ ಯಾವ ಸಿದ್ಧಾಂತವೂ ಅವರಲ್ಲಿ ಇರಲಿಲ್ಲ. "ನಾನೆಂದೂ ವೇದ ಉಪನಿಷತ್ತುಗಳನ್ನು ಅಲ್ಲದೆ ಬೇರಾವುದನ್ನೂ ಉದಹರಿಸಿಲ್ಲ. ಅದರಲ್ಲಿಯೂ 'ಬಲ' ಎನ್ನುವ ಒಂದು ಪದವನ್ನು ಮಾತ್ರ ಬೋಧಿಸಿರುವೆನು" ಎಂದರು. ಸ್ವಾಮಿಜಿ ಸ್ವರ್ಗದ ಬದಲು ಮುಕ್ತಿಯನ್ನು ಬೋಧಿಸಿದರು, ಮೋಕ್ಷದ ಬದಲು ಜ್ಞಾನವನ್ನು ಬೋಧಿಸಿದರು, ದೇವರ ಬದಲು ಸರ್ವವ್ಯಾಪಿಯಾದ ಬ್ರಂಹನನ್ನು ಬೋಧಿಸಿದರು, ಯಾವುದೋ ಒಂದು ಧರ್ಮಕ್ಕೆ ಶರಣಾಗಿರಬೇಕೆಂದು ಬೋಧಿಸದೆ, ಎಲ್ಲಾ ಧರ್ಮಗಳ ಹಿಂದೆ ಇರುವ ಸಾಮಾನ್ಯ ತತ್ತ್ವವನ್ನು ಬೋಧಿಸಿದರು.

ಪಾಶ್ಚಾತ್ಯ ಪಂಡಿತಗಣ ಕೆಲವು ವೇಳೆ ಸ್ವಾಮಿಜಿಯವರ ಅಗಾಧ

ವಾದ ಅನ್ವೇಷಣಾದೃಷ್ಟಿಯ ಪಾಂಡಿತ್ಯ ಪ್ರತಿಭೆಯನ್ನು ಕಂಡು ಆಶ್ಚರ್ಯ ಚಕಿತರಾಗಿ ಕಳವಳಗೊಳ್ಳುತ್ತಿದ್ದರು. ತಾವೆ ಇದನ್ನು ಪ್ರತ್ಯಕ್ಷ ಅನುಭವಿಸಿದ ಸಜೀವವಾದ ಸಂದೇಶಗಳಂತೆ ಇವುಗಳನ್ನು ಸ್ವಾಮಿಜಿ ಇತರರಿಗೆ ಬೋಧಿಸುತ್ತಿದ್ದರು. ಪಂಡಿತಗಣದ ಪರೀಕ್ಷೆಗಳಾವುವೂ ಸ್ವಾಮಿಜಿಯವರ ಪ್ರತಿಭೆಯ ಮುಂದೆ ನಿಲ್ಲುವಂತೆ ಇರಲಿಲ್ಲ. ಇವರ ಸಿದ್ಧಾಂತ ಕೇವಲ ವಿಶ್ವವಿದ್ಯಾನಿಲಯದ ಪಂಡಿತ ರಂಜನೆಗೆ ಮಾತ್ರ ಇದ್ದುದಲ್ಲ. ಇವು ಕೇವಲ ಐತಿಹಾಸಿಕ ಅಥವಾ ಭಾಷಾದೃಷ್ಟಿಯಿಂದ ಕುತೂಹಲಪೂರಿತವೂ ಅಲ್ಲ. ಕಳೆದ ಇಪ್ಪತ್ತೈದು ಶತಮಾನಗಳಿಂದ ಜನ್ಮಜನ್ಮಗಳು ಯಾವ ಜನಾಂಗ ಇದನ್ನು ಅನುಷ್ಠಾನಮಾಡಲು ತನ್ನ ಹೃದಯ ರಕ್ತವನ್ನೇ ಇದಕ್ಕೆ ಧಾರೆಯೆರೆದಿದೆಯೋ ಆ ಶ್ರದ್ಧೆಯೆಲ್ಲ ಇವರ ವಾಣಿಯಲ್ಲಿ ತುಂಬಿ ತುಳುಕಾಡುತ್ತಿತ್ತು. ಸ್ವಾಮಿಜಿಯವರಿಗೆ ಶಾಸ್ತ್ರಗಳು ಜ್ಞಾನದ ಮೂಲವಾಗಲಿ, ಗಣಿಯಾಗಲಿ ಆಗಿರಲಿಲ್ಲ. ಇದು ಜೀವನಕ್ಕೆ ಬರೆದ ಭಾಷ್ಯವಾಗಿತ್ತು, ಟೀಕೆಯಾಗಿತ್ತು. ಈ ಸಾಕ್ಷಾತ್ಕಾರದ ಜ್ಯೋತಿ ಇಲ್ಲದೇ ಇದ್ದರೆ ಇವುಗಳಾವುದನ್ನೂ ವಿವರಿಸಲು ಸಾಧ್ಯವೇ ಆಗುತ್ತಿರಲಿಲ್ಲ. ಶಂಕರಾಚಾರ್ಯರಿಂದ ಪ್ರಚಾರಿತವಾದ ಅದ್ವೈತ, ಸಿದ್ಧಾಂತ ಎಲ್ಲ ಒಂದೇ – ಎರಡಿಲ್ಲ ಎಂಬುದೊಂದೇ ಪರಮ ಸತ್ಯವೆಂಬುದು ಶ್ರೀರಾಮಕೃಷ್ಣಪರಮಹಂಸರ ಜೀವನದಿಂದ ಮತ್ತೂ ಧೃಢಗೊಂಡಿತು. ಇವರ ಜನ್ಮ ಜೊತೆಗೆ ತಮ್ಮ ಜೀವನದ ಅನುಭವದ ಇವೆರಡೂ, ಅದ್ವೈತಕ್ಕೆ ಇನ್ನೂ ಮುಟ್ಟದೇ ಇರುವ ಹಲವು ಸಿದ್ಧಾಂತಗಳೂ ಕೂಡ ಪರಮಸತ್ಯದ ಯಾವುದೋ ಅಂಶವನ್ನು ವಿವರಿಸುತ್ತಿದೆ ಎಂಬ ತಿಳಿವನ್ನು ಇವರಿಗೆ ಕೊಟ್ಟಿತು.

ಈ ಗುರಿಯ ದೃಷ್ಟಿಯಿಂದ ಪ್ರತಿಯೊಂದು ಶ್ರದ್ಧಾಪೂರಿತ ನಂಬಿಕೆಯೂ ಸತ್ಯವೆ. ''ಇತರರು ಎಲ್ಲಿ ಪೂಜಿಸುತ್ತಾರೊ ಅಲ್ಲಿ ನಮಸ್ಕಾರ ಮಾಡಿ. ಏಕೆಂದರೆ ಅಲ್ಲಿ ಭಗವಂತ ಅವರ ಭಕ್ತಿಗೆ ಅನುಗುಣವಾಗಿ ಗೋಚರವಾಗುತ್ತಾನೆ'' ಎಂದರು ಶ್ರೀರಾಮಕೃಷ್ಣರು. ನಾವು ಭೂಮಿಯಿಂದ ಸೂರ್ಯನಿಗೆ ಹೋಗುವಾಗ ಪ್ರತಿಯೊಂದು ಹಂತದಲ್ಲಿಯೂ ಒಬ್ಬ ಫೋಟೋಗಳನ್ನು ತೆಗೆದುಕೊಳ್ಳುತ್ತಾನೆ ಎಂದು ಭಾವಿಸಿ. ಇದರಲ್ಲಿ ಯಾವುದು ಎರಡೂ ಒಂದನ್ನು ಒಂದು ಹೋಲುವುದಿಲ್ಲ. ಆದರೂ ಇದರಲ್ಲಿ ಯಾವುದನ್ನು ತಪ್ಪು ಎಂದು ಹೇಳುವುದು? ಹೀಗೆಯೆ ಪರಸ್ಪರ ವಿರೋಧದಂತೆ ಕಾಣುತ್ತಿರುವ ಧಾರ್ಮಿಕ ಪಂಗಡಗಳ ಭಾವನೆ ಕೂಡ.

ದಕ್ಷಿಣೇಶ್ವರದ ಆ ಆಚಾರ್ಯದೇವ ಪರಾತ್ಪರ ತತ್ತ್ವವನ್ನು ಸ್ತ್ರೀ ಮೂಲಕ ವಾಗಿಯೂ ಸಾಕ್ಷಾತ್ಕರಿಸಿದುದನ್ನು ನೋಡಿದರೆ ಇವರು ಸ್ತ್ರೀಯರನ್ನು ಪೂಜ್ಯದೃಷ್ಟಿಯಿಂದ ನೋಡಲು ಅವಕಾಶ ಮಾಡಿಕೊಟ್ಟರು. ಅದಕ್ಕೆ ಮೊದಲು ಸ್ತ್ರೀಯರಿಗೆ ಬರೀ ಸಾಮಾಜಿಕದೃಷ್ಟಿ ಮತ್ತು ಲೌಕಿಕದೃಷ್ಟಿ ಯಿಂದ ಮಾತ್ರ ಗೌರವವಿದ್ದಿತು. ಪ್ರತೀಕ ಪ್ರಪಂಚದಲ್ಲಿ, ದೇವಸ್ಥಾನ ದಲ್ಲಿ ಕೆಲಸಮಾಡುವಷ್ಟೇ ಮನೆಯಲ್ಲಿ ಇದ್ದರೂ ದೇವರನ್ನು ಪಡೆಯಬಹು ದೆಂದು ಸಾರಿದರು. ಪೂಜಾರಿ ಹಂಚುವ ಪ್ರಸಾದದಷ್ಟೇ ಪವಿತ್ರವಾದುದು ಮನೆಯಲ್ಲಿ ತಾಯಿ ಅಥವಾ ಗೃಹಿಣಿ ನೀಡುವ ಅನ್ನ ಎಂಬುದನ್ನು ಅವರು ತೋರಿದರು. ಶ್ರೀರಾಮಕೃಷ್ಣರು ಹೀಗೆ ಹೇಳುತ್ತಿದ್ದರು: "ಈ ಪ್ರಪಂಚ ದಲ್ಲಿ, ದೇವರ ಹೆಸರು ಸಹಿತ ಎಲ್ಲವೂ ಮಾಯೆ. ಆದರೆ ಇದರಲ್ಲಿ ಕೆಲವು ಮಾಯೆ ನಮ್ಮನ್ನು ದೇವರೆಡೆಗೆ ಒಯ್ಯುವುದು; ಉಳಿದವು ನಮ್ಮನ್ನೇ ಹೆಚ್ಚು ಬದ್ಧರನ್ನಾಗಿ ಮಾಡುವುದು." ಗೃಹಿಣಿಯ ನಿತ್ಯಜೀವನವೂ ಪವಿತ್ರ. ಮನೆಯೂ ದೇಗುಲದಂತೆ. ಆದರ ಆತಿಥ್ಯ, ಜೀವನದಲ್ಲಿ ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ನಿರ್ವಹಿಸುವುದು ಇವುಗಳನ್ನೆಲ್ಲಾ ಒಂದು ಪೂಜೆ ಯಂತೆ ಮಾಡಬಹುದೆಂದು ಶ್ರೀರಾಮಕೃಷ್ಣರು ತೋರಿದರು. ಇದೇ ಇವರ ಪ್ರಮುಖ ಶಿಷ್ಯರಾದ ವಿವೇಕಾನಂದರ ಬೋಧನೆಗೆ ಆಧಾರಸ್ಥಂಬವಾಯಿತು, ಪ್ರೇರಕವಾಯಿತು.

ಸ್ವಾಮಿ ವಿವೇಕಾನಂದರು ಅನಂತರ ಭರತಖಂಡವನ್ನು ಸಂಚಾರ ಮಾಡುತ್ತಿರುವಾಗ ಪ್ರತಿಯೊಂದು ಪಂಗಡ ಮತ್ತು ಮತವನ್ನು ನೋಡಿ ದರು. ಅದರ ಕೇಂದ್ರದಲ್ಲಿ ಒಂದು ಧಾರ್ಮಿಕ ಭಾವನೆ ಬೆಳಗುತ್ತಿದ್ದುದನ್ನು ಕಂಡರು. ಶ್ರೀರಾಮಕೃಷ್ಣರಲ್ಲಿ ಯಾವುದು ತೇಜಃಪುಂಜವಾಗಿ ಬೆಳಗು ತ್ತಿದ್ದಿತೋ ಅದೇ ಕಾಂತಿ ಎಲ್ಲಾ ಪಂಗಡ ಉಪಪಂಗಡಗಳಲ್ಲಿ ಮಂದ ಮಂದವಾಗಿ ಗೋಚರಿಸುತ್ತಿರುವುದನ್ನು ನೋಡಿದರು. ಆದರೆ ೧೮೯೩ ರಲ್ಲಿ ಸ್ವಾಮಿಜಿ ಭರತಖಂಡದ ಹೊರಗೆ ಹೋದಾಗ ಅಲ್ಲಿಯ ಜನರಲ್ಲಿ, ಜನಾಂಗ ಮತ್ತು ದೇಶಭಕ್ತಿಯ ಬೇರೆ ಬೇರೆ ಆದರ್ಶ ಬೆಳಗುತ್ತಿರುವುದನ್ನು ಕಂಡರು. ತಮ್ಮ ದೇಶದ ಧಾರ್ಮಿಕ ಪಂಗಡಗಳಂತೆಯೇ ಈ ಜನಾಂಗಗಳಲ್ಲಿಯೂ ಮಾನವನಲ್ಲಿ ಅಂತರ್ಗತವಾಗಿರುವ ಪವಿತ್ರತೆ ವ್ಯಕ್ತವಾಗುತ್ತಿರುವುದನ್ನು ನೋಡಿದರು. ಹಲವು ವರುಷಗಳವರೆಗೆ ಇವರಿಗೆ ಇದು ಗೋಚರವಿಲ್ಲದೇ ಇತ್ತು. ಆದರೂ ಪ್ರತಿಯೊಂದು ಜನಾಂಗದಲ್ಲಿಯೂ ಇರುವ ಶ್ರೇಷ್ಠಗುಣ

ಗಳನ್ನು ನೋಡಲು ಯತ್ನಿಸುತ್ತಿದ್ದಾಗ ಇತರರಿಗೆ ಸ್ವಾಮಿಜಿಯವರಲ್ಲಿ ಇದು ಗೋಚರಿಸಿತು.

ಒಂದು ಸಲ ನಾವು ಇಂಗ್ಲೆಂಡಿಗೆ ಪ್ರಯಾಣಮಾಡುತ್ತಿದ್ದಾಗ ನನಗೆ ಸ್ವಾಮಿಜಿ ಬಹಳ ಸಂತೋಷದಿಂದ ಟರ್ಕಿ ಜನರ ಸಮುದ್ರಯಾನಕೌಶಲ ಮತ್ತು ಅವರಲ್ಲಿರುವ ಸೌಜನ್ಯವನ್ನು ಬಹಳ ಹೊಗಳುತ್ತಿದ್ದರು. ಇವರ ಉತ್ಸಾಹಕ್ಕೆ ಏನು ಕಾರಣ ಎಂದು ನಾನು ಕೇಳಿದೆ. ಹಡಿಗಿನ ಆಳುಗಳು ಇವರಿಗೆ ತೋರುತ್ತಿದ್ದ ಶಿಶುಸಹಜ ಗೌರವ ಸ್ವಾಮಿಜಿ ಹೃದಯವನ್ನು ಅಪಹರಿಸಿತ್ತು. "ನೋಡು, ನಾನು ನನ್ನ ಮಹಮ್ಮದೀಯರನ್ನು ಪ್ರೀತಿ ಸುತ್ತೇನೆ" ಎಂದು ಯಾರದೋ ದೂರಿಗೆ ಉತ್ತರ ಹೇಳುವಂತೆ ಮಾತ ನಾಡಿದರು. ಅದಕ್ಕೆ ನಾನು "ಹೌದು, ಪ್ರತಿಯೊಬ್ಬರನ್ನೂ ಅವರಲ್ಲಿರುವ ಒಳ್ಳೆಯ ಗುಣಗಳ ದೃಷ್ಟಿಯಿಂದ ಮಾತ್ರ ನೋಡುವ ಸ್ವಭಾವ ನಿಮಗೆ ಎಲ್ಲಿಂದ ಬಂತು? ಇದು ಹಿಂದೆ ಯಾರಾದರೂ ಪ್ರಖ್ಯಾತ ವ್ಯಕ್ತಿಯಲ್ಲಿತ್ತೆ? ಅಥವಾ ಇದು ಶ್ರೀರಾಮಕೃಷ್ಣಪರಮಹಂಸರ ಪ್ರಭಾವವೊ?" ಎಂದು ಕೇಳಿದೆ.

ಕ್ರಮೇಣ ಆಶ್ಚರ್ಯಚಕಿತ ಮುಖಮುದ್ರೆ ಸ್ವಾಮಿಜಿಯವರಿಂದ ಮಾಯವಾಯಿತು. "ಶ್ರೀರಾಮಕೃಷ್ಣಪರಮಹಂಸರ ಶಿಕ್ಷಣ ಪ್ರಭಾವ ಇರಬಹುದು" ಇದು ಎಂದರು. "ನಾವೆಲ್ಲಾ ಅವರ ಹಾದಿಯಲ್ಲಿ ಸ್ವಲ್ಪ ದೂರ ಹೋದೆವು. ಆದರೆ ಅವರಿಗೆ ಇದ್ದಷ್ಟು ಕಷ್ಟ ನಮಗೆ ಇರಲಿಲ್ಲ. ಯಾರನ್ನು ತಿಳಿದುಕೊಳ್ಳಬೇಕೆಂದು ಬಯಸಿದರೊ ಅವರಂತೆ ಊಟಮಾಡು ತ್ತಿದ್ದರು, ಬಟ್ಟೆಬರೆಗಳನ್ನು ಉಡುತ್ತಿದ್ದರು. ಆ ಮತದವರಿಂದ ಉಪದೇಶ ತೆಗೆದುಕೊಂಡು ಅವರ ಭಾಷೆಯನ್ನೇ ಮಾತನಾಡುತ್ತಿದ್ದರು. ಒಬ್ಬ ಮತ್ತೊಬ್ಬನಂತೆ ಸಂಪೂರ್ಣ ಆಗಬೇಕು ಎಂದು ಅವರು ಹೇಳುತ್ತಿದ್ದರು. ಇದು ಅವರದೇ ಒಂದು ಮಾರ್ಗ. ಹಿಂದೆ ಭರತಖಂಡದಲ್ಲಿ ಯಾರೂ ಕ್ರೈಸ್ತರಾಗಿ ಮಹಮ್ಮದೀಯರಾಗಿ ವೈಷ್ಣವರಾಗಲಿಲ್ಲ."

ಸ್ವಾಮಿಜಿ ಜನಾಂಗವನ್ನು ಧರ್ಮವನ್ನು ನೋಡುವ ಪವಿತ್ರದೃಷ್ಟಿ ಯಿಂದ ನೋಡುತ್ತಿದ್ದರು. ಧರ್ಮದ ಮುಖ್ಯ ಉದ್ದೇಶವೆ ಆದರ್ಶಮಾನವ ನನ್ನು ವ್ಯಕ್ತಗೊಳಿಸುವ ಉದ್ಯಮ. "ನಾನು ಹೆಚ್ಚುಕಾಲ ಬದುಕಿದಂತೆ, ಹೆಚ್ಚು ಆಲೋಚನೆ ಮಾಡಿದಂತೆ, ಎಲ್ಲಾ ಪೌರುಷ ಎಂಬ ಒಂದು ಪದದಲ್ಲಿ ಹುದುಗಿದೆ" ಎಂದು ಒಮ್ಮೆ ಹೇಳಿದರು.

ಇತರ ಜನಾಂಗದಲ್ಲಿ ಶೌರ್ಯ ಮತ್ತು ಆದರಕ್ಕೆ ಪಾತ್ರವಾದ ಶೀಲ

ಗಳನ್ನು ತಿಳಿಯುತ್ತಾ ಹೋದಂತೆ, ಭರತಖಂಡ ಯಾವ ಆದರ್ಶಕ್ಕೆ ನಿಂತಿದೆ ಎಂಬುದನ್ನು ತಿಳಿದು, ತಾವು ಈ ದೇಶದಲ್ಲಿ ಜನ್ಮವೆತ್ತುದಕ್ಕೆ ಹೆಮ್ಮೆಪಡುತ್ತಿದ್ದರು. ಪ್ರತಿಯೊಂದು ಜನಾಂಗವನ್ನೂ ಒಂದೊಂದು ಕಾಲದ ದೃಷ್ಟಿಯಿಂದ ಅಳೆಯುತ್ತಿದ್ದರು. ಬೇರೆ ಬೇರೆ ಆದರ್ಶಗಳ ದೃಷ್ಟಿಯಿಂದ ಅಳೆಯುತ್ತಿದ್ದರು. ಈ ವಿಶಾಲವಾದ ವೈವಿಧ್ಯತೆಯಲ್ಲಿ ಯಾವ ಒಂದರ ಮೇಲೆಯೂ ಅಂಧವಿಶ್ವಾಸವಿರಲಿಲ್ಲ. ರೋಮನ್ ಚಕ್ರಾಧಿಪತ್ಯದಿಂದ ಜನಿಸಿದವುಗಳನ್ನು ಕ್ರೂರ ಎನ್ನುತ್ತಿದ್ದರು. ಜಪಾನ್‌ದೇಶದ ದಾಂಪತ್ಯದ ಆದರ್ಶವನ್ನು ನಿಕೃಷ್ಟವಾಗಿ ಪರಿಗಣಿಸುತ್ತಿದ್ದರು. ಆದರೆ ಒಟ್ಟಿನಲ್ಲಿ ಇವರು ಆಯಾ ಜನಾಂಗದಲ್ಲಿರುವ ಒಳ್ಳೆಯ ಗುಣಗಳ ದೃಷ್ಟಿಯಿಂದ ಆ ಜನಾಂಗವನ್ನು ಪುನಃ ಹೇಗೆ ಮೇಲೆ ತರಬೇಕು ಎಂಬುದನ್ನು ಮಾತ್ರ ಹೇಳುತ್ತಿದ್ದರು. ಅವರಿಂದ ಕೇಳಿದ ಒಂದು ಕೊನೆಯ ಮಾತಿನಲ್ಲಿ ಅವರು ಈ ವಿಷಯದ ಮೇಲೆ ಹೀಗೆ ಹೇಳುವರು: "ದೇಶಭಕ್ತಿಗೆ ಜಪಾನೀಯರು, ಚಾರಿತ್ರಶುದ್ಧಿಗೆ ಹಿಂದು, ಪೌರುಷಕ್ಕೆ ಐರೋಪ್ಯರು! ಮಾನವನಲ್ಲಿ ಯಾವುದು ಮಹತ್ತರವಾದುದು ಎಂಬುದನ್ನು ಅರಿಯಲು ಇಂಗ್ಲೀಷರನ್ನು ಬಿಟ್ಟರೆ ಇಲ್ಲ."

ಒಂದು ಸಲ ಅವರೊಡನೆ ಮಾತನಾಡುತ್ತಿದ್ದಾಗ ಹಿಂದೂಧರ್ಮವನ್ನು ಆಕ್ರಮಣ ಸ್ವಭಾವದ್ದನ್ನಾಗಿ ಮಾಡುವುದೇ ನನ್ನ ಆಶಯ ಎಂದು ಹೇಳಿದರು. ಸನಾತನಧರ್ಮ ಜಾಗ್ರತವಾಗಬೇಕು, ಇತರರನ್ನು ತನ್ನ ಧರ್ಮಕ್ಕೆ ಸೇರಿಸಿಕೊಳ್ಳುವಂತೆ ಆಗಬೇಕು, ಪ್ರಚಾರಕರನ್ನು ಹೊರದೇಶಕ್ಕೆ ಕಳುಹಿಸುವಂತೆ ಆಗಬೇಕು. ಯಾರು ಈಗ ಅನ್ಯಮತದ ಪಾಲಾಗಿರುವರೋ ಅವರನ್ನು ಪುನಃ ತನ್ನ ಆಶ್ರಯಕ್ಕೆ ತೆಗೆದುಕೊಳ್ಳುವಂತೆ ಆಗಬೇಕು; ಆಧುನಿಕ ಭಾವನೆಗಳನ್ನು ಜೀರ್ಣಿಸಿ ರಕ್ತಗತಮಾಡಿಕೊಳ್ಳಬೇಕೆಂದು ಆಶಿಸುತ್ತಿದ್ದರು. ಯಾವುದಾದರೂ ಒಂದು ಪಂಗಡ ತನ್ನಲ್ಲಿ ಸಂಘಬದ್ಧವಾದ ಐಕ್ಯತೆ ಇದೆ ಎಂದು ಅರಿತೊಡನೆಯೆ ಅದಕ್ಕೆ ಆಕ್ರಮಣ ಬುದ್ಧಿ ಬರುತ್ತದೆ. ಅವರ ಶ್ರದ್ಧೆ ಅನುಷ್ಠಾನರಂಗಕ್ಕೆ ಇಳಿಯುವುದು ಎಂದು ಅವರಿಗೆ ಗೊತ್ತಿತ್ತೆ? ತಾವೆ ತಮ್ಮ ಪೂರ್ವೀಕರ ಧರ್ಮ ಆಕ್ರಮಣ ಸ್ವಭಾವವುಳ್ಳದ್ದಾಗಲು ಕಾರಣಕರ್ತರಾಗುವರು ಎಂದು ಅರಿತಿದ್ದರೆ? ಹೇಗಾದರೂ ಇರಲಿ, ಅವರೇ ಒಮ್ಮೆ ಹೇಳಿದಂತೆ ಸ್ವಾಮಿಜಿ ಜೀವಿತದ ಉದ್ದೇಶವೆ ಹಿಂದೂಧರ್ಮದ ಸಾಮಾನ್ಯ ತತ್ತ್ವಗಳ ತಳಹದಿ

ಯನ್ನು ಹುಡುಕುವುದಾಗಿತ್ತು. ಇವುಗಳನ್ನು ಕಂಡುಹಿಡಿದು ಜನರಿಗೆ ಇದನ್ನು ಬೋಧಿಸತೊಡಗಿದರೆ ಇದೇ ಸನಾತನ ಧರ್ಮಕ್ಕೆ ಪ್ರಾಣಪ್ರತಿಷ್ಠಾಪನೆ ಮಾಡಿದಂತೆ ಎಂಬುದನ್ನು ಅವರು ಸ್ವಭಾವತಃ ಅರಿತಂತೆ ಇದ್ದರು. ಬುದ್ಧ ಹಿಂದೆ ನಿರ್ವಾಣ ಮತ್ತು ತ್ಯಾಗವನ್ನು ಬೋಧಿಸಲಿಲ್ಲವೆ? ಇವೇ ಜನಾಂಗದ ಜೀವಾಳವಾಗಿದ್ದುದರಿಂದ ಅವನು ಕಾಲವಾದ ಎರಡು ಶತಮಾನಗಳೊಳಗೇ ಇದೊಂದು ಚಕ್ರಾಧಿಪತ್ಯವಾಗಲಿಲ್ಲವೆ? ಅದರಂತೆಯೇ ಸ್ವಾಮಿಜಿ ಕೂಡ ಮೂಲಭೂತವಾದ ತತ್ತ್ವಗಳನ್ನು ಜನರಿಗೆ ಪ್ರಚಾರ ಮಾಡಿ ಪ್ರತಿಫಲವನ್ನು ಮುಂದೆ ದೈವೇಚ್ಛೆಯಿದ್ದಂತೆ ಆಗಲಿ ಎಂದು ಬಿಡಲು ಇಚ್ಛಿಸಿದರು.

ಆಧ್ಯಾತ್ಮಿಕ ಸತ್ಯದ ಆಧಾರದ ಮೇಲೆ ಹಿಂದೂಧರ್ಮ ನಿಂತಿರುವುದು. ಜೀವಾತ್ಮನಿಗೆ ತೋರುವ ಮಾರ್ಗವೇ ಆಧ್ಯಾತ್ಮಿಕ ಅನುಭವ, ಇದೇ ಹಿಂದೂಧರ್ಮದ ಪ್ರಮಾಣ ಎಂದು ಸ್ವಾಮಿಜಿ ಹೇಳಿದರು. ಆಧ್ಯಾತ್ಮಿಕ ಜೀವನದ ನಿಯಮಾವಳಿಯ ಅನುಭವವೇ ಎಲ್ಲಾ ಶಾಸ್ತ್ರಗಳಿಗೂ ಕಾರಣ. ಇದನ್ನೇ ವೇದ ಎನ್ನುವುದು. ಇದನ್ನು ಜೈನರು ಒಪ್ಪಲಿಲ್ಲ. ಆದರೂ ಅವರೂ ಕೂಡ ಹಿಂದೂಗಳಂತೆಯೆ. ಏಕೆಂದರೆ ಸತ್ಯವಾಗಿರುವುದೆಲ್ಲ ವೇದ. ಜೈನರೂ ಕೂಡ ತಾವು ಯಾವುದನ್ನು ಸತ್ಯವೆಂದುಕೊಂಡಿರುವರೋ ಅದಕ್ಕೆ ಅಧೀನರು. ಹಿಂದೂಧರ್ಮದ ಸೀಮೆಯನ್ನು ಅವರು ವಿಸ್ತರಿಸಿದರು. ತನ್ನ ವಿಶಾಲವಕ್ಷಸ್ಥಲದಲ್ಲಿ ಎಲ್ಲರಿಗೂ ಆಶ್ರಯ ನೀಡಿತು. ಅಮೆರಿಕಾದೇಶಕ್ಕೆ ಹೋಗುವುದಕ್ಕೆ ಮುಂಚೆ ಸ್ವಾಮಿಜಿ ಹೀಗೆ ಹೇಳಿದ್ದರು: "ನಾನೊಂದು ಧರ್ಮವನ್ನು ಬೋಧಿಸುವುದಕ್ಕೆ ಹೋಗುತ್ತೇನೆ. ಅಲ್ಲಿ ಬೌದ್ಧಧರ್ಮ ಹಿಂದೂಧರ್ಮದಿಂದ ದಂಗೆಯೆದ್ದ ಮಗು, ಕ್ರೈಸ್ತಧರ್ಮ ತಾನು ಎಷ್ಟೇ ಬೇರೆ ಎಂದು ಹೆಮ್ಮೆ ಕೊಚ್ಚಿಕೊಂಡರೂ ಹಿಂದೂಧರ್ಮದ ಒಂದು ಪ್ರತಿಧ್ವನಿಯಂತಿದೆ." ಶಾಸ್ತ್ರದೃಷ್ಟಿಯಿಂದ ನೋಡಿದರೂ ಕೂಡ ಧರ್ಮದ ಇತಿಹಾಸದಲ್ಲಿ ವೇದದ ಮಹಿಮೆ ಎಣೆಯಿಲ್ಲದುದು. ಇದು ಬರೀ ಪುರಾತನವಾದುದು ಎಂದು ಮಾತ್ರ ಅಲ್ಲ. ಏಕೆಂದರೆ ಪೃಥ್ವಿಯಲ್ಲಿರುವ ಅಧಿಕಾರಯುತವಾದ ಶಾಸ್ತ್ರದಲ್ಲೆಲ್ಲಾ ಇದೊಂದೇ, ಮಾನವ ವೇದಕ್ಕೂ ಅತೀತನಾಗಿಹೋಗಬೇಕೆಂದು ಸಾರುವುದು.

ಹಿಂದೂಧರ್ಮಗಳ ಏಕಮಾತ್ರ ಗುರಿಯೆ ಸತ್ಯ. ಇದು ಹಿಂದೆ ಯಾರಿಗೊ ಹೊಳೆದುದರಿಂದ ಇಂದು ನಾವು ಅದನ್ನು ಸ್ವೀಕರಿಸಬೇಕು

ಎಂದು ಅಲ್ಲ. ಆದರೆ ಇದನ್ನು ಯಾರು ಬೇಕಾದರೂ ಈಗಲೂ ಅನುಭವಿಸಬಹುದು. ಒಂದು ಸಲ ಇದನ್ನು ಒಪ್ಪಿಕೊಂಡಮೇಲೆ ವಿಜ್ಞಾನಕ್ಕೂ ಧರ್ಮಕ್ಕೂ ಯಾವ ವಿಧವಾದ ನಿಜವಾದ ಅಥವಾ ಕಾಲ್ಪನಿಕವಾದ ವೈಷಮ್ಯವೂ ಇರುವುದಿಲ್ಲ. ಆಧುನಿಕಕಾಲದಲ್ಲಿ ವೈಜ್ಞಾನಿಕ ಬೆಳವಣಿಗೆಗೆ ಹಿಂದೂಗಳಲ್ಲಿ ಇರುವ ಬೇಕಾದಷ್ಟು ಅವಕಾಶವನ್ನು ಸ್ವಾಮಿಜಿ ಕಂಡರು. ವೈಜ್ಞಾನಿಕ ಬೆಳವಣಿಗೆಗೆ ಭರತಖಂಡದಲ್ಲಿ ಧಾರ್ಮಿಕ ಪಂಥದವರಾರೂ ಅಡ್ಡಿಯನ್ನು ತಂದೊಡ್ಡಲಿಲ್ಲ. ಈಗಲೂ ಕೂಡ ಜನ ಹೇಗೆ ಬೇಕಾದರೂ ಆಲೋಚಿಸಬಹುದು, ಯಾವುದನ್ನು ಬೇಕಾದರೂ ನಂಬಬಹುದು. ಹಿಂದೂ ಪಂಡಿತವರ್ಗ ಇದಕ್ಕೆ ಬೇಕಾದಷ್ಟು ಅವಕಾಶವನ್ನು ಕೊಟ್ಟಿದೆ. ಇದರಿಂದಲೇ ಹಿಂದೂಗಳಲ್ಲಿ ಇಷ್ಟದೇವತಾ ಸಿದ್ಧಾಂತ ಜಾರಿಗೆ ಬಂದಿರುವುದು. ಇದೇ ಹಿಂದೂಧರ್ಮದ ವೈಶಿಷ್ಟ್ಯತೆ. ಇದರಿಂದ ಇತರ ಧರ್ಮಗಳನ್ನು ಉದಾರ ದೃಷ್ಟಿಯಿಂದ ನೋಡುವುದು ಮಾತ್ರವಲ್ಲ, ಅವುಗಳಲ್ಲಿರುವ ಒಳ್ಳೆಯದನ್ನು ಸ್ವೀಕರಿಸಲು ಸಹಾಯವಾಗಿದೆ. ಹಿಂದೂಗಳಲ್ಲಿರುವ ಭಿನ್ನಭಿನ್ನ ಪಂಗಡಗಳು ತಪ್ಪಲ್ಲ; ಅವರ ಸಂಕುಚಿತದೃಷ್ಟಿಗೆ ಉದಾಹರಣೆಯಲ್ಲ; ಇದು ಶಕ್ತಿ ಬಾಹುಳ್ಯವಿರುವ ಯೌವನದ ಒಂದು ಚಿಹ್ನೆ. ಇದು ಶ್ರೀರಾಮಕೃಷ್ಣರೇ ಹೇಳಿದಂತೆ ಸಸಿಯನ್ನು ರಕ್ಷಿಸುವ ಒಂದು ಬೇಲಿ, ಆದರೆ ಮರಕ್ಕೆ ಅಪಾಯಕರ. ನಾವು ಧರ್ಮಕ್ಕೆ ಒಂದು ಮೇರೆಯನ್ನು ಕಲ್ಪಿಸಬಹುದು ಎಂದು ತಿಳಿದುಕೊಂಡಿರುವುದೇ ನಾವು ಕೇವಲ ಮಿತ ವಸ್ತುಗಳೊಂದಿಗೆ ವ್ಯವಹರಿಸುತ್ತಿರುವೆವು ಎಂಬುದನ್ನು ತೋರುವುದು. ಯಾವಾಗ ನಮ್ಮ ಅನುಭವ ಪೂರ್ಣವಾಗುವುದೋ ಆಗ ನಾವು ಅನಂತಾತ್ಮನನ್ನು ಚಿಂತಿಸುವೆವು. ಭೂಮಿಯಮೇಲೆ ಜನ ಹೊಲಗದ್ದೆಗೆ ಬೇಲಿಹಾಕುವರು. ಆದರೆ ಆಕಾಶದಲ್ಲಿ ಯಾರು ಬೇಲಿ ಹಾಕಬಲ್ಲರು ಎಂದು ಗುರುದೇವ ಹೇಳಿದ್ದರು.

ಹಿಂದೂಧರ್ಮದಲ್ಲಿ ಹಲವು ಸಿದ್ಧಾಂತಗಳು ಭಾವನೆಗಳು ಇವೆ. ಇದರ ಹಿಂದೆಲ್ಲ ಅನುಭವದ ತಳಹದಿ ಇದೆ. ಹಿಂದೂಧರ್ಮ ಏನನ್ನು ಬೇಕಾದರೂ ಸ್ವೀಕರಿಸಬಲ್ಲದು ಎಂಬುದಕ್ಕೆ ಸಾಕ್ಷಿಯಾಗಿದೆ. ಪುರೋಹಿತರು ವಿಧಿಸುತ್ತಿದ್ದ ಒಂದು ನಿಬಂಧನೆ ಸಮಾಜಕ್ಕೆ ಸಂಬಂಧಪಟ್ಟದ್ದು. ಇದರಿಂದ ಜಾತಿ ಸಂಕೋಚವಾದರೂ ವ್ಯಕ್ತಿ ಸ್ವತಂತ್ರನಾಗಿರಲು ಸಾಧ್ಯವಾಯಿತು. ಆದರೆ ಹಿಂದೂಧರ್ಮದ ಶಾಖೋಪಶಾಖೆಗಳಲ್ಲೆಲ್ಲಾ ಎಲ್ಲೋ ಕೆಲವು

ಮುಖ್ಯವಾದ ಭಾವನೆಗಳು ಪ್ರಚಾರದಲ್ಲಿದ್ದುವು. ೧೮೯೩ರಲ್ಲಿ ಸ್ವಾಮಿಜಿ ಚಿಕಾಗೊ ನಗರದಲ್ಲಿ ಮಾಡಿದ ಭಾಷಣದ ಸಾರಾಂಶವೇ ಇದು.

ಇವುಗಳಲ್ಲಿ ಮೊದಲನೆ ಮುಖ್ಯವಾದ ಭಾವನೆಯೆ, ಸೃಷ್ಟಿ ಒಂದು ಚಕ್ರದಂತೆ ಬಂದು ಹೋಗುತ್ತಿರುತ್ತದೆ ಎಂಬುದು. ಈಶ್ವರನಿಗೂ ಜಗತ್ತಿಗೂ ದ್ವೈತದೃಷ್ಟಿಯಲ್ಲಿ ಒಂದು ಸಂಬಂಧ ಇರುವುದು. ಇದು ಕೇವಲ ಸಾಪೇಕ್ಷ ಸಂಬಂಧ. ಇದೊಂದು ಗಹನವಾದ ಸಿದ್ಧಾಂತ. ವಿವೇಕಾನಂದರು ಅತಿ ಸ್ಪಷ್ಟವಾಗಿ ಇವುಗಳನ್ನು ಸಂಕ್ಷೇಪವಾಗಿ ವಿವರಿಸಿದರು. ಎರಡನೆಯ ಹಿಂದೂಗಳ ವೈಶಿಷ್ಟ್ಯ ಭಾವನೆಯೆ ಪುನರ್ಜನ್ಮ ಮತ್ತು ಕರ್ಮಸಿದ್ಧಾಂತ. ಮಾನವನಲ್ಲಿ ಸುಪ್ತವಾಗಿರುವ ಪವಿತ್ರತೆ ಕೊನೆಗೆ ಇದರ ಮೂಲಕ ವ್ಯಕ್ತವಾಗುವುದು. ಕೊನೆಯದೆ ಎಲ್ಲಾ ಭಾವನೆ ಮತ್ತು ಪೂಜೆಗಳ ಹಿಂದೆ ಇರುವುದು ಒಂದೇ ಸತ್ಯ ಎಂಬುದು. ಇವೇ ಅವುಗಳ ಮುಖ್ಯಲಕ್ಷಣ. ಕೆಲವು ಸ್ಪಷ್ಟವಾದ ವಾಕ್ಯಗಳಮೂಲಕ ನಿರ್ವಿವಾದವಾಗಿ ಐಕ್ಯತೆಯನ್ನು ಸಮರ್ಥಿಸಿ ಹಿಂದೂಧರ್ಮದ ಮುಖ್ಯ ಲಕ್ಷಣಗಳನ್ನು ಸಾರಿದ್ದರು. ಸನಾತನಧರ್ಮದಲ್ಲಿರುವ ದಿವ್ಯಸ್ಫೂರ್ತಿಯನ್ನು ಆಧುನಿಕ ಸರ್ವವ್ಯಾಪಿಯಾಗಿರುವ ಭಾವನೆಗಳಮೂಲಕ ಪಾಶ್ಚಾತ್ಯದೇಶಗಳಲ್ಲಿ ಇದನ್ನು ಸಾರಿದರು. ಇದೇ ಅವರ ಉಳಿದ ಕರ್ತವ್ಯ.

ಸ್ವಾಮಿಜಿ ಭರತಖಂಡಕ್ಕೆ ಹಿಂತಿರುಗಿದ ಮೇಲೆ ೧೮೯೭ರಲ್ಲಿ ದಾರ್ಶನಿಕ ರೀತಿ ಭಾರತೀಯ ತತ್ತ್ವ ಸಂಪ್ರದಾಯಕ್ಕೆ ತಮ್ಮ ಪ್ರಭಾವವನ್ನು ಬೀರಿದ್ದಾರೆ. ಎಲ್ಲಾ ಯುಗಪ್ರವರ್ತಕರೂ ಇದನ್ನು ಮಾಡಿದರೆಂದು ಬೇರೆ ಕಡೆ ಹೇಳಿದೆ. ಇದುವರೆಗೆ ದ್ವೈತ ವಿಶಿಷ್ಟಾದ್ವೈತ ಮತ್ತು ಅದ್ವೈತ ಜೀವಿಗಳಿಗೆ ಮೂರು ಬಗೆಯ ಬೇರೆ ಬೇರೆ ಮುಕ್ತಿಯ ಆದರ್ಶಗಳನ್ನು ನೀಡಿದ್ದವು. ಇವುಗಳನ್ನು ರಾಜಿ ಮಾಡಿಸುವುದಕ್ಕೆ ಹಿಂದೆ ಯಾವ ಪ್ರಯತ್ನವೂ ನಡೆದಿರಲಿಲ್ಲ. ೧೮೯೭ರಲ್ಲಿ ಸ್ವಾಮಿಜಿ ಮದ್ರಾಸಿಗೆ ಬಂದಮೇಲೆ, ದ್ವೈತ ಮತ್ತು ವಿಶಿಷ್ಟಾದ್ವೈತ ತನ್ನ ಚರಮ ಆದರ್ಶವನ್ನು ಮುಟ್ಟಿದರೂ ಇವೆಲ್ಲ ಕೊನೆಗೆ ಅದ್ವೈತಾನುಭವದಲ್ಲಿ ಪರಿಸಮಾಪ್ತವಾಗಬೇಕಾಗಿದೆ; ಅದಕ್ಕೆ ಒಯ್ಯುವ ಮೆಟ್ಟಿಲುಗಳು ಇವೆಲ್ಲ ಎಂದು ಸಾರಿದರು. ಒಂದು ದಿನ ಅವರು ಮಧ್ಯಾಹ್ನ ಸಂಭಾಷಣೆ ಮಾಡುತ್ತಿದ್ದಾಗ ಸ್ವಾಮಿಜಿ ಮೇಲೆ ಹೇಳಿದ್ದು ನಿಜವಾಗಿದ್ದರೆ ಹಿಂದಿನ ಆಚಾರ್ಯರು ಏತಕ್ಕೆ ಈ ವಿಷಯವಾಗಿ ಏನನ್ನೂ ಹೇಳಲಿಲ್ಲ ಎಂದು ಪ್ರಶ್ನಿಸಿದರು. ಸಾಧಾರಣವಾಗಿ ಸ್ವಾಮಿಜಿ ಇಂತಹ ಪ್ರಶ್ನೆಗಳಿಗೆ ಉತ್ತರ

ಕೊಡುವಾಗ ಮೊದಲು ಇಂಗ್ಲೀಷಿನಲ್ಲಿ ಮಾತನಾಡಿ ಅನಂತರ ಇಂಗ್ಲೀಷು ಭಾಷೆ ತಿಳಿಯದ ಪಂಡಿತರ ಪ್ರಯೋಜನಕ್ಕಾಗಿ ಸಂಸ್ಕೃತದಲ್ಲಿ ಮಾತನಾಡು ತ್ತಿದ್ದರು. ಮೇಲೆ ಕೇಳಿದ ಪ್ರಶ್ನೆಗೆ ಉತ್ತರವಾಗಿ ಸ್ವಾಮಿಜಿ "ಏಕೆಂದರೆ ನಾನು ಇದಕ್ಕಾಗಿ ಜನ್ಮವೆತ್ತಿದೆ. ನಾನು ಈ ಕೆಲಸವನ್ನು ಸಾಧಿಸ ಬೇಕಾಗಿತ್ತು" ಎಂದಾಗ ನೆರೆದವರಿಗೆಲ್ಲ ಆಶ್ಚರ್ಯವಾಗಿ ಸ್ಥಂಭೀಭೂತ ರಾದರು.

ಭರತಖಂಡದಲ್ಲಿ ಸ್ವಾಮಿಜಿ ಹಿಂದೂಧರ್ಮಕ್ಕೆ ಸೇರಿದ ಯಾವ ಪಂಗಡವನ್ನಾಗಲಿ ಬೇರ್ಪಡಿಸಲು ಮಾಡಿದ ಪ್ರಯತ್ನವನ್ನೆಲ್ಲಾ ವಿರೋಧಿಸು ತ್ತಿದ್ದರು. ಒಬ್ಬ ಬ್ರಹ್ಮಸಮಾಜ ಮತ್ತು ಆರ್ಯಸಮಾಜಕ್ಕೆ ಸೇರಿದ್ದರೂ ಸ್ವಾಮಿಜಿ ದೃಷ್ಟಿಯಲ್ಲಿ ಅವರು ಹಿಂದುಗಳೇ ಆಗಿದ್ದರು. ಹಿಂದೂಧರ್ಮ ತನ್ನ ದಿವ್ಯಸ್ಫೂರ್ತಿಯಿಂದ ಸೃಷ್ಟಿಸಿದ ಒಂದು ಅದ್ಭುತ ಸಂಸ್ಥೆ ಸಿಕ್ಕರ ಖಾಲ್ಸ ಎಂಬುದು. ಸ್ವಾಮಿಜಿ ಎಷ್ಟು ಉತ್ಸಾಹದಿಂದ ಗುರುಗೋವಿಂದ ಸಿಂಗ್ ತ್ಯಾಗ ಮಾಡುವುದಕ್ಕೆ ಹೇಗೆ ತನ್ನ ಕಡೆಯವರಿಗೆ ಅಪ್ಪಣೆ ಮಾಡಿ ದನು ಎಂಬುದನ್ನು ಪದೇಪದೇ ಬಣ್ಣಿಸುತ್ತಿದ್ದರು! ಹಿಂದೂಧರ್ಮದಲ್ಲಿ ಮೂರು ಅಂತಸ್ತುಗಳಿವೆ ಎಂದು ಅವರು ಹೇಳುತ್ತಿದ್ದರು. ಒಂದನೆಯದೆ ಹಿಂದಿನಿಂದ ಬಂದ ಸಂಪ್ರದಾಯಸ್ಥರು, ಎರಡನೆಯದೆ ಮಹಮ್ಮದೀಯರ ಕಾಲದಲ್ಲಿ ಬಂದ ಸುಧಾರಿತ ಶಾಖೆಗಳು, ಮೂರನೆಯದೆ ಆಧುನಿಕ ಕಾಲದ ಸುಧಾರಕ ಪಂಗಡಗಳು. ಇವರೆಲ್ಲರೂ ಹಿಂದೂಗಳೆ. ತಮ್ಮ ದೇಶ ಮತ್ತು ಧರ್ಮವನ್ನು ಉದಾರದೃಷ್ಟಿಯಿಂದ ನೋಡುವ ಸಲುವಾಗಿ ಇವರು ಯೌವನದಲ್ಲಿ ಬ್ರಹ್ಮಸಮಾಜಕ್ಕೆ ಸೇರಿದುದನ್ನು ಮರೆತವರಲ್ಲ. ತಾವು ಅನಂತರ ಅದನ್ನು ಅಲ್ಲಗಳೆಯುವುದನ್ನು ಬಿಟ್ಟು "ನಾನು ಬ್ರಹ್ಮ ಸಮಾಜಕ್ಕೆ ಸೇರಿದವನೆ ಅಲ್ಲವೆ ಎಂದು ಹೇಳುವುದು ಅವರಿಗೆ ಸೇರಿದ್ದು. ಅವರು ನನ್ನ ಹೆಸರನ್ನು ತೆಗೆಯದೆ ಇದ್ದರೆ ಇಂದಿಗೂ ನನ್ನ ಹೆಸರು ಅವರ ಪುಸ್ತಕದಲ್ಲಿ ಇರುವುದು." ಅವರ ದೃಷ್ಟಿಯಲ್ಲಿ ಒಬ್ಬ ಸಂಪ್ರದಾಯಸ್ಥ ನಾಗಲಿ, ಬ್ರಹ್ಮಸಮಾಜಕ್ಕೆ ಸೇರಿರಲಿ, ಆರ್ಯಸಮಾಜಕ್ಕೆ ಸೇರಿರಲಿ ಎಲ್ಲರೂ ಹಿಂದುಗಳೇ ಆಗಿದ್ದರು. ಜೈನರೂ ಕೂಡ ಹಿಂದೂಪಂಗಡಕ್ಕೆ ಸೇರಿದವರು ಎಂಬುದು ಸಾಮಾಜಿಕ ಮತ್ತು ಐತಿಹಾಸಿಕ ದೃಷ್ಟಿಯಿಂದ ಪ್ರಶ್ನಿಸು ವಂತೆಯೇ ಇಲ್ಲ. ಈಗಲೂ ಕೂಡ ಜೈನರಲ್ಲಿ ಸಂಪ್ರದಾಯಸ್ಥರ ಹುಡುಗ ರಿಗೆ ಆಯಾ ಪಂಗಡಕ್ಕೆ ಅನ್ವಯಿಸುವಂತೆ ತಮ್ಮ ಹುಡುಗಿಯರನ್ನು ಮದುವೆ

ಮಾಡಿಕೊಡುವರು. ಈಗಲೂ ಕೂಡ ಕೆಲವು ವೇಳೆ ಬ್ರಾಹ್ಮಣ ಪುರೋಹಿತರು ಅವರ ದೇವಾಲಯದಲ್ಲಿ ಪೂಜಿಸುತ್ತಿರುವರು. ಸ್ವಾಮಿಜಿಗೆ ಎಲ್ಲರಲ್ಲಿಯೂ ಶಿಷ್ಯರಿದ್ದರು. ಮಹಮ್ಮದೀಯರಲ್ಲಿಯೂ ಶಿಷ್ಯರಿದ್ದರು. ಒಬ್ಬ ಜೈನ ಸ್ನೇಹಿತರ ಸಹಾಯದಿಂದ ಜೈನರಲ್ಲದವರಿಗೆ ಸಿಕ್ಕಲಾರದಂತಹ ಜೈನ ಗ್ರಂಥಗಳನ್ನು ಓದಲು ಸಾಧ್ಯವಾಯಿತು. ಇದನ್ನು ಓದಿದಮೇಲೆ ಆ ಧರ್ಮದ ಪಾರಂಪರ್ಯ ಮತ್ತು ಅವರ ಸಿದ್ಧಾಂತಗಳು ಸತ್ಯ ಎಂಬುದು ಗೊತ್ತಾಯಿತು. ಹಿಂದೂಧರ್ಮದ ಬೆಳವಣಿಗೆಯ ಮೇಲೆ ಜೈನಧರ್ಮ ಯಾವ ಪ್ರಭಾವವನ್ನು ಬೀರಿತು ಎಂಬುದು ಚೆನ್ನಾಗಿ ಅವರಿಗೆ ಹೊಳೆಯಿತು. ಹಿಂದೂಧರ್ಮದಲ್ಲಿ ಇತರ ಭಾವನೆಗಳ ಜೊತೆಗೆ ಪ್ರಾಣಿದಯೆ ಮತ್ತು ಸನ್ಯಾಸ ಧರ್ಮಕ್ಕೆ ಗೌರವಗಳು ಇವೆ. ಜೈನರು ಇವೆರಡನ್ನೂ ಪ್ರತ್ಯೇಕ ಮಾಡಿ ಇವಕ್ಕೆ ಪ್ರಾಶಸ್ತ್ಯ ಕೊಟ್ಟಿದ್ದರು. ಇವರಲ್ಲಿ ಬರುವ ಜೀವಾಣು ಸಿದ್ಧಾಂತ [Germ Theory] ಜೈನಧರ್ಮದ ಮೂಲ ಪುರುಷರ ಪಾಂಡಿತ್ಯ ಮತ್ತು ಅವರ ಆಧ್ಯಾತ್ಮಿಕ ಅನುಭವಕ್ಕೆ ಸಾಕ್ಷಿಯಾಗಿವೆ. ಆಧುನಿಕ ವಿಜ್ಞಾನಶಾಸ್ತ್ರ ಕೂಡ ಇದನ್ನು ಅನುಮೋದಿಸಿದೆ. ಜೈನ ಸಿದ್ಧಾಂತಗಳನ್ನು ಆದಿಯಲ್ಲಿ ಮಹಾ ಋಷಿಗಳು ಸಾರಿದರು ಎಂಬುದು ಸತ್ಯ ಎಂದು ಸ್ವಾಮಿಜಿ ಒಪ್ಪಿದ್ದರು.

ಆಧುನಿಕ ಕಾಲದಲ್ಲಿ ಕ್ರೈಸ್ತಧರ್ಮವನ್ನು ಅವಲಂಬಿಸಿದ ಪಂಗಡಗಳು ಈ ಆಳುವವರ ಧರ್ಮವನ್ನು ಸ್ವೀಕರಿಸಿದ್ದರಿಂದ ಸಾಮಾಜಿಕದೃಷ್ಟಿಯಲ್ಲಿ ಮುಂದೆ ಬರುವುವು ಎಂದು ಸ್ವಾಮಿಜಿ ಆಶಿಸಿದರು. ಕಾಲಕ್ರಮೇಣ ಕ್ರೈಸ್ತಧರ್ಮವೆಲ್ಲ ಕಣ್ಮರೆಯಾದರೂ ಈ ಪ್ರಗತಿ ಅವರಲ್ಲಿಯೇ ಉಳಿಯುವುದು. ಹೀಗೆ ಕ್ರಮೇಣ ಹತ್ತೊಂಬತ್ತನೇ ಶತಮಾನದ ಅವಶೇಷ ಭವಿಷ್ಯದಲ್ಲಿ ನಾಶವಾದರೂ ಇದರಿಂದ ಭರತಖಂಡ ಕೆಲವು ಉತ್ತಮ ವಿಷಯಗಳನ್ನು ಪಡೆದುಕೊಂಡಿದ್ದನ್ನು ಸಂರಕ್ಷಿಸುವುದು. ಹೀಗೆ ಉತ್ತರದಲ್ಲಿ ಚೈತನ್ಯ ಹಿಂದೆ ಮಾಡಲಿಲ್ಲವೆ. ಚೈತನ್ಯ ತನ್ನ ಅನುಯಾಯಿಗಳಿಗಾಗಿ ಗೌರವಸ್ಥ ಜಾತಿಯನ್ನೇ ಸೃಷ್ಟಿಸಿರುವನು.

ಈ ಕ್ರೈಸ್ತಧರ್ಮ ಯಾವ ರೀತಿ ಕೆಲಸಮಾಡುತ್ತಿದೆಯೊ ಅದನ್ನು ಕ್ಷಮಿಸುವುದು ಕಷ್ಟ. ಆದರೆ ಹಿಂದೂಗಳಲ್ಲದ ಇಸ್ಲಾಂಧರ್ಮ ಹಾಗಲ್ಲ. ಈ ಧರ್ಮ ಸ್ವಾಮಿಜಿಯವರಿಗೆ ಯಾವಾಗಲೂ ಒಂದು ಭ್ರಾತೃವರ್ಗವನ್ನು ಸೃಷ್ಟಿಸಿ, ಎಲ್ಲರಿಗೂ ಸ್ವತಂತ್ರ ಕೊಟ್ಟು, ಅಲ್ಲಿರುವ ಧರ್ಮಾತ್ಮರನ್ನು ಎಲ್ಲ

ಸರಿಸಮನಾಗಿ ಮಾಡಿದರು. ಆಧುನಿಕ ಭರತಖಂಡದ ನಿರ್ಮಾಣದ ದೃಷ್ಟಿಯಿಂದ ಹೊರದೇಶದಿಂದ ಇಸ್ಲಾಂ ಮತೀಯರು ಇಲ್ಲಿಯ ಸಂಸ್ಕೃತಿ ಮತ್ತು ರಾಜ್ಯಾಡಳಿತವನ್ನು ಸ್ವೀಕರಿಸಿದ್ದನ್ನು ಎಂದಿಗೂ ಒಂದು ಕ್ಷಣವೂ ಸ್ವಾಮಿಜಿ ಮರೆಯಲಿಲ್ಲ. ನೀಚಕುಲದಲ್ಲಿ ಹುಟ್ಟಿದವರಿಗೆ ಸಮಾಜದಲ್ಲಿ ಹಕ್ಕುಬಾಧ್ಯತೆಗಳನ್ನು ಒದಗಿಸುವುದರಲ್ಲಿ, ಸಾಧು ಸ್ವಭಾವದ ಹಿಂದೂ ಗಳಲ್ಲಿ ಪರಸ್ಪರ ಕಲೆತು ಹೋರಾಡುವಂತೆ ಮಾಡುವುದರಲ್ಲಿ, ಇಸ್ಲಾಂ ಧರ್ಮ ಮಾಡಿದ ಸಹಾಯವನ್ನು ಅವರೆಂದಿಗೂ ಮರೆಯಲಿಲ್ಲ. ಅವರು ಮಹಮ್ಮದೀಯರಲ್ಲಿ ನಾಲ್ಕು ಜಾತಿಗಳಿದ್ದುವು ಎಂದು ಪದೇಪದೇ ಹೇಳು ತ್ತಿದ್ದರು. ಅದೇ ಸಯ್ಯದ್, ಪಠಾಣ್, ಮೊಗಲ್ ಮತ್ತು ಷೇಕ್. ಇವರುಗಳಲ್ಲಿ ಷೇಕ್ ಪಂಗಡದವರಿಗೆ ಹಿಂದೂಗಳಿಗಿರುವಂತೆಯೇ ಈ ದೇಶವೇ ಅವರಿಗೆ ತಾಯ್ನಾಡಾಗಿತ್ತು. ಒಂದು ಸಲ ಸ್ವಾಮಿಜಿ ತಮ್ಮ ಶಿಷ್ಯರೊಬ್ಬರಿಗೆ "ಶಾಜಹಾನ್ ಪರದೇಶದವನು ಎಂದು ಕೇಳಿದ್ದರೆ ಅವನು ಗೋರಿಯಲ್ಲೂ ಎದ್ದು ಕುಳಿತುಕೊಳ್ಳುತ್ತಿದ್ದ!" ಎಂದು ಹೇಳಿದರು. ಭರತಖಂಡದ ಹಿತಕ್ಕೋಸುಗ ಸ್ವಾಮಿಜಿ ಮಾಡುತ್ತಿದ್ದ ಪ್ರಾರ್ಥನೆಯೆ "ಇಸ್ಲಾಂದೇಹ ಮತ್ತು ವೇದಾಂತದ ಹೃದಯ" ಎಂಬ ಎರಡು ಆದರ್ಶಗಳು ಭಾರತೀಯನಲ್ಲಿ ಸಮ್ಮಿಳನವಾಗಬೇಕು ಎಂಬುದು.

ರಾಜಕೀಯ ದೃಷ್ಟಿಯಿಂದ ಸ್ವಾಮಿಜಿ ದೂರದಲ್ಲಿದ್ದರು. ಅವರ ದೃಷ್ಟಿಯಲ್ಲಿ ಭರತಖಂಡ ಅಖಂಡವಾದುದು. ಈ ಐಕ್ಯತೆ ಮನಸ್ಸಿಗಿಂತ ಹೃದಯಕ್ಕೆ ಹೆಚ್ಚು ಗೋಚರ. ತಮ್ಮ ಗುರುದೇವರ ಸಂದೇಶವನ್ನು ಪ್ರಪಂಚಕ್ಕೆ ಸಾರುವುದೇ ಇವರ ಪರಮ ಕರ್ತವ್ಯವಾಗಿತ್ತು. ತಮ್ಮ ಹೋರಾಟ ಆಸೆ ಆಕಾಂಕ್ಷೆಗಳೆಲ್ಲ ಭರತಖಂಡದ ಹಿತಕ್ಕಾಗಿಯೇ ಆಗಿತ್ತು. ಅವರೆಂದಿಗೂ ಜನಾಂಗದ ವಿಷಯವಾಗಿ ಮಾತನಾಡಲಿಲ್ಲ. ಆದರೆ ಅವರೇ ಭರತಖಂಡದ ಜನಾಂಗವೇ ಮೂರ್ತಿವೆತ್ತಂತೆ ಇದ್ದರು. ನಮ್ಮ ಗುರು ಗಳಾದ ಸ್ವಾಮಿಜಿ ತಮ್ಮ ಜೀವನದಲ್ಲೆ ಪರಸ್ಪರ ಪ್ರೀತಿ ಎಂಬ ಭಾರತೀ ಯರ ಆದರ್ಶವನ್ನು ವ್ಯಕ್ತಗೊಳಿಸಿರುವರು.

ಭರತಖಂಡ ಹಿಂದೆ ಹೇಗಿತ್ತೊ ಈಗಲೂ ಹಾಗೆಯೆ ಇರುವಂತೆ ಮಾಡುವುದಲ್ಲ ಸ್ವಾಮಿಜಿ ಉದ್ದೇಶ. ಯಾರು ಕೇವಲ ಈ ದೃಷ್ಟಿಯಿಂದ ಕೆಲಸಮಾಡುತ್ತಿದ್ದರೊ ಅವರನ್ನು ಕುರಿತೇ ಸ್ವಾಮಿಜಿ ಹೀಗೆ ಹೇಳುತ್ತಿದ್ದರು: "Egyptologist ಗೆ ಈಜಿಪ್ಟ್‌ದೇಶದ ಮೇಲೆ ಇರುವ ಪ್ರೀತಿಯಂತೆ

ಇದೆ ಅವರ ಪ್ರೀತಿ. ಇದು ಕೇವಲ ಸ್ವಾರ್ಥ. ಹಿಂದೆ ಗ್ರಂಥಗಳಲ್ಲಿ ಮಾಡಿದ ಅಧ್ಯಯನಗಳಲ್ಲಿ ಮತ್ತು ಕನಸಿನಲ್ಲಿ ಕಂಡ ಭರತಖಂಡವನ್ನು ಹೇಗೆ ಚಿತ್ರಿಸಿಕೊಂಡಿದ್ದರೊ ಅದರಂತೆ ಮುಂದೆ ಭರತಖಂಡ ಆಗಲಾರದು.'' ಅವರಿಗೆ ಹಿಂದಿನ ಕಾಲದ ಶಕ್ತಿ ಇರಬೇಕು, ಆದರೆ ಅದನ್ನು ಆಧುನಿಕ ಕಾಲಕ್ಕೆ ತಕ್ಕಂತೆ ಹಿಂದೆ ಎಂದೂ ಕನಸುಕಾಣದ ರೀತಿಯಲ್ಲಿ ಪ್ರಯೋಗ ಮಾಡಿಕೊಂಡು ಹೋಗುವಂತೆ ಇರಬೇಕಾಗಿತ್ತು. ಅವರಿಗೆ ಶಕ್ತಿಯಿಂದ ತುಂಬಿ ತುಳುಕುತ್ತಿರುವಂತಹ ಧರ್ಮ ಬೇಕಾಗಿತ್ತು. ಕೆಲಸಕ್ಕೆ ಬಾರದ ಪ್ರಗತಿಗೆ ವಿರೋಧವಾದ ನೀಚವಸ್ತುಗಳನ್ನೆಲ್ಲಾ ಒಟ್ಟು ಸೇರಿಸಿ ಅದನ್ನು Orthodox (ಸಂಪ್ರದಾಯಸ್ಥರು) ಎಂದು ಏಕೆ ಕರೆಯಬೇಕು? ಇದನ್ನು ನಾವು ಹಾಗೆ ಉಪಯೋಗಿಸಕೂಡದು. Orthodoxy ಎಂಬ ಪದದಲ್ಲಿ ಬಹಳ ಗಹನವಾದ ಬಲವಾದ ಮುಖ್ಯವಾದ ಅರ್ಥವಿದೆ. ಯಾರ ಮನೆ ಯಲ್ಲಿ ಪುರುಷರೆಲ್ಲ ಪಾಂಡವರಂತೆ ವೀರರಾಗಿರುವರೊ, ಸ್ತ್ರೀಯರಲ್ಲೆಲ್ಲ ಸೀತೆಯ ಮಹಿಮೆ, ಸಾವಿತ್ರಿಯ ನಿರ್ಭಯತೆ ಇದೆಯೊ ಅಂತಹ ಮನೆಯ ವರನ್ನು ಮಾತ್ರ ಸಂಪ್ರದಾಯವಂತರೆಂದು ಕರೆಯುತ್ತೇನೆ ಎನ್ನುತ್ತಿದ್ದರು. ಸುಧಾರಿತ ಅಥವಾ ಸಂಪ್ರದಾಯಸ್ಥ ಪಂಗಡಗಳಾಗುವುದಕ್ಕೂ ಸೇರದೆ ಇವರು ಪ್ರತ್ಯೇಕವಾಗಿ ನಿಂತರು. ಅವರಿಗೆ ಒಬ್ಬರಿಗಿಂತ ಇನ್ನೊಬ್ಬರ ಮೇಲೆ ಹೆಚ್ಚು ವಿಶ್ವಾಸವಿದ್ದಿತೆಂದು ಅಲ್ಲ. ಇಬ್ಬರ ಉದ್ದೇಶವೂ ಒಂದೇ. ಭರತಖಂಡದ ಮಹಿಮೆಯನ್ನು ಅನುಷ್ಠಾನಕ್ಕೆ ತರಲು ಯತ್ನಿಸುವುದು. ಸ್ತ್ರೀ ಮತ್ತು ಜನಸಾಮಾನ್ಯರ ದೃಷ್ಟಿಯಿಂದ ನಮ್ಮ ಈಗಿನ ಕರ್ತವ್ಯ, ಇರುವ ಸಂಸ್ಥೆಯನ್ನು ಬದಲಾಯಿಸುವುದಲ್ಲ; ಆದರೆ ತಮ್ಮ ಸಮಸ್ಯೆಯನ್ನು ತಾವೇ ನಿವಾರಿಸಿಕೊಳ್ಳುವಂತೆ ಅವರನ್ನು ಮಾಡಬೇಕಾಗಿದೆ. ಎಂದು ಅವರು ನಂಬಿದ್ದರು.

ಸ್ವಾಮಿಜಿ ಅಜ್ಞಾನವನ್ನು ಎಷ್ಟು ತೀವ್ರವಾಗಿ ಖಂಡಿಸುತ್ತಿದ್ದರೊ ಅಷ್ಟೇ ತೀವ್ರವಾಗಿ ಪವಾಡಮೋಹವನ್ನು ಖಂಡಿಸುತ್ತಿದ್ದರು. ಸಾಧಾರಣ ವಿದ್ಯಾವಂತರಲ್ಲಿರುವಂತೆ ಇವರಲ್ಲಿ ಕುತೋಹಲ, ವಿಷಯಗಳನ್ನು ತಿಳಿದು ಕೊಳ್ಳಬೇಕೆಂಬ ಆಸಕ್ತಿ ಇತ್ತು. ನೀರುಮೇಲೆ ನಡೆಯುವುದು, ಬೆಂಕಿ ಯೊಂದಿಗೆ ಆಡುವುದು, ಮುಂತಾದುವನ್ನು ಪರೀಕ್ಷೆಮಾಡಲು ಎಷ್ಟು ಬೇಕಾದರೂ ಇವರು ತೊಂದರೆಯನ್ನು ತೆಗೆದುಕೊಳ್ಳಲು ಸಿದ್ಧರಾಗಿದ್ದರು. ಇಂತಹ ಘಟನೆಗಳನ್ನು ವಿಮರ್ಶಿಸಲು ಹೊರಟರೆ ಕೊನೆಗೆ ಇವೆಲ್ಲಾ ಯಾರೊ

ಹೇಳಿದ್ದು ಎಂಬ ಕಂತೆಯ ಪುರಾಣವಾಗಬಹುದು ಎಂಬುದು ನಮಗೆಲ್ಲಾ ಗೊತ್ತಿದೆ. ಈ ತರಹ ಘಟನೆಗಳು ಒಂದು ವೇಳೆ ಸಾಧ್ಯವಾದರೂ ಇದೇನೂ ಅಷ್ಟೊಂದು ಮುಖ್ಯವಲ್ಲ. ಇದರಿಂದ ನಾವು ಈಗ ಜ್ಞಾನವನ್ನು ಯಾವ ನಿಯಮಾವಳಿಯ ಕೆಳಗೆ ತರುವೆವೋ ಅದು ಇನ್ನೂ ವಿಶಾಲವಾಗಬೇಕು, ವಿವರಿಸಲಾಗದ ಘಟನೆಗಳನ್ನು ವಿವರಿಸಲು ಸಾಧ್ಯವಾಗುವಂತೆ ಮಾಡ ಬೇಕೆಂಬುದನ್ನು ಮಾತ್ರ ಇವು ತೋರುವುವು. ಇವುಗಳಿಂದ ಯಾವ ಆಧ್ಯಾತ್ಮಿಕ ಅನುಭವವೂ ವ್ಯಕ್ತವಾಗುವುದಿಲ್ಲ. ಬುದ್ಧನ ಜೀವನದಲ್ಲಿ ಸ್ವಾಮಿಜಿಯವರನ್ನು ಬಹಳ ಆಕರ್ಷಿಸಿದ್ದು ಇದೊಂದು ಘಟನೆ. ಅವೇ ಒಂದು ಪವಾಡವನ್ನು ಮಾಡಿದ ಭಿಕ್ಷುವಿಗೆ ಹಾಗೆ ಮಾಡಬಾರದೆಂದು ಬುದ್ಧಿವಾದ ಹೇಳಿದ್ದು. ಬೈಬಲ್ಲಿನಲ್ಲಿ ಬರುವ ಕ್ರಿಸ್ತ ಪವಾಡವನ್ನು ಮಾಡದೆ ಇದ್ದರೆ ತನ್ನ ಪಾಲಿಗೆ ಅವನು ಹೆಚ್ಚು ಪೂರ್ಣನಾಗುತ್ತಿದ್ದ ಎನ್ನುತ್ತಿದ್ದರು. ಈ ವಿಷಯದಲ್ಲಿ ನಾನು ಸದಾನಂದರಿಂದ ಅನಂತರ ಕೇಳಿದಂತೆ ಪೌರಾತ್ಯ ರಿಗೂ ಪಾಶ್ಚಾತ್ಯರಿಗೂ ಸ್ವಭಾವತಃ ವ್ಯತ್ಯಾಸವಿದೆ. ಒಬ್ಬರು ಪವಾಡವನ್ನು ಖಂಡಿಸುವವರು; ಮತ್ತೊಬ್ಬರು ಅದನ್ನು ಮಹಾತ್ಮ್ಯೆಯ ಚಿಹ್ನೆ ಎಂದು ಹುಡುಕುತ್ತಿರುವರು. ಈ ವಿಷಯದಲ್ಲಿ ಮಂಗೋಲಿಯ ಮತ್ತು ಸೆಮಿಟಿಕ್ ಜನಾಂಗಗಳಲ್ಲಿ ಭಿನ್ನ ಭಾವಗಳಿವೆ. ಆರ್ಯರು ಇವರಿಬ್ಬರ ಮಧ್ಯೆ ಬರುವರು. ಇದು ಹೇಗಾದರೂ ಇರಲಿ, ಆಧುನಿಕ ಕಾಲದಲ್ಲಿ ಇಂತಹ ಪವಾಡಗಳ ಮೇಲಿನ ಅಭಿಮಾನ ಪೌರಾತ್ಯ ಸಾಧಾರಣ ಮನುಷ್ಯನಂತೆ ಅಲ್ಲ. ಅವನಲ್ಲಿ ಒಂದು ರಹಸ್ಯವಿದೆ, ಅವನಲ್ಲಿ ಯಾವುದೋ ಒಂದು ಅತೀಂದ್ರಿಯ ಶಕ್ತಿಯ ಗಣಿ ಇದೆ ಎಂಬ ತಪ್ಪು ಅಭಿಪ್ರಾಯ ಜನರಲ್ಲಿ ಹರಡುವಂತೆ ಮಾಡಿದೆ. ಸ್ವಾಮಿಜಿಗೆ ಇದನ್ನು ಕಂಡರೆ ಆಗುತ್ತಿರಲಿಲ್ಲ. ಇಂಡಿಯಾ ದೇಶದಲ್ಲಿ ಸಾಧಾರಣ ಜನ ಇರುವರು, ಇವರದೇ ಒಂದು ವೈಶಿಷ್ಟ್ಯವಿದೆ, ಇವರದೇ ಒಂದು ಸಂಸ್ಕೃತಿ ಇದೆ. ಆದರೆ ಬೇರೆ ವಿಧದಲ್ಲಿ ಎಲ್ಲರಂತೆಯೇ ಇವರೂ ಕೂಡ ಮನುಷ್ಯರು. ಸಾಧಾರಣ ಮನುಷ್ಯರಿಗೆ ಇರುವ ಕರ್ತವ್ಯಗಳಿವೆ, ಇತರರಂತೆ ಅವನೂ ಉದ್ವೇಗಕ್ಕೆ ಪರವಶವಾಗುವನು ಎಂಬುದನ್ನು ಪ್ರಪಂಚ ತಿಳಿಯಬೇಕು ಎಂದು ಹೇಳುತ್ತಿದ್ದರು.

ಹಿಂದೆ ಭರತಖಂಡದಲ್ಲಿ ಯಾವ ಸಂದೇಶವನ್ನು ಬೀರಿದ್ದರೊ ಅದನ್ನೇ ಪಾಶ್ಚಾತ್ಯ ದೇಶಗಳಲ್ಲಿಯೂ ಪ್ರಚಾರ ಪಡಿಸುವಷ್ಟು ಉದಾರ ಹೃದಯಿ ಗಳಾಗಿದ್ದರು. ಅದೇ ಮಾನವನಲ್ಲಿ ಇರುವ ಪವಿತ್ರತೆಯನ್ನು, ಶ್ರದ್ಧಾ

ಪೂರ್ವಕ ಮಾಡಿದ ಸೇವೆ, ಮತ್ತು ಇತರ ಮಾರ್ಗಗಳಿಂದ ಸಾಕ್ಷಾತ್ಕಾರ ಮಾಡಿಕೊಳ್ಳುವುದು. ಕೇವಲ ಇಂದ್ರಿಯಜನ್ಯ ವಿದ್ಯೆಯ ಮೇಲೆ ನಿಂತ ಜೀವನ ಒಂದು ಭ್ರಾಂತಿ; ಅಷ್ಟೇನೂ ಉತ್ತಮವಾದ ಕನಸಲ್ಲ. ಪೌರಾತ್ಯ ರಾಗಲಿ ಪಾಶ್ಚಾತ್ಯರಾಗಲಿ, ಇಬ್ಬರೂ ಈ ಕನಸಿನಿಂದ ಪಾರಾಗಬೇಕಾಗಿದೆ. ಇದಕ್ಕಿಂತಲೂ ಗಹನವಾಗಿರುವ ಸತ್ಯವನ್ನು ಅರಿಯಬೇಕಾಗಿದೆ. ಎಲ್ಲ ರಲ್ಲಿಯೂ ಅನಂತ ಶಕ್ತಿ ಹುದುಗಿದೆ ಎಂಬುದನ್ನು ವ್ಯಕ್ತಗೊಳಿಸಲು ಬೇರೆ ಬೇರೆ ಮಾರ್ಗಗಳನ್ನು ಅರಸುತ್ತಿದ್ದರು. ನನ್ನ ಜೀವನವೇ ಒಬ್ಬ ಮಹಾ ಪುರುಷನ ದಿವ್ಯಸ್ಫೂರ್ತಿಯಿಂದ ಉದ್ಧಾರವಾಯಿತು. ಆದರೆ ಏನು? ಸ್ಫೂರ್ತಿ ಜಗತ್ತಿನಲ್ಲಿ ಯಾವುದೋ ಒಂದು ವ್ಯಕ್ತಿಗೆ ಮಾತ್ರ ಮೀಸಲಾದುದಲ್ಲ ಎಂದರು.

"ಶ್ರೀರಾಮಕೃಷ್ಣ ಪರಮಹಂಸರು ದಿವ್ಯಸ್ಫೂರ್ತಿಯನ್ನು ಹೊಂದಿ ದ್ದರು ಎಂದು ನಾನು ನಂಬುತ್ತೇನೆ ನಿಜ; ಆದರೆ ನನಗೆ ಕೂಡ ಅವರಂತೆಯೇ ಸ್ಫೂರ್ತಿ ಇದೆ. ನಿಮ್ಮಲ್ಲಿಯೂ ಆ ಸ್ಫೂರ್ತಿ ಇದೆ. ನಿಮ್ಮ ಶಿಷ್ಯರಿಗೂ ಬರುವುದು; ಹೀಗೆ ಕೊನೆಯತನಕ" ಎಂದರು.

ಒಂದು ಸಲ ಹಿಂದಿನಕಾಲದಲ್ಲಿ ಬಳಕೆಯಲ್ಲಿದ್ದ ಒಂದು ಅಭ್ಯಾಸವನ್ನು ಎಂದರೆ ಬ್ರಹ್ಮನ ವಿಷಯವನ್ನು ಯೋಗ್ಯವಾದ ಶಿಷ್ಯರಿಗೆ ಮಾತ್ರ ಹೇಳ ಬೇಕು ಎಂದು ಹೇಳಿದಾಗ ಸ್ವಾಮಿಜಿ ಉದ್ವೇಗದಿಂದ ಹೀಗೆ ಹೇಳಿದರು: "ನಿಮಗೆ ಗೊತ್ತಿಲ್ಲವೆ, ರಹಸ್ಯವಾಗಿ ಯಾರಿಗೊ ಏನನ್ನೊ ಹೇಳಿಕೊಡ ಬೇಕೆಂಬ ಕಾಲ ಆಗಿಹೋಯಿತು ಎಂಬುದು. ಒಳ್ಳೆಯದಕ್ಕೊ ಕೆಟ್ಟದ್ದಕ್ಕೊ ಆ ಕಾಲ ಆಗಿಹೋಯಿತು. ಅದು ಇನ್ನು ಮತ್ತೆ ಬರುವಂತೆ ಇಲ್ಲ. ಭವಿಷ್ಯದಲ್ಲಿ ಸತ್ಯವನ್ನು ಎಲ್ಲರಿಗೂ ಸಾರಬೇಕಾಗಿದೆ."

ಐರೋಪ್ಯರ ನೇತೃತ್ವದಲ್ಲಿ ಭಾರತೀಯರಿಗೆ ಧರ್ಮ ಮತ್ತು ಅದರ ವ್ಯವಸ್ಥೆಯ ರೀತಿಯನ್ನು ಕಲಿಸುವುದನ್ನು ತುಂಬಾ ಅವಹೇಳನದಿಂದ ನೋಡುತ್ತಿದ್ದರು. ಇದು ಒಂದು ಜನಾಂಗವನ್ನು ಮತ್ತೊಂದು ಜನಾಂಗದ ಹಿತಕ್ಕಾಗಿ ಊನಮಾಡುತ್ತಿರುವ ಪ್ರಯತ್ನ ಎಂದರು. ಧಾರ್ಮಿಕ ವಿಷಯ ದಲ್ಲಿ ಯಾವ ಐರೋಪ್ಯರನ್ನೂ ಇವರು ಅಷ್ಟು ಸುಲಭವಾಗಿ ಸ್ವೀಕರಿಸಲಿಲ್ಲ.

ಕೊನೆಯದಾಗಿ ಕ್ರಿಸ್ತಪೂರ್ವ ಮೂರನೆ ಶತಮಾನದಲ್ಲಿ ಅಶೋಕ ಪ್ರಚಾರಕ್ಕೆ ಹೊರಟ ಭಿಕ್ಷುಗಳಿಗೆ ಇತ್ತ ಸಂದೇಶವನ್ನು ಪ್ರಸ್ತಾಪಿಸಿದರು. ತಮ್ಮ ಜನಾಂಗದ ಚರಿತ್ರೆಯಲ್ಲಿ ಈ ಘಟನೆಯನ್ನು ಒತ್ತಿ ಹೇಳುತ್ತಿದ್ದಂತೆ

ಮತ್ತಾವುದನ್ನೂ ಸ್ವಾಮಿಜಿ ಹೇಳಲಿಲ್ಲ. "ಎಲ್ಲಾ ಕಡೆಯಲ್ಲಿಯೂ ಯಾವುದಾದರೂ ಧರ್ಮಗಳು ಇದ್ದೇ ಇರುವುವು. ಅವುಗಳನ್ನು ವೃದ್ಧಿಮಾಡಿ; ಎಂದಿಗೂ ನಾಶಮಾಡಬೇಡಿ. ಇದನ್ನು ಗಮನದಲ್ಲಿಡಿ." ಭಾವನೆಯ ಒಂದು ವಿಶ್ವಸಾಮ್ರಾಜ್ಯವನ್ನು ಅಶೋಕ ಆಗ ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದ. ಪರಮ ಸತ್ಯವನ್ನು ಪಡೆಯುವುದು, ಶುದ್ಧ ಚಾರಿತ್ರವನ್ನು ರೂಢಿಸುವುದು, ಈ ಭಾವನೆಗಳಿಂದಲೇ ಪ್ರಪಂಚವೆಲ್ಲಾ ಓತಪ್ರೋತವಾಗಿರಬೇಕೆಂದು ಆಶಿಸಿದ್ದ. ಆದರೆ ಆಗಿನಕಾಲದಲ್ಲಿ ಸರಿಯಾದ ಪ್ರಯಾಣ ಸೌಕರ್ಯಗಳಿರಲಿಲ್ಲ. ಅರ್ಧಪ್ರಪಂಚ ಕೂಡ ಇನ್ನೂ ಬೆಳಕಿಗೆ ಬಂದಿರಲಿಲ್ಲ. ಎಷ್ಟೋ ಬಗೆಯ ಜನಾಂಗಗಳಿದ್ದುವು. ಆದಕಾರಣ ಇವುಗಳನ್ನೆಲ್ಲಾ ಸಾಧಿಸುವ ಹೊತ್ತಿಗೆ ಆದಿಯಲ್ಲಿದ್ದ ಸ್ಫೂರ್ತಿ, ಆದರ್ಶ, ಶ್ರದ್ಧೆ ಇವೆಲ್ಲ ಮರೆತುಹೋಗುವ ಸ್ಥಿತಿಯಲ್ಲಿತ್ತು. ಇವುಗಳನ್ನೆಲ್ಲಾ ಪರ್ಯಾಲೋಚಿಸಿಯೇ ಸ್ವಾಮಿಜಿ ಕಾಥಗೋಡಮಿನಿಂದ ಹಿಮಾಲಯದ ಮೇಲೆ ಹೋಗುತ್ತಿದ್ದಾಗ ಹೀಗೆ ಹೇಳಿದರು: "ಬೌದ್ಧರ ಭಾವನೆಗೆ ಆಧುನಿಕ ಪ್ರಪಂಚ ಮಾತ್ರ ಸಿದ್ಧವಾಗಿದೆ. ಇದಕ್ಕೆ ಮುಂಚೆ ಯಾರಿಗೂ ಅದನ್ನು ಕಾರ್ಯಗತ ಮಾಡುವ ಸೌಲಭ್ಯವಿರಲಿಲ್ಲ."

---

೧೮

## ಸ್ವಾಮಿ ವಿವೇಕಾನಂದರ ಕಣ್ಣಿಗೆ ಬುದ್ಧ

ಸ್ವಾಮಿಜಿಯಲ್ಲಿದ್ದ ಒಂದು ಉತ್ಕಟ ಬೌದ್ಧಿಕ ಅನುರಾಗವೆ ಬುದ್ಧನ ಮೇಲೆ ಇದ್ದ ಗೌರವ. ಸ್ವಾಮಿಜಿಯವರ ಇಷ್ಟೊಂದು ಆದರಕ್ಕೆ ಕಾರಣ ಬಹುಶಃ ಬುದ್ಧ ಐತಿಹಾಸಿಕ ವ್ಯಕ್ತಿಯಾಗಿದ್ದುದು ಇರಬಹುದು. ಧರ್ಮ ಗುರುಗಳಲ್ಲಿ ಬುದ್ಧ ಮತ್ತು ಮಹಮ್ಮದ್ ಇಬ್ಬರನ್ನು ಮಾತ್ರ ನಿಸ್ಸಂಶಯ ವಾಗಿ ನಂಬಬಹುದು ಎನ್ನುತ್ತಿದ್ದರು. ಏಕೆಂದರೆ ಅವರಿಗೆ ಮಾತ್ರ ಸ್ನೇಹಿ ತರು ಮತ್ತು ದ್ವೇಷಿಗಳು ಇಬ್ಬರೂ ಇರುವ ಅದೃಷ್ಟವಿತ್ತು. ಪುನಃ ಪುನಃ ಬುದ್ಧನ ಯುಕ್ತಿಪೂರ್ಣದೃಷ್ಟಿಯನ್ನು ಅವರು ಕೊಂಡಾಡುತ್ತಿದ್ದರು. ಬುದ್ಧ ಅವರ ದೃಷ್ಟಿಯಿಂದ ಶ್ರೇಷ್ಠತಮ ಆರ್ಯನುಮಾತ್ರವಲ್ಲ, ಪ್ರಪಂಚ ಇದುವರೆಗೆ ನೋಡಿದ ವಿವೇಕಿಗಳಲ್ಲೆಲ್ಲಾ ಆತ ಅತ್ಯುತ್ತಮ. ಪೂಜಿಸುವು ದನ್ನು ಆತ ಹೇಗೆ ನಿರಾಕರಿಸಿದ! ಆದರೂ ಅದನ್ನು ಗಮನಿಸಲಿಲ್ಲ. ಬುದ್ಧ ಒಂದು ವ್ಯಕ್ತಿಯಲ್ಲ ಅದೊಂದು ಅನುಭವ. ಎಲ್ಲರೂ ಇದಕ್ಕೆ ಪ್ರವೇಶಿಸಿ. ಅದರ ಕೀಲಿಕೆ ಇಲ್ಲದೆ, ತೆಗೆದುಕೊಳ್ಳಿ ಎಂದು ಸಾರಿದವನು ಅವನು.

ಜನಸಾಮಾನ್ಯರ ಪ್ರವಾಡ ಪ್ರಿಯತೆಯನ್ನು ಅವನು ಎಳ್ಳಷ್ಟೂ ಗಮನಿಸಲಿಲ್ಲ. ಒಂದು ಸಲ ಜನರೆದುರಿಗೆ ಮೇಲಿನ ಕಂಬ ಒಂದರ ಮೇಲೆ ಇದ್ದ ಕೆತ್ತನೆಯ ಕೆಲಸಮಾಡಿದ ಬಟ್ಟಲನ್ನು ಮಂತ್ರದ ಮೂಲಕ ಕೆಳಗೆ ತಂದ ಭಿಕ್ಷುವನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿ ಅದನ್ನು ಬಹಿಷ್ಕರಿ ಸಿದನು. ಧರ್ಮಕ್ಕೂ ಈ ವಿಧದ ದೊಂಬರಾಟಕ್ಕೂ ಏನೂ ಸಂಬಂಧವಿಲ್ಲ ಎನ್ನುತ್ತಿದ್ದನು.

ಆ ಧನ್ಯಾತ್ಮನಲ್ಲಿದ್ದ ಸ್ವಾತಂತ್ರ್ಯಮತಿ ಮತ್ತು ದೈನ್ಯತೆ ಎಷ್ಟು ಅಸೀಮವಾಗಿತ್ತು! ವೇಶ್ಯೆ ಅಂಬಾಪಾಲಿ ಕೊಟ್ಟ ಔತಣದಲ್ಲಿ ಭಾಗಿ ಯಾದನು. ಪರೆಯ ತನ್ನ ಜೀವನದ ಕೊನೆಗಾಲದಲ್ಲಿ ಕೊಟ್ಟ ಊಟದ ನಿಮಂತ್ರಣವನ್ನು ತಾನು ಕಾಲವಾಗುತ್ತೇನೆ ಎಂದು ತಿಳಿದಿದ್ದರೂ ಸ್ವೀಕರಿ ಸಿದನು. ಏಕೆಂದರೆ ತನ್ನ ಜೀವನದ ಕೊನೆಗಾಲ ಒಬ್ಬ ದೀನನ ಪ್ರೀತ್ಯರ್ಥ ವಾಗಿರಲಿ ಎಂದು ಭಾವಿಸಿದನು. ಅವನ ಮನೆಯಲ್ಲಿ ಊಟಮಾಡಿಹೋದ ಮೇಲೆ ಕಾಲವಾಗುವುದಕ್ಕಿಂತ ಮುಂಚೆ ಆತನಿಗೆ ದೇಹದಿಂದ ಮುಕ್ತನಾಗಿ ಹೋಗುವುದಕ್ಕೆ ನೀನು ಮಹದುಪಕಾರಮಾಡಿದೆ ಎಂದು ಧನ್ಯವಾದವನ್ನು

ಕಳುಹಿಸಿಕೊಟ್ಟನು. ಎಷ್ಟು ಪ್ರಶಾಂತಮೂರ್ತಿ! ಎಂತಹ ಪೌರುಷ! ನಿಜವಾಗಿಯೂ ಅವನು ಪುರುಷಸಿಂಹ! ಮಾನವಕೋಟಿಯಲ್ಲಿ ಚಂದ್ರನು ನಂತೆ ಬೆಳಗುತ್ತಿರುವನು.

ಯುಕ್ತಿಯಲ್ಲಿ ಪರಿಪೂರ್ಣನಾಗಿದ್ದಂತೆ ದಯೆಯಲ್ಲಿಯೂ ಅಷ್ಟೇ ಅಮೋಘವಾಗಿದ್ದನು. ರಾಜಗೃಹದ ಬಳಿ ಕುರಿಗಳನ್ನು ಸಂರಕ್ಷಿಸಲು ತನ್ನ ಪ್ರಾಣವನ್ನೇ ತೆರಲು ಸಿದ್ಧನಾಗಿದ್ದನು. ಒಂದು ಸಲ ವ್ಯಾಘ್ರಿಣಿಯ ಹಸಿವನ್ನು ತಣಿಸಲು ತನ್ನ ದೇಹವನ್ನೇ ಅದಕ್ಕೆ ಬಲಿ ಕೊಡುವುದರಲ್ಲಿದ್ದನು. ಇತರರ ಹಿತಕ್ಕಾಗಿ ತನ್ನ ಹಿಂದಿನ ಐನೂರು ಜನ್ಮಗಳನ್ನು ಧಾರೆಯೆರೆದು ಅನುಕಂಪದ ಅಮೃತವನ್ನು ಅವರಿಗೆ ಇತ್ತಿದ್ದನು. ಇದೇ ಅವನನ್ನು ಬುದ್ಧನನ್ನಾಗಿ ಮಾಡಿತು.

ಹಲವು ಶತಮಾನಗಳಾದರೂ ಅವನ ಒಂದು ಹಾಸ್ಯವಾಣಿ ಇಂದೂ ಅನುರಣಿತವಾಗುತ್ತಿದೆ. ಒಬ್ಬ ಯುವಕ ತಾನು ಎಂದೂ ನೋಡಿಲ್ಲದ ಪ್ರೇಯಸಿಗಾಗಿ ಹಂಬಲಿಸುತ್ತಿರುವನು! ಅವಳ ರೂಪನ್ನು ಕೂಡ ಇವನು ನೋಡಿಲ್ಲ. ಹೀಗೆಯೆ ಮಾನವಕೋಟಿ ದೇವರಿಗೆ ಹಲುಬುತ್ತಿರುವುದು. ಅತೀಂದ್ರಿಯ ವಸ್ತುವಿನ ಪಾಶದಿಂದ ಇವನು ಮಾತ್ರ ಧರ್ಮವನ್ನು ರಕ್ಷಿಸಿದನು. ಆದರೂ ಧರ್ಮದಲ್ಲಿ ಅದೇ ಶಕ್ತಿ, ಅನುಕಂಪ, ಇರುವಂತೆ ಮಾಡಿದನು. ಇವನು ಇದನ್ನು ತನ್ನ ವ್ಯಕ್ತಿ ಸಾಮರ್ಥ್ಯದಿಂದ ಸಾಧಿಸಿದನು. ಆಗಿನಕಾಲದ ಜನರ ಮೇಲೆಲ್ಲ ಇವನ ಪ್ರಭಾವ ಅದ್ಭುತವಾಗಿ ಹಬ್ಬಿತು.

ಒಂದುದಿನ ಸಾಯಂಕಾಲ ನಮ್ಮಲ್ಲಿ ಕೆಲವರಿಗೆ ಬುದ್ಧನ ಸತಿಯಾದ ಯಶೋಧರೆಗೆ ಕಂಡಂತೆ ಬುದ್ಧನ ಕಥೆಯನ್ನು ಹೇಳತೊಡಗಿದರು. ಕೇವಲ ಒಣಚಾರಿತ್ರಿಕ ಘಟನೆಗಳ ಆಧಾರಕ್ಕೆ ಸ್ವಾಮಿಜಿಯವರು ಭಾವಪೂರ್ಣವಾದ ಜೀವ ತುಂಬಿ ಹೇಳಿದರು. ಹೀಗೆ ನಾನು ಮತ್ತೊಬ್ಬರಿಂದ ಇದುವರೆಗೆ ಕೇಳಿಲ್ಲ. ವಿವೇಕಾನಂದರು ತಾವು ಸನ್ಯಾಸಿಗಳಾದುದರಿಂದ ಬುದ್ಧನಲ್ಲಿಯೂ ಒಂದು ದೊಡ್ಡ ಶಕ್ತಿ ಇತ್ತು ಎಂದು ಭಾವಿಸಿದರು. ಆತ ಐರೋಪ್ಯರ ದೃಷ್ಟಿಯಿಂದ ಮದುವೆ ಮಾಡಿಕೊಳ್ಳಬೇಕೆಂದು ಇಚ್ಛಿಸಿದ. ತಾನು ಯಾರನ್ನು ಮದುವೆಯಾಗಬೇಕೊ ಅವಳನ್ನು ತಾನೇ ಆರಿಸಿಕೊಳ್ಳುತ್ತೇನೆ ಎಂದ. ಅದಕ್ಕಾಗಿ ಒಂದುವಾರ ನಡೆದ ಸಮಾರಂಭ, ಅನಂತರ ಆದ ಲಗ್ನ ಎಲ್ಲವನ್ನೂ ವಿವರವಾಗಿ ಹೃದಯಕ್ಕೆ ತಟ್ಟುವಂತೆ ವಿವರಿಸಿದರು. ಅನಂತರ ಇಷ್ಟುಕಾಲ ಮದುವೆಯಾಗಿ ಒಡನಿದ್ದವರನ್ನು ಬೀಳ್ಕೊಡುವ

ಮಹಾರಾತ್ರಿ ಬಂದಿತು. ದೇವತೆಗಳು "ಜಾಗ್ರತನಾಗು, ಪ್ರಬುದ್ಧನಾದವನೆ ಜಾಗೃತನಾಗು, ಪ್ರಪಂಚಕ್ಕೆ ಸಹಾಯ ಮಾಡು" ಎಂದು ಹಾಡತೊಡಗಿದರು. ಮನಸ್ಸಿನಲ್ಲಿ ಹೋರಾಡುತ್ತಿದ್ದ ರಾಜಪುತ್ರ ಹೆಂಡತಿಯನ್ನು ಬೀಳ್ಕೊಡಲು ಅವಳು ಮಲಗಿ ನಿದ್ರಿಸುತ್ತಿದ್ದ ಹಾಸಿಗೆ ಸಮೀಪಕ್ಕೆ ಮತ್ತೆ ಮತ್ತೆ ಬರತೊಡಗಿದನು. "ಅವನ ವ್ಯಥೆಗೆ ಏನು ಕಾರಣ? ಏಕೆ ಅದು ಬಾಧಿಸುತ್ತಿತ್ತು? ಪ್ರಪಂಚಕ್ಕಾಗಿ ಈಗ ಇವಳನ್ನು ಬಲಿಕೊಡಬೇಕಾಗಿದೆ. ಇದೇ ಹೋರಾಟ! ತನಗಾಗಿ ಏನನ್ನೂ ಆಶಿಸಲಿಲ್ಲ."

ಅನಂತರ ಬುದ್ಧ ಜಯಶೀಲನಾಗುವನು. ಮಲಗಿರುವ ರಾಣಿಯ ಪಾದಗಳಿಗೆ ಸ್ವಲ್ಪವೂ ಎಚ್ಚರವಾಗದಂತೆ ಮುತ್ತಿಡುವನು. ಸ್ವಾಮಿಜಿ, "ಮಹಾಪುರುಷರ ಹೃದಯ ಹೇಗೆ ಇರುವುದು ಎಂಬುದನ್ನು ನೀನು ಎಂದಾದರೂ ಕುರಿತು ಯೋಚಿಸಿರುವೆಯಾ? ಅವರೆಷ್ಟು ಮಹಾ ಮಹಾ ಮಹಿಮರಾಗಿದ್ದರು, ಆದರೂ ಬೆಣ್ಣೆಯಷ್ಟು ಮೃದುವಾಗಿದ್ದರು" ಎಂದು ಹೇಳಿದರು.

ಏಳುವರುಷಗಳಾದ ಮೇಲೆ ಸಿದ್ಧಾರ್ಥ ಬುದ್ಧನಾಗಿ ಕಪಿಲವಸ್ತುವಿಗೆ ಹಿಂತಿರುಗಿ ಬರುತ್ತಿದ್ದ. ಯಶೋಧರೆ ಅಲ್ಲೆ ಇದ್ದುದು. ಸಿದ್ಧಾರ್ಥ ಅವಳನ್ನಗಲಿ ಹೋದಂದಿನಿಂದ ಕಾಶಾಯವಸ್ತ್ರಗಳನ್ನುಟ್ಟು ಗೆಡ್ಡೆಗೆಣಸುಗಳನ್ನು ತಿನ್ನುತ್ತ ಯಾವ ಹಾಸಿಗೆಯನ್ನೂ ಉಪಯೋಗಿಸದೆ ಯಾವ ಚಾವಣಿಯ ಕೆಳಗೂ ಹೋಗದೆ ಇದ್ದಳು. ತನ್ನ ರೀತಿಯಲ್ಲಿಯೇ ಸನ್ಯಾಸಿಯಂತೆ ಬಾಳುತ್ತಿದ್ದಳು. ಬುದ್ಧ ಇವಳಿದ್ದ ಸ್ಥಳಕ್ಕೆ ಬಂದ. ಯಶೋಧರೆ ಸತಿಯ ಪದ್ಧತಿಯಂತೆ ಬುದ್ಧನ ಬಟ್ಟೆಯ ತುದಿಯನ್ನು ಕಣ್ಣಿಗೆ ಒತ್ತಿಕೊಂಡಳು. ಬುದ್ಧ ಅವಳಿಗೆ ಮತ್ತು ಮಗನಿಗೆ ಧರ್ಮವನ್ನು ಬೋಧಿಸಿದನು. ಬುದ್ಧ ಬೋಧನೆಯ ತರುವಾಯ ತಾನಿಳಿದುಕೊಂಡಿದ್ದ ತೋಟದ ಕಡೆಗೆ ಹೋಗುವುದರಲ್ಲಿದ್ದ. ಯಶೋಧರೆ ಅವಸರದಿಂದ ತನ್ನ ಮಗನ ಕಡೆ ತಿರುಗಿ "ಬೇಗ ಹೋಗು, ನಿನ್ನ ತಂದೆಯನ್ನು ಕೇಳು ನಿನ್ನ ಪಾಲಿನ ಆಸ್ತಿಗಾಗಿ" ಎಂದಳು. ಮಗು ನನ್ನ ತಂದೆ ಯಾರು ಎಂದು ಕೇಳಿದಾಗ ಅವಳು ಏನನ್ನೂ ಮಾತನಾಡದೆ "ಆ ದಾರಿಯಲ್ಲಿ ಹೋಗುತ್ತಿರುವ ಪುರುಷಸಿಂಹನಿರುವನಲ್ಲ ಅವನೇ ನಿನ್ನ ತಂದೆ" ಎಂದಳು. ಶಾಖ್ಯ ಸಿಂಹಾಸನಕ್ಕೆ ಒಡೆಯನಾಗಲಿರುವ ಮಗು "ತಂದೆ, ನನ್ನ ಪಾಲಿನ ಆಸ್ತಿ

ಯನ್ನು ಕೊಡು" ಎಂದು ಕೇಳಿತು. ಮೂರುಸಲಿ ಮಗು ಬುದ್ಧನನ್ನು ಕೇಳಬೇಕಾಯಿತು. ಬುದ್ಧನು ಆನಂದನ ಕಡೆ ತಿರುಗಿ ನೋಡಿ 'ಅದಕ್ಕೆ ಕೊಡು' ಎಂದನು. ಆನಂದ ಕಾವಿಯ ಬಟ್ಟೆಯನ್ನು ಮಗುವಿಗೆ ಹೊದಿಸಿದನು.

ಯಶೋಧರೆಯೂ ಕೂಡ ಭಿಕ್ಷುಣಿಯಾಗಿ ಪತಿಯ ಸಮೀಪದಲ್ಲಿರ ಬೇಕೆಂದು ಬಯಸಿದಳು. ಆನಂದ ಅವಳ ಪರವಾಗಿ "ಸ್ತ್ರೀಯರು ಸಂಘಕ್ಕೆ ಸೇರಬಹುದೆ? ಅವರಿಗೂ ಕಾವಿಯ ಬಟ್ಟೆಯನ್ನು ನಾವು ಕೊಡ ಬಹುದೆ?" ಎಂದು ಕೇಳಿದನು. ಬುದ್ಧ "ಜ್ಞಾನಕ್ಕೆ ಲಿಂಗವೆಲ್ಲಿದೆ. ಸ್ತ್ರೀ ಸೇರಬಾರದು ಎಂದು ಎಂದಾದರೂ ನಾನು ಹೇಳಿರುವೆನೆ? ಆದರೆ ನೀನು ಇದನ್ನು ಕೇಳಬೇಕಾಗಿತ್ತು ಆನಂದ" ಎಂದು ಉತ್ತರವಿತ್ತನು. ಯಶೋಧರೆಯೂ ಭಿಕ್ಷುಣಿಯಾದಳು. ಏಳುವರ್ಷಗಳ ಪ್ರೀತಿ ಮತ್ತು ಕನಿಕರ ಯಶೋಧರೆಗೆ ಉಕ್ಕಿ ಬಂತು. ಇವುಗಳೆಲ್ಲಾ ಜಾತಕ ಕಥೆ ಗಳಲ್ಲಿ ವ್ಯಕ್ತವಾಗಿದೆ. ಇವುಗನ್ನೆಲ್ಲಾ ಹೇಳಿದ್ದು ಅವಳಿಗಾಗಿ. ಐನೂರು ವೇಳೆ ಹಿಂದೆ ಅವರಿಬ್ಬರೂ ತಮ್ಮನ್ನು ಮರೆತಿದ್ದರು. ಈಗ ಇಬ್ಬರು ಒಟ್ಟಿಗೆ ಪೂರ್ಣಾತ್ಮರಾಗುತ್ತಿರುವರು. "—ಹೌದು, ಹೌದು, ಅದು ಹೀಗೆಯೆ ಇತ್ತು. ಯಶೋಧರೆ ಮತ್ತು ಸೀತೆಯರ ಶ್ರದ್ಧೆಯನ್ನು ಪರೀಕ್ಷಿ ಸಲು ನೂರು ವರುಷ ಸಾಲವಾಗಿತು" ಎಂದರು ಸ್ವಾಮಿಜಿ. ಕೊನೆಗೆ ಸ್ವಾಮಿಜಿ ಹೀಗೆ ಹೇಳಿದರು: "ಇಲ್ಲ, ಇಲ್ಲ, ನಮ್ಮಲ್ಲಿ ಇನ್ನೂ ವ್ಯಾಮೋಹ ವಿದೆ ಎಂಬುದನ್ನು ಒಪ್ಪಿಕೊಳ್ಳೋಣ. ಪ್ರತಿಯೊಬ್ಬನೂ ತಾನಿನ್ನೂ ಆದರ್ಶದ ಮಟ್ಟಕ್ಕೆ ಏರಿಲ್ಲ ಎಂದು ಹೇಳಿಕೊಳ್ಳಲಿ. ಯಾರೂ ಇತರರನ್ನು ಬುದ್ಧನೊಡನೆ ಹೋಲಿಸಲು ಪ್ರಯತ್ನಿಸದಿರಲಿ."

ನನ್ನ ಗುರುದೇವ ದಕ್ಷಿಣೇಶ್ವರದಲ್ಲಿ ಹುಡುಗನಾಗಿದ್ದಾಗ ಬೌದ್ಧ ಧರ್ಮದಮೇಲೆ ಇಡೀ ಪ್ರಪಂಚವೇ ಆಕರ್ಷಿತವಾಯಿತು. ಬೋಧಗಯಾ ದೇವಸ್ಥಾನದ ಜೀರ್ಣೋದ್ಧಾರ ಈ ಸಮಯದಲ್ಲಿ ಇಂಗ್ಲೀಷರ ಅಪ್ಪಣೆ ಮೇರೆಗೆ ನಡೆಯುತೊಡಗಿತು. ರಾಜೇಂದ್ರಲಾಲ್ ಮಿತ್ರ ಎಂಬ ವಂಗ ವಿದ್ವಾಂಸರು ಈ ವಿಷಯದ ಮೇಲೆ ತುಂಬಾ ಆಸಕ್ತರಾಗಿ ಕೆಲಸಮಾಡು ತ್ತಿದ್ದುದರಿಂದ ಭರತಖಂಡದಲ್ಲೆಲ್ಲಾ ಬುದ್ಧನ ವಿಷಯದಲ್ಲಿ ಜನರ ಆಸಕ್ತಿ ಕೆರಳಿತು. ೧೮೭೯ ರಲ್ಲಿ ಸರ್ ಎಡ್‌ವಿನ್ ಆರ್‌ನಾಲ್ಡ್‌ರ 'ಏಷ್ಯಾಜ್ಯೋತಿ' ಎಂಬ ಆಂಗ್ಲೇಯ ಗ್ರಂಥ ಪ್ರಕಟವಾಯಿತು. ಇದು ಇಂಗ್ಲೀಷ್

ಮಾತನಾಡಬಲ್ಲವರ ಭಾವವನ್ನೆಲ್ಲಾ ಮಥಿಸತೊಡಗಿತು. ಇದರಿಂದ ಸಾಧಾರಣ ಜನರ ಉತ್ಸಾಹವೂ ಜಾಗ್ರತವಾಯಿತು. ಏಷ್ಯಾಜ್ಯೋತಿ ಅಶ್ವಘೋಷನ ಬುದ್ಧಚರಿತೆಯ ಅನುವಾದ ಎಂದು ಹಲವು ಕಡೆ ಹೇಳ ಬಹುದು. ಸ್ವಾಮಿಜಿ ಬರೀ ಎರವಲಾಗಿ ಬಂದ ಗ್ರಂಥವನ್ನು ಓದಿಯೇ ಅವರ ಸ್ಫೂರ್ತಿ ತಣಿಯಲಿಲ್ಲ. ೧೮೮೭ರಲ್ಲಿ ಇವರು ಕೆಲವು ಗುರುಭಾಯಿ ಗಳೊಡನೆ ಲಲಿತವಿಸ್ತಾರ ಮತ್ತು ಪ್ರಜ್ಞಾಪಾರಮಿತ ಗ್ರಂಥಗಳನ್ನು ಮೂಲ ದಲ್ಲಿ ಓದಿದರು. ಅವರಿಗೆ ಸಂಸ್ಕೃತ ಭಾಷೆಯ ಜ್ಞಾನ ವಿದ್ದುದರಿಂದ ಅದರಿಂದ ಜನ್ಯವಾದ ಭಾಷೆಯನ್ನು ಓದಿ ತಿಳಿದುಕೊಳ್ಳಲು ಸಾಧ್ಯವಾಯಿತು. ರಾಜೇಂದ್ರಲಾಲ ಮಿತ್ರರ ಲೇಖನಗಳು ಮತ್ತು ಏಷ್ಯಾ ಜ್ಯೋತಿಯನ್ನು ಓದಿದ ಪ್ರಭಾವ ಕೇವಲ ತಾತ್ಕಾಲಿಕವಾಗಿರಲಿಲ್ಲ. ಹುಡುಗರಾಗಿದ್ದಾಗ ಯಾವ ಬೀಜ ಸ್ವಾಮಿಜಿ ಹೃದಯದಲ್ಲಿ ಬಿತ್ತೊ ಅದು ಅವರು ಸನ್ಯಾಸ ಸ್ವೀಕರಿಸಿದ ತಕ್ಷಣವೇ ಮೊಳೆತು ಫಲಕೊಡಲು ಪ್ರಾರಂಭಿಸಿತು. ಅವರು ಆಗ ಮಾಡಿದ ಪ್ರಥಮ ಕೆಲಸವೆ ಬುದ್ಧಗಯೆಗೆ ಹೋದದ್ದು. ಬೋಧಿ ವೃಕ್ಷದ ಕೆಳಗೆ ಕುಳಿತುಕೊಂಡು "ತಥಾಗತ ಹೀರಿದ ಉಸಿರನ್ನೇ ನಾನು ಈಗ ತೆಗೆದುಕೊಳ್ಳುತ್ತಿರುವುದು ನಿಜವೆ? ಅವನು ಸ್ಪರ್ಶಮಾಡಿದ ನೆಲದ ಮೇಲೆ ನಾನೀಗ ಇರುವುದು ನಿಜವೆ?" ಎಂದುಕೊಂಡರು.

ಅವರ ಜೀವನದ ಕೊನೆಗಾಲದಲ್ಲಿಯೂ ತಮ್ಮ ಮೂವತ್ತೊಂಭತ್ತನೆಯ ಜನ್ಮದಿನದ ಪ್ರಾತಃಕಾಲ ಬೋಧಗಯೆಗೆ ಬಂದರು. ಇಲ್ಲಿಂದ ಸ್ವಾಮಿಜಿ ಕಾಶಿಗೆ ಹೋದರು. ಇದೇ ಅವರು ಕೈಕೊಂಡ ಕೊನೆಯ ಪ್ರವಾಸ.

ಸ್ವಾಮಿಜಿ ಪರಿವ್ರಾಜಕರಾಗಿ ಹಿಂದೆ ಅಲೆದಾಡುತ್ತಿದ್ದಾಗ ಯಾವುದೋ ಒಂದು ಸ್ಥಳದಲ್ಲಿ ಬುದ್ಧನ ಅವಶೇಷವನ್ನು ಸ್ಪರ್ಶಿಸಲು ಅವಕಾಶ ದೊರೆ ಯಿತು. ಅಂದಿನಿಂದ ಆ ವಿಷಯವನ್ನು ಹೇಳುವಾಗಲೆಲ್ಲ ಅವರಲ್ಲಿ ಗೌರವ ಮತ್ತು ಪೂಜ್ಯ ಬುದ್ಧಿ ಹೊರಹೊಮ್ಮುತ್ತಿತ್ತು. ಅವತಾರ ಗಳನ್ನು ಪೂಜಿಸುವ ವಿಷಯವಾಗಿ ಯಾರೋ ಪ್ರಶ್ನಿಸಿದಾಗ ಸ್ವಾಮಿಜಿ ಹೀಗೆಂದರು: "ನಿಜವಾಗಿ ಮ್ಯಾಡಮ್, ನಾನೇನಾದರೂ ನಜರೆತ್ತಿನ ಜೀಸಸ್ ಇದ್ದ ಕಾಲದಲ್ಲಿ ಇದ್ದಿದ್ದರೆ ನಾನು ಅವನ ಪಾದಕಮಲಗಳನ್ನು ಕಣ್ಣೀರಿನಿಂದ ತೊಳೆಯುತ್ತಿರಲಿಲ್ಲ; ನನ್ನ ಹೃದಯದ ಬಿಸಿರಕ್ತದಿಂದ ತೊಳೆಯುತ್ತಿದ್ದೆ."

ಯಾರೊ ಬೌದ್ಧಧರ್ಮದ ವಿಷಯವಾಗಿ ತಪ್ಪು ಅಭಿಪ್ರಾಯವನ್ನು ಕೊಟ್ಟಾಗ ಅವರಿಗೆ ಉತ್ತರ ಹೇಳುವ ಸಮಯದಲ್ಲಿ "ನಾನು ಬುದ್ಧನ ದಾಸರ ದಾಸರ ದಾಸರ ದಾಸ" ಎಂದರು. ತಾವು ಬುದ್ಧನ ಅನುಯಾಯಿ ಎಂದು ಹೇಳಿಕೊಳ್ಳುವುದಕ್ಕೂ ಕೂಡ ಯೋಗ್ಯನಲ್ಲ ಎಂದು ಭಾವಿಸಿದ್ದರು.

ಬುದ್ಧನ ಕೇವಲ ಚಾರಿತ್ರಿಕ ವ್ಯಕ್ತಿತ್ವದಿಂದಲೇ ಇವರು ಮಾರುಹೋಗಲಿಲ್ಲ. ಇದರಷ್ಟೇ ಮುಖ್ಯವಾಗಿದ್ದು ತಮ್ಮ ಗುರುಗಳ ಜೀವನಕ್ಕೂ ಇಪ್ಪತ್ತೈದು ಶತಮಾನಗಳ ಹಿಂದೆ ಬಾಳಿದ ಬುದ್ಧನ ಜೀವನಕ್ಕೂ ಇದ್ದ ಸಾಮ್ಯ. ಇವರು ಬುದ್ಧನಲ್ಲಿ ಶ್ರೀರಾಮಕೃಷ್ಣ ಪರಮಹಂಸರನ್ನು ಕಂಡರು, ರಾಮಕೃಷ್ಣ ಪರಮಹಂಸರಲ್ಲಿ ಬುದ್ಧನನ್ನು ಕಂಡರು.

ಬುದ್ಧನ ಕೊನೆಗಾಲವನ್ನು ವಿವರಿಸುತ್ತಿದ್ದಾಗ ಸ್ವಾಮಿಜಿಯವರ ಮನಸ್ಸಿನಲ್ಲಿದ್ದ ಈ ಸಾಮ್ಯಭಾವನೆ ಒಂದು ದಿನ ಮಿಂಚಿನಂತೆ ಹೊಳೆಯಿತು. ಮರದ ಕೆಳಗೆ ಬುದ್ಧನಿಗೆ ಮಲಗಲು ಹೇಗೆ ಒಂದು ಬಟ್ಟೆಯನ್ನು ಹಾಕಿದ್ದರು ಎಂಬುದನ್ನು ಹೇಳಿದರು. ಅದರ ಮೇಲೆ ತಥಾಗತ ಬಲಗಡೆಗೆ ತಿರುಗಿ ಸಿಂಹದಂತೆ ಮಹಾ ನಿರ್ವಾಣಕ್ಕೆ ಅಣಿಯಾಗಿ ಮಲಗಿದನು. ಆ ಸಮಯದಲ್ಲಿ ಯಾರೊ ಉಪದೇಶವನ್ನು ಕೇಳಲು ಓಡಿಬಂದರು. ಸುತ್ತಲು ಇದ್ದ ಶಿಷ್ಯರು ಇವನಿಗೆ ಅವಕಾಶಕೊಡಲು ಇಚ್ಛಿಸಲಿಲ್ಲ. ಕೊನೆಗಾಲದಲ್ಲಿ ಹೇಗಾದರೂ ಶಾಂತಿ ಇರಲಿ ಎಂದು ಭಾವಿಸಿದ್ದರು. ಆದರೆ ಬುದ್ಧನಿಗೆ ಇದು ತಿಳಿದು "ಇಲ್ಲ, ಆತನನ್ನು ತಡೆಯಬೇಡಿ, ಯಾರು ಇದಕ್ಕಾಗಿ ಪ್ರಪಂಚಕ್ಕೆ ಬಂದನೊ ಅವನು ಈ ಕೆಲಸಕ್ಕೆ ಸಿದ್ಧನಾಗಿರುವನು" ಎಂದು ಹೇಳಿದನು. ಕೈಮೇಲೆ ಒರಗಿಕೊಂಡು ಮೇಲೆದ್ದು ಬಂದವನಿಗೆ ಉಪದೇಶ ಕೊಟ್ಟು ಕಳುಹಿಸಿದನು. ಹೀಗೆ ನಾಲ್ಕು ಸಲ ಆಯಿತು. ಅನಂತರವೇ ಬುದ್ಧ ಪರಿನಿರ್ವಾಣಕ್ಕೆ ಸಿದ್ಧನಾದ. ಮೊದಲು ಅಳುತ್ತಿದ್ದ ಆನಂದನಿಗೆ ಬುದ್ಧಿ ಹೇಳಿದನು. ಬುದ್ಧ ಒಂದು ವ್ಯಕ್ತಿಯಲ್ಲ, ಅದೊಂದು ಸ್ಥಿತಿ, ಅದನ್ನು ಯಾರು ಬೇಕಾದರೂ ಪಡೆಯಬಹುದು. ಕೊನೆಯವರೆಗೂ ಯಾರನ್ನೂ ಪೂಜಿಸಬೇಡಿ ಎಂದು ಹೇಳಿದನು.

ಹೀಗೆ ಸ್ವಾಮಿಜಿ ಹೇಳುತ್ತಿದ್ದ ಅಮರಕಥೆ ಮುಂದೆ ಸಾಗಿತು. ಇವರಾಡುವುದನ್ನು ಕೇಳುತ್ತಿದ್ದಾಗ ಮಧ್ಯೆಮಧ್ಯೆ ಸ್ವಾಮಿಜಿ ಮಾತನ್ನು ನಿಲ್ಲಿಸುತ್ತಿದ್ದರು. ಇದು ಗಮನಾರ್ಹವಾಗಿತ್ತು. "ತನ್ನ ಮೊಳಕೈಮೇಲೆ ಕೈಯೂರಿಕೊಂಡು ಮೇಲೆದ್ದು ಬೋಧಿಸಿದನು. ಇದನ್ನು ನಾನು

ಶ್ರೀರಾಮಕೃಷ್ಣರ ಜೀವನದಲ್ಲಿಯೂ ನೋಡಿದೆನು. ಆಗ ಶ್ರೀರಾಮಕೃಷ್ಣರ ನಿರ್ಯಾಣಸಮಯ ಸನ್ನಿಹಿತವಾಗುತ್ತಿದ್ದಾಗ ಒಬ್ಬ ಶ್ರೀರಾಮಕೃಷ್ಣರನ್ನು ನೋಡಲು ನೂರು ಮೈಲಿ ನಡೆದುಕೊಂಡು ಕಾಶೀಪುರಕ್ಕೆ ಬಂದವನ ಚಿತ್ರ ಬಂದಿತು. ಇಲ್ಲಿಯೂ ಕೂಡ ಶಿಷ್ಯರು ಶ್ರೀರಾಮಕೃಷ್ಣರ ಬಳಿಗೆ ಬರಲು ಅವನಿಗೆ ಅವಕಾಶವನ್ನು ಕೊಡಲು ಹಿಂಜರಿಯುತ್ತಿದ್ದರು. ಆದರೆ ಶ್ರೀರಾಮಕೃಷ್ಣರೆ ಹೇಳಿ ಕಳುಹಿಸಿ ಅವನಿಗೆ ಉಪದೇಶ ಮಾಡಿದರು.

ಬೌದ್ಧರ ಸಿದ್ಧಾಂತ ಮತ್ತು ಇತಿಹಾಸವನ್ನು ಸ್ವಾಮಿಜಿ ಅನೇಕ ವೇಳೆ ಮನನ ಮಾಡುತ್ತಿದ್ದರು. ಮಧ್ಯೆ ಮಧ್ಯೆ ಮಾತನಾಡುತ್ತಿದ್ದಾಗ ಇದಕ್ಕೆ ಸಂಬಂಧಪಟ್ಟ ವಿಷಯಗಳನ್ನು ಉಲ್ಲೇಖಿಸುತ್ತಿದ್ದುದರಿಂದ ಅವರ ಮನಸ್ಸು ಅದನ್ನೇ ಚಿಂತಿಸುತ್ತಿತ್ತು ಎಂದು ಊಹಿಸಬಹುದು. "ಆಕಾರ, ಭಾವ, ವೇದನೆ, ಚಲನೆ, ಜ್ಞಾನ" ಇವೇ ಪಂಚ ತತ್ತ್ವಗಳು. ಒಂದು ಸಲಿ ಬುದ್ಧನ ಉಪದೇಶದಿಂದ ಇದನ್ನು ಉದಹರಿಸಿದರು. "ಮೇಲಿನ ತತ್ತ್ವಗಳೆಲ್ಲ ಸೇರಿ ಬೇರೆಯಾಗುತ್ತಿವೆ. ಇದೇ ಮಾಯ. ಯಾವ ಒಂದು ಅಲೆಯನ್ನು ತೆಗೆದುಕೊಂಡರೂ ಅದರ ವಿಷಯವಾಗಿ ನಾವು ಏನನ್ನೂ ಹೇಳಲಾಗುವುದಿಲ್ಲ. ಏಕೆಂದರೆ ಅದು ನಿಜವಾಗಿ ಇಲ್ಲ. ಅದು ಇತ್ತು, ಈಗ ಮಂಗಮಾಯವಾಯಿತು. ಮಾನವ ಅರಿ, ನೀವೇ ಆ ಸಾಗರ. ಇದೇ ಕಪಿಲನ ಸಿದ್ಧಾಂತ. ಆದರೆ ಅವನ ಪ್ರಖ್ಯಾತ ಶಿಷ್ಯ ಅದಕ್ಕೆ ಪ್ರೇಮ ತುಂಬಿ ಅದನ್ನು ಸಜೀವವನ್ನಾಗಿ ಮಾಡಿದನು!"

ಈ ಮಹಾ ಶಿಷ್ಯನ ವಾಣಿಯೆ ಸ್ವಾಮಿಜಿ ಹೃದಯದಲ್ಲಿ ಅನುರಣಿತವಾಯಿತು. ಸ್ವಲ್ಪ ಹೊತ್ತು ಸುಮ್ಮನಿದ್ದರು. ಅನಂತರ ಧರ್ಮಪದದ ಅಮರಸಂದೇಶವನ್ನು ಉಲಿಯತೊಡಗಿದರು:

"ದಾರಿಯಿಲ್ಲದೆ ಮುಂದುವರಿ. ಯಾವುದಕ್ಕೂ ಅಂಜದೆ, ಯಾವುದನ್ನೂ ಗಮನಿಸದೆ, ಏಕಾಂಗಿಯಾಗಿ ಸಂಚರಿಸು ಖಡ್ಗಾಮೃಗದಂತೆ. ಶಬ್ದಕ್ಕೆ ಕಳವಳಗೊಳ್ಳದ ಕೇಸರಿಯಂತೆ, ನೀರಿನಲ್ಲಿ ಒದ್ದೆಯಾಗದ ತಾವರೆ ಎಲೆಯಂತೆ, ಖಡ್ಗಾಮೃಗದಂತೆ ನೀನು ಏಕಾಂಗಿಯಾಗಿ ಸಂಚರಿಸು."

"ಅವರ ಶಕ್ತಿಯನ್ನು ಊಹಿಸಬಲ್ಲೆಯಾ" ಎಂದು ಒಮ್ಮೆ ಕೇಳಿದರು. ಅದೇ ಬುದ್ಧನ ಪರಿನಿರ್ಯಾಣದ ನಂತರ ಯಾರು ಅಧ್ಯಕ್ಷನಾಗಬೇಕೆಂದು ಮೊದಲನೆ ಧರ್ಮಸಭೆಯಲ್ಲಿ ಚರ್ಚೆ ನಡೆದಾಗ. ಒಬ್ಬರು ಆನಂದನೇ ಅಧ್ಯಕ್ಷನಾಗಬೇಕು, ಏಕೆಂದರೆ ಬುದ್ಧ ಅವನನ್ನು ಎಲ್ಲರಿಗಿಂತಲೂ

ಹೆಚ್ಚಾಗಿ ಪ್ರೀತಿಸುತ್ತಿದ್ದನು'' ಎಂದರು. ಆದರೆ ಮತ್ತಾರೊ ಒಬ್ಬರು ಮುಂದೆ ಬಂದು ಇಲ್ಲ, ಅವನಾಗಕೂಡದು ಎಂದರು. ಏಕೆಂದರೆ ಬುದ್ಧನ ಪರಿನಿರ್ವ್ಯಾಣದ ಸಮಯದಲ್ಲಿ ಆನಂದ ಕಂಬನಿಗರೆದನು ಎಂದರು. ಅನಂತರ ಮತ್ತೊಬ್ಬರಿಗೆ ಈ ಅಧಿಕಾರ ಹೋಯಿತು.

"ಆದರೆ ಬುದ್ಧ ಒಂದು ತಪ್ಪನ್ನು ಮಾಡಿದನು. ಅದೇ ಪ್ರಪಂಚ ದಲ್ಲಿರುವವರನ್ನೆಲ್ಲಾ ಉಪನಿಷತ್ತಿನ ಬೋಧನೆಗೆ ಯೋಗ್ಯರನ್ನಾಗಿ ಮಾಡಲು ಸಾಧ್ಯ ಎಂಬುದು. ಕೊನೆಗೆ ಸ್ವಾರ್ಥತೆ ಇದನ್ನೆಲ್ಲಾ ಕೆಡಿಸಿತು. ಕೃಷ್ಣ ಇವನಿಗಿಂತ ಬುದ್ಧಿವಂತ. ಏಕೆಂದರೆ ಅವನಲ್ಲಿ ಮುಂದಾಲೋಚನೆ ಇತ್ತು. ಆದರೆ ಬುದ್ಧ ಯಾವ ಬಗೆಯ ರಾಜಿಗೂ ಒಪ್ಪುತ್ತಿರಲಿಲ್ಲ. ಪ್ರಪಂಚ, ರಾಜಿಯಿಂದ ಅವತಾರಗಳೇ ನಾಶವಾಗಿರುವುದನ್ನು ಇದಕ್ಕೆ ಮುಂಚೆ ನೋಡಿದೆ. ಅವರ ಮಹಾತ್ಮ್ಯೆಯನ್ನು ಅರಿಯದೆ ಅವರಿಗೆ ನರಕಯಾತನೆ ಕೊಟ್ಟು ಕೊಲ್ಲಿಸಿದೆ. ಇದರಿಂದ ಪ್ರಪಂಚಕ್ಕೆ ಅಪಾರ ನಷ್ಟವಾಗಿದೆ. ಆದರೆ ಬುದ್ಧ ಸ್ವಲ್ಪ ರಾಜಿ ಮಾಡಿಕೊಂಡಿದ್ದರೆ ಅವನು ಬದುಕಿರುವಾಗಲೇ ಎಲ್ಲ ರಿಂದಲೂ ಪೂಜಿಸಿಕೊಳ್ಳಬಹುದಾಗಿತ್ತು. ಆದರೆ ಬುದ್ಧನ ಉತ್ತರವೇ "ಬುದ್ಧತ್ವ ಒಂದು ಅನುಭವ, ಅದು ವ್ಯಕ್ತಿಯಲ್ಲ'' ಎಂಬುದು. ಪ್ರಪಂಚ ದಲ್ಲೆಲ್ಲಾ ಏಕಮಾತ್ರ ವಿವೇಕಿಯಾದ ವ್ಯಕ್ತಿಯೇ ಬುದ್ಧ. ಪ್ರಪಂಚದಲ್ಲಿ ಜನ್ಮವೆತ್ತ ಏಕಮಾತ್ರ ವಿವೇಕಿ ಇವನೊಬ್ಬನೇ."

ಸ್ವಾಮಿಜಿಯಲ್ಲಿ ಭಾರತೀಯ ಭಾವನೆ ಸ್ಪಷ್ಟವಾಗಿ ಇದ್ದುದರಿಂದ ಯಾತನೆಯನ್ನು ಆರಾಧಿಸುತ್ತಿದ್ದ ಕ್ರೈಸ್ತರಾದ ನಮ್ಮನ್ನು ನಿಕೃಷ್ಟವಾಗಿ ನೋಡುತ್ತಿದ್ದರು. ಪಾಶ್ಚಾತ್ಯ ದೇಶದಲ್ಲಿ ಸ್ವಾಮಿಜಿಗೆ ಯಾರೊ ಬುದ್ಧನನ್ನು ಕ್ರಿಸ್ತನಂತೆ ಶಿಲುಬೆಗೆ ಏರಿಸಿದ್ದರೆ ಅವನ ಮಹಾತ್ಮ್ಯೆ ಇನ್ನೂ ಅಧಿಕವಾಗು ತ್ತಿತ್ತು ಎಂದು ಹೇಳಿದ್ದರು. ಇದು ರೋಮನ್ನರ ಕ್ರೌರ್ಯ ದೃಷ್ಟಿ ಎಂದು ಖಂಡಿಸುವುದಕ್ಕೆ ಸ್ವಲ್ಪವೂ ಅನುಮಾನಿಸಲಿಲ್ಲ. "ತುಂಬಾ ಕೀಳಾಗಿರುವ ಮೃಗೀಯ ತೃಷ್ಣೆಯೇ ಕ್ರಿಯೆಗೆ ಕಾಲು ಕೆರೆಯುತ್ತಿರುವುದು. ಆದಕಾರಣವೆ ಪ್ರಪಂಚ ವೀರಕಾವ್ಯವನ್ನು ಪ್ರೀತಿಸುವುದು. ದೇವರ ದಯೆಯಿಂದ ಭರತ ಖಂಡ "Hurled Headlong down the Steep abyss'' ಎಂದು ಬರೆದ ಮಿಲ್ಟನ್ನಿನಂತಹ ಕವಿಯನ್ನು ಸೃಷ್ಟಿಸಿಲ್ಲ. ಇದಕ್ಕೆ ಬದಲು ಬ್ರೌನಿಂಗ್‌ನ ಕೆಲವು ಪಂಕ್ತಿಗಳಿದ್ದರೆ ಸಾಕು ಅವರಿಗೆ. ರೋಮನ್ನರನ್ನು ಆಕರ್ಶಿಸಿದ್ದು ವೀರಕಾವ್ಯದಲ್ಲಿದ್ದ ಒಂದು ಶಕ್ತಿ. ಕ್ರಿಸ್ಥನನ್ನು ಶಿಲುಬೆ

ಏರಿಸಿದ್ದೇ ಕಾರಣವಾಯಿತು ರೋಮನ್ ಚಕ್ರಾಧಿಪತ್ಯದಲ್ಲಿ ಅವನ ಧರ್ಮ ಹಬ್ಬುವುದಕ್ಕೆ. ಹೌದು, ಹೌದು, ಪಾಶ್ಚಾತ್ಯರಿಗೆ ಏನಾದರೂ ಸಾಹಸ ಬೇಕು. ಜೀವನದ ಸಣ್ಣಪುಟ್ಟ ಘಟನೆಗಳಲ್ಲಿರುವ ಸೌಂದರ್ಯವನ್ನು ನೀವು ಇನ್ನೂ ಅನುಭವಿಸಲಾರಿರಿ. ಸತ್ತಮಗುವನ್ನು ಬದ್ಧನ ಸಮೀಪಕ್ಕೆ ಹೊತ್ತು ತಂದ ತಾಯಿಯ ಕಥೆಗಿಂತ ಚಿತ್ತಾಕರ್ಶಕವಾಗಿರುವುದು ಅಥವಾ ಮೇಕೆ ಗಳಿಗೆ ಬದಲಾಗಿ ತನ್ನ ಪ್ರಾಣವನ್ನು ತೆರಲು ಹೋದ ಸಂಗತಿಗಿಂತ ಚಿತ್ತಾಕರ್ಷಕವಾಗಿರುವುದು ಯಾವುದಿದೆ? ಮಹಾತ್ಯಾಗ ಭರತಖಂಡಕ್ಕೆ ಹೊಸದೇನೂ ಅಲ್ಲ ಎಂಬುದು ನಿಮಗೆ ಗೊತ್ತಾಗುವುದು. ಗೌತಮ ಒಬ್ಬ ಸಣ್ಣರಾಜನ ಮಗನಾಗಿದ್ದನು. ಇಂತಹವರು ಎಷ್ಟೋ ಜನ ಇದ್ದರು ಹಿಂದೆ. ಆದರೆ ನಿರ್ವಾಣಾ ಪಡೆದಾದ ಮೇಲೆ ಬುದ್ಧನ ಜೀವನ ಎಷ್ಟು ಕಾವ್ಯಮಯವಾಗುವುದು:

"ಒಂದು ರಾತ್ರಿ ಮಳೆ ಬರುತ್ತಿದೆ. ಒಬ್ಬ ಗೊಲ್ಲನ ಮನೆಗೆ ಬಂದು ಹೊರಗೆ ಗೋಡೆಗೆ ಒರಗಿಕೊಂಡು ಬುದ್ಧ ನಿಲ್ಲುವನು. ಮಳೆ ಒಂದೇ ಸಮನೆ ಸುರಿಯುತ್ತಿದೆ, ಬಿರುಗಾಳಿ ಬೀಸುತ್ತಿದೆ. ಒಳಗೆ ಇದ್ದ ಗೊಲ್ಲನಿಗೆ ಹೊರಗೆ ನಿಂತ ಬಿಕ್ಷು ಕಾಣಿಸುವನು, "ಓ ಕಾಶಾಯ ವಸ್ತ್ರವೋ! ಅಲ್ಲೇ ಇರು. ಅದೇ ಸಾಕು ನಿನಗೆ" ಎಂದು ಮನಸ್ಸಿನಲ್ಲೆ ಗೊಲ್ಲ ಆಲೋಚಿಸುವನು. ಅನಂತರ ಅವನು ಹಾಡಲು ಪ್ರಾರಂಭಿಸುವನು: "ನನ್ನ ದನಗಳು ಮನೆಸೇರಿವೆ. ಬೆಂಕಿ ಚೆನ್ನಾಗಿ ಉರಿಯುತ್ತಿದೆ. ನನ್ನ ಹೆಂಡತಿ ಸುರಕ್ಷಿತವಾಗಿರುವಳು. ಮಕ್ಕಳು ಚೆನ್ನಾಗಿ ನಿದ್ರಿಸುತ್ತಿವೆ. ಓ ಮೋಡಗಳೆ, ಮಳೆಗರೆಯಿರಿ ಇಂದಿನ ರಾತ್ರಿ" ಎನ್ನುವನು. ಬುದ್ಧ ಹೊರಗಿನಿಂದ ಮಾರುತ್ತರ ವೀಯುವನು: "ನನ್ನ ಮನಸ್ಸು ನಿಗ್ರಹದಲ್ಲಿದೆ. ಇಂದ್ರಿಯಗಳೆಲ್ಲ ಅಂತರ್ಮುಖವಾಗಿವೆ. ನನ್ನ ಹೃದಯ ಸ್ಥಿರವಾಗಿದೆ. ಆದಕಾರಣ ಮೋಡಗಳೆ ಇಂದು ರಾತ್ರಿ ಬೇಕಾದಷ್ಟು ಮಳೆಗರೆಯಿರಿ." ಪುನಃ ಗೊಲ್ಲ ಒಳಗಿನಿಂದ ಹೇಳುವನು: "ಹೊಲವನ್ನು ಕೊಯ್ದು ಆಗಿದೆ, ಹುಲ್ಲೆಲ್ಲ ಮೆದೆಯಲ್ಲಿ ಭದ್ರವಾಗಿದೆ. ಹೊಳೆ ತುಂಬಿ ಹರಿಯುತ್ತಿದೆ. ರಸ್ತೆ ಗಟ್ಟಿಯಾಗಿದೆ, ಓ ಮೋಡಗಳೆ, ಬೇಕಾದರೆ ಇಂದು ಬೇಕಾದಷ್ಟು ಮಳೆ ಗರೆಯಿರಿ." ಹೀಗೆಯೆ ಉತ್ತರ ಪ್ರತ್ಯುತ್ತರಗಳು ನಡೆಯುತ್ತಿರುತ್ತವೆ. ಕೊನೆಗೆ ಗೊಲ್ಲ ಪಶ್ಚಾತ್ತಾಪಪಟ್ಟು ಆಶ್ಚರ್ಯದಿಂದ ಹೊರಗೆ ಬಂದು ಬುದ್ಧನ ಶಿಷ್ಯನಾಗುತ್ತಾನೆ.

"ಅಥವಾ ಆ ಕ್ಷೌರಕನ ಕಥೆಗಿಂತ ಮತ್ತಾವುದು ಸುಂದರ ವಾಗಿರುವುದು!

"ಆ ಧನ್ಯಾತ್ಮ ನನ್ನ ಮನೆಯ ಮುಂದೆ ಹೋದನು. ಕ್ಷೌರಕನಾದ ನನ್ನ ಮನೆಯ ಮುಂದೆ ಹೋದನು. ನಾನು ಅವನ ಹಿಂದೆ ಓಡಿದೆ. ಅವನು ಹಿಂತಿರುಗಿ ನೋಡಿ ನನಗಾಗಿ ಕಾದ. ಕ್ಷೌರಕನಾದ ನನಗಾಗಿ ಕಾದ. ನಿಮ್ಮೊಡನೆ ನಾನು ಮಾತನಾಡಲೆ ಸ್ವಾಮಿ ಎಂದೆ. ಮಾತನಾಡ ಬಹುದು ಎಂದ, ಕ್ಷೌರಕನಾದ ನನಗೆ ಆಗಲಿ ಎಂದ. ನನ್ನಂತಹವನು ನಿರ್ವಾಣಕ್ಕೆ ಯೋಗ್ಯನೆ ಎಂದೆ. ಹೌದು ಎಂದ ಆತ. ಕ್ಷೌರಕನಾದ ನಾನು ಕೂಡ ಯೋಗ್ಯ ಅದಕ್ಕೆ ಎಂದ. ನಾನು ನಿನ್ನನ್ನು ಅನುಸರಿಸಲೆ ಎಂದೆ. ಆಗಲಿ ಎಂದ ಆತ. ಕ್ಷೌರಿಕನಾದ ನನಗೂ ಅನುಸರಿಸು ಎಂದ. ನಾನು ನಿಮ್ಮ ಬಳಿ ಇರಲೆ ಮಹಾಪ್ರಭು ಎಂದೆ. ನೀನು ಬೇಕಾದರೆ ಇರ ಬಹುದು ಎಂದ ಆತ. ದೀನನಾದ ಕ್ಷೌರಕನಿಗೂ ಹೀಗೆ ಹೇಳಿದ."

ಒಂದು ದಿನ ಬೌದ್ಧಧರ್ಮದ ಚರಿತ್ರೆಯನ್ನು ಸಂಕ್ಷೇಪವಾಗಿ ಹೇಳು ತ್ತಿದ್ದರು. ಅದೇ ಐನೂರು ವರ್ಷಗಳು ಧರ್ಮ, ಐನೂರು ವರುಷಗಳು ವಿಗ್ರಹ, ಐನೂರು ವರುಷಗಳು ತಂತ್ರ—ತಕ್ಷಣ ಅವರು ಅಷ್ಟಕ್ಕೆ ನಿಲ್ಲಿಸಿ, "ಹಿಂದೂಧರ್ಮದಲ್ಲಿ ಎಂದಾದರೂ ತಮ್ಮದೇ ಗುಡಿಗೋಪುರ ಪುರೋಹಿ ತರುಗಳನ್ನೊಳಗೊಂಡ ಬೌದ್ಧಧರ್ಮ ಇತ್ತು ಎಂದು ನೀವು ಭಾವಿಸ ಬಾರದು. ಇಂತಹುದು ಎಂದಿಗೂ ಇರಲಿಲ್ಲ. ಇವುಗಳೆಲ್ಲ ಯಾವಾಗಲೂ ಹಿಂದೂಧರ್ಮದ ಒಳಗೇ ಇದ್ದವು. ಒಂದು ಕಾಲದಲ್ಲಿ ಬುದ್ಧನ ಪ್ರಭಾವ ಅತಿಶಯವಾಗಿದ್ದಾಗ ದೇಶ ಸನ್ಯಾಸ ಪ್ರಿಯವಾಯಿತು" ಎಂದರು. ಸ್ವಾಮಿಜಿ ಹೇಳಿದ ಮಾತಿನ ಸತ್ಯ ವಿದ್ವಾಂಸರಿಗೆ ಕಾಲಕ್ರಮೇಣ ಹೆಚ್ಚು ಅಧ್ಯಯನಮಾಡಿದಂತೆ ಹೊಳೆಯುವುದು ಎಂದು ನಾನು ಭಾವಿಸುತ್ತೇನೆ. ಬೌದ್ಧರು ಮಿಷನರಿದೇಶಗಳಲ್ಲಿ ಮಾತ್ರ ತಮ್ಮ ಮಠಗಳನ್ನು ಸ್ಥಾಪಿಸಿದರು. ಇಂತಹ ದೇಶಗಳಲ್ಲಿ ಕಾಶ್ಮೀರವೂ ಒಂದು. ಈ ದೇಶಗಳಲ್ಲಿ ಜನ ಹಿಂದೂ ಸನ್ಯಾಸಿಗಳನ್ನು ಸ್ವೀಕರಿಸಿ ಅಲ್ಲಿ ಚಿಲುಮೆಗಳ ಹತ್ತಿರ ಇದ್ದ ಸರ್ಪಾರಾಧನೆ ಗಳನ್ನು ತೊರೆದರು. ಆಕಸ್ಮಾತ್ತಾಗಿ ಇದನ್ನು ತೊರೆದಮೇಲೆ ಅತಿ ಕಠಿಣ ವಾದ ಚಳಿಗಾಲ ಪ್ರಾಪ್ತವಾಯಿತು. ಜನ ಅಂಜಿ ಸರ್ಪಗಳ ಆರಾಧನೆ ಯನ್ನು ತೊರೆದದ್ದಕ್ಕೆ ಇದೆಲ್ಲ ಆಗಿರಬಹುದೆಂದು ಅವುಗಳನ್ನು ಪುನಃ ತಂದು

ಹೊಸಧರ್ಮದಲ್ಲಿ ಕ್ಷುದ್ರದೇವತೆಗಳ ಪಟ್ಟವನ್ನು ಅವಕ್ಕೆ ಕಟ್ಟುವರು. ಇಂತಹ ದೃಷ್ಟಾಂತರಗಳು ಮಾನವ ಸ್ವಭಾವದಲ್ಲಿ ಹಲವು ಕಡೆ ಇವೆ.

ಹಿಂದೂಧರ್ಮಕ್ಕೂ ಬೌದ್ಧರಿಗೂ ಇರುವ ಒಂದು ವ್ಯತ್ಯಾಸವೇ ಹಿಂದೂಗಳು ಒಂದು ಜೀವಾತ್ಮನೇ ಜನ್ಮಜನ್ಮಗಳಲ್ಲಿ ಕರ್ಮವನ್ನು ಅನುಭವಿಸುತ್ತಾ ಹೋಗುವವನು ಎನ್ನುವರು. ಆದರೆ ಬೌದ್ಧರು ಯಾವುದನ್ನು ಒಂದೇ ಜೀವ ಎಂದು ನೀವು ಹೇಳುತ್ತೀರೊ ಅದು ಭ್ರಾಂತಿ ಮತ್ತು ಅಸ್ಥಿರ. ನಾವು ಸಂಪಾದಿಸಿದ ಕರ್ಮವನ್ನು ಮತ್ತೊಂದು ಜೀವ ಸ್ವೀಕರಿಸುವುದು. ಅದು ನಮ್ಮ ಅನುಭವವನ್ನು ತೆಗೆದುಕೊಂಡು ಹೊಸ ಕರ್ಮಕ್ಕೆ ಕಾರಣವಾಗುವುದು. ಈ ವಿರುದ್ಧಸಿದ್ಧಾಂತಗಳ ಮೇಲೆ ಸ್ವಾಮಿಜಿಯವರು ಅನೇಕ ವೇಳೆ ಮನನಮಾಡುತ್ತಿದ್ದರು. ಯಾರಿಗೆ ತಮ್ಮಂತೆ ಅತೀಂದ್ರಿಯ ಜ್ಞಾನ ತೆರೆದಿದೆಯೊ ಮತ್ತು ಸ್ವಲ್ಪ ಅದಕ್ಕಿಂತ ಕೆಳಗೆ ಅದರ ಛಾಯೆಯ ಅಡಿ ಇರುವರೊ ಅವರಿಗೆ ಬದ್ಧಜೀವ ಒಂದು ಸೆರೆಯಲ್ಲಿ ಒದ್ದಾಡುತ್ತಿರುವಂತೆ ಕಾಣುವುದು. ಸೆರೆಯಲ್ಲಿ ಸಿಕ್ಕಿರುವ ಜೀವ ದೇಹವೆಂಬ ಸಲಾಕಿಯ ಹತ್ತಿರ ಹತ್ತಿರ ಬಂದು ಪಾರಾಗಲು ಯತ್ನಿಸುತ್ತಿರುವುದು. ತಮಗೆ ಹೊರಗೆ ಅತೀತವಾಗಿರುವ ಸಚ್ಚಿದಾನಂದವನ್ನು ನೋಡುತ್ತಿರುವುದು. ಇದೇ ಅದರ ಆದರ್ಶ ಮತ್ತು ಗುರಿ. ಇಂತಹವರಿಗೆ ದೇಹವೆಂಬುದು ಗುರಿಯನ್ನು ಪಡೆಯಲು ಒಂದು ಸಾಧನವಾಗದೆ ಒಂದು ತೆರೆಯಾಗಿ ಆತಂಕವಾಗಿರುವುದು. ನಮ್ಮ ಅಹಂಕಾರವೆಂಬ ತ್ರಿಕೋಣದ ಗಾಜಿನ ಮೂಲಕ ಕಂಡ ಸುಖದುಃಖಗಳೇ ಆ ಮೂಲಜ್ಯೋತಿ. ಇವುಗಳಿಗೆ ಅತೀತವಾಗಿ ಹೋಗಿ ಶುದ್ಧವಾದ ದಿವ್ಯ ಜ್ಯೋತಿಯನ್ನು ನೋಡಬೇಕೆಂಬುದೇ ಅದರ ಆಕಾಂಕ್ಷೆ. ಈ ಭಾವನೆಗಳ ಪರಿಣಾಮದಿಂದಲೇ ಕೆಲವು ವೇಳೆ ಸ್ವಾಮಿಜಿ ವ್ಯಾಕುಲದಿಂದ ಪೂರ್ವಜನ್ಮವನ್ನು ತಿಳಿಯಬೇಕೆಂದು ಬಯಸುವ ಇಂದಿನವರನ್ನು ಕುರಿತು ಹೀಗೆ ಹೇಳುತ್ತಿದ್ದರು: "ಈ ಒಂದು ಜನ್ಮವೇ ಕೋಟ್ಯಂತರ ವರ್ಷಗಳ ಸೆರೆಯಂತೆ ಇದೆ. ಇದು ಸಾಲದೆ ಹಿಂದಿನ ಜನ್ಮಗಳನ್ನೆಲ್ಲಾ ಇವರು ಜ್ಞಾಪಿಸಿಕೊಳ್ಳಬೇಕೆಂದಿರುವರು. ಈಗ ನಾವು ಅನುಭವಿಸುತ್ತಿರುವ ಸಂಕಟವೇ ಸಾಕಾಗಿದೆ." ಆದರೂ ಒಂದು ದೊಡ್ಡ ಅನುಭವದ ಸರಪಳಿಯಲ್ಲಿ ಒಂದು ಕೊಂಡಿಗೂ ಮತ್ತೊಂದು ಕೊಂಡಿಗೂ ಇರುವ ಸಂಬಂಧವನ್ನು ಅರಿಯಬೇಕೆಂಬ ಕುತೂಹಲ ಅವರಲ್ಲಿ ಕಡಿಮೆಯಾಗಲಿಲ್ಲ. ಪೂರ್ವಜನ್ಮಸಿದ್ಧಾಂತವನ್ನು ಕೇವಲ ಒಂದು ನಂಬಿಕೆಯಂತೆ ಅವರು ನೋಡುತ್ತಿರಲಿಲ್ಲ. ಅವರ

ದೃಷ್ಟಿಯಿಂದ ಇದೊಂದು ವೈಜ್ಞಾನಿಕ ಊಹೆಮಾತ್ರವಾಗಿದ್ದರೂ ತೃಪ್ತಿದಾಯಕವಾಗಿತ್ತು. ಸ್ವಾಮಿಜಿ ಯಾವಾಗಲೂ ಪಾಶ್ಚಾತ್ಯಶಿಕ್ಷಣ ಸಿದ್ಧಾಂತವಾದ, ಜ್ಞಾನವೆಂಬುದು ಇಂದ್ರಿಯಜನ್ಯ ಎಂಬ ಸಿದ್ಧಾಂತಕ್ಕೆ ವಿರೋಧವಾಗಿದ್ದರು. ಜ್ಞಾನದ ಆದಿ ಎಂಬುದು ಜೀವಿಯ ಅನಂತ ಜನ್ಮಗಳ ಹಿಂದಿನ ಆದಿಯಲ್ಲಿ ಕಣ್ಮರೆಯಾಗುವುದು ಎಂದು ಹೇಳುತ್ತಿದ್ದರು. ಎಲ್ಲವನ್ನೂ ಹೇಳಿ ಆದಮೇಲೂ ಕೊನೆಗೆ ಬೌದ್ಧಧರ್ಮ ತಾತ್ತ್ವಿಕವಾಗಿ ಸರಿ ಎಂದು ಸಮರ್ಥಿಸುವುದಕ್ಕೆ ಆಗುವುದಿಲ್ಲವೆ ಎಂಬ ಪ್ರಶ್ನೆ ಉಳಿಯುತ್ತಿತ್ತು. ಸತತವಾಗಿ ಪ್ರತಿಯೊಂದು ಜನ್ಮದಲ್ಲಿಯೂ ಒಂದೇ ಅಹಂಕಾರವಿದೆ ಎನ್ನುವುದು ಭ್ರಾಂತಿಯಲ್ಲವೆ? ಕೊನೆಗೆ ಹಲವು ಭ್ರಾಂತಿ, ಏಕ ಒಂದೇ ಸತ್ಯ ಎಂಬ ಸಿದ್ಧಾಂತಕ್ಕೆ ಇದು ಒಯ್ಯುವುದಿಲ್ಲವೆ? ಒಂದು ದಿನ ಬಹಳ ಹೊತ್ತು ಮೌನವಾಗಿದ್ದು ಕೊನೆಗೆ ಹೇಳಿದರು: "ಹೌದು, ಬೌದ್ಧರು ಸರಿ ಇರಬೇಕು. ಪುನರ್ಜನ್ಮ ಕೇವಲ ಒಂದು ಭ್ರಾಂತಿ. ಆದರೆ ಈ ಅನುಭವವನ್ನು ಅದ್ವೈತದ ಮೂಲಕ ಮಾತ್ರ ಸಾಧಿಸಬಹುದು" ಎಂದರು.

ಶಂಕರಾಚಾರ್ಯ ಮತ್ತು ಬುದ್ಧರನ್ನು ಒಬ್ಬರ ವಿರೋಧವಾಗಿ ಮತ್ತೊಬ್ಬರನ್ನು ತರುವುದರಿಂದ ಅವರಿಗೆ ಸಂತೋಷವಾಗುತ್ತಿತ್ತು ಎಂದು ಕಾಣುವುದು. ಅದ್ವೈತವನ್ನು ಬೌದ್ಧರ ಸಹಾಯಕ್ಕೆ ತಂದಂತೆ ಇತ್ತು. ಇದಕ್ಕೆ ಕಾರಣ ಚಾರಿತ್ರಿಕ ದೃಷ್ಟಿಯಿಂದ ನೋಡಿದಾಗ ಒಂದು ಮತ್ತೊಂದನ್ನು ಪೂರ್ಣಮಾಡಿರುವುದು ಇರಬೇಕು. ಒಂದಿಲ್ಲದೆ ಮತ್ತೊಂದು ಪೂರ್ಣವಾಗಲಾರದು ಎಂಬುದನ್ನು ಅವರು ತೋರಿದರು. ಮಾನವಕೋಟಿಯ ಶ್ರೇಷ್ಠ ಆದರ್ಶವೇ "ಬುದ್ಧನ ಹೃದಯ ಶಂಕರಾಚಾರ್ಯರ ಮೆದುಳು" ಎಂಬುದನ್ನು ಅವರು ಯಾವಾಗಲೂ ವಿವರಿಸುತ್ತಿದ್ದರು. ಬೌದ್ಧರ ಕರ್ಮ ಸಿದ್ಧಾಂತಕ್ಕೆ ವಿರೋಧವಾಗಿ ಪಾಶ್ಚಾತ್ಯ ಮಹಿಳೆಯೊಬ್ಬಳು ಹೀಗೆ ಹೇಳಿದಳು: "ನನಗೆ ಯಾವುದಾದರು ಒಳ್ಳೆ ಕೆಲಸ ಮಾಡುವುದಕ್ಕೆ ಉತ್ಸಾಹವೇ ಇಲ್ಲ. ಏಕೆಂದರೆ ಅದರ ಫಲ ಮತ್ತಾರಿಗೊ ಬರುವುದು" ಎಂದಳು ಆಕೆ. ನಾವು ಮಾಡಿದ ಪಾಪಕರ್ಮಕ್ಕೆ ನಮ್ಮ ಮಕ್ಕಳೋ ಸ್ನೇಹಿತರೊ ಮತ್ತಾರೋ ಅದರ ಪ್ರತಿಫಲವನ್ನು ಅನುಭವಿಸಬೇಕಾಗುವುದು ಎಂಬುದನ್ನು ಆಕೆ ಗಮನಿಸಲೇ ಇಲ್ಲ.

ಸ್ವಾಮಿಜಿಗೆ ಹೀಗೆ ಆಲೋಚಿಸಲು ಸಾಧ್ಯವೇ ಇರಲಿಲ್ಲ. ಅವರಿಗೆ ಈಕೆ ಹೇಳಿದ ಮಾತು ಮನಸ್ಸಿಗೆ ನಾಟಿತು. ಒಂದೆರಡುದಿನಗಳು

ಆದಮೇಲೆ ತಮ್ಮೆದುರಿಗೆ ಇರುವವರಿಗೆ ಹೀಗೆ ಹೇಳಿದರು: "ಆಕೆ ಅಂದು ಹೇಳಿದ್ದು ಬಹಳ ಮುಖ್ಯವಾದ ಅಂಶ. ನಾವು ಯಾರಿಗೆ ಒಳ್ಳೆಯದನ್ನು ಮಾಡಬೇಕೆಂದಿರುವೆವೋ ಅವರಿಗೆ ಒಳ್ಳೆಯದಾಗದೆ ಯಾರೋ ಬೇರೆಯವರಿಗೆ ಪ್ರತಿಫಲ ಸಿಕ್ಕುವಂತಹ ಕರ್ಮವನ್ನು ನನಗೆ ಮಾಡಲು ಇಚ್ಛೆಯಿಲ್ಲ."

ಆದರೆ ಆಕೆ ನಿರ್ದಯವಾಗಿ "ನಾನು ಹಾಗಲ್ಲ ಅವತ್ತು ಅಂದದ್ದು. ನಾನಂದದ್ದು ನಾನು ಮಾಡಿದ ಒಳ್ಳೆಯ ಕೆಲಸದ ಪ್ರತಿಫಲವನ್ನು ನಾನಲ್ಲ ಮತ್ತಾರೋ ಉಣ್ಣುವರು ಎಂಬುದು" ಎಂದಳು.

"ನನಗೆ ಗೊತ್ತು, ನನಗೆ ಗೊತ್ತು" ಎಂದರು ಮೆಲ್ಲಗೆ ಸ್ವಾಮಿಜಿ. ಆದರೆ ನನ್ನ ಸ್ನೇಹಿತೆ ನಾನು ಹೇಳುವಂತೆ ಇಟ್ಟದ್ದರೆ ಅವಳಿಗೆ ಹೆಚ್ಚು ಅನುಕೂಲವಾಗುತ್ತಿತ್ತು. ಒಂದು ವೇಳೆ ಯಾರು ಯೋಗ್ಯರೋ ಅವರಿಗೆ ಒಂದು ಒಳ್ಳೆಯಕೆಲಸವನ್ನು ನಾವು ಮಾಡಿದೆವು ಎಂದು ಭಾವಿಸಿ. ಇದಕ್ಕೆ ಅದ್ವೈತ ಒಂದೇ ಉತ್ತರ ಎಂಬುದು ಗೊತ್ತಾಗುವುದಿಲ್ಲವೆ? ಏಕೆಂದರೆ ನಾವೆಲ್ಲಾ ಒಂದೇ."

ಹಿಂದಿನಕಾಲದ ಮತ್ತು ಈಗಿನ ಹಿಂದೂಗಳಿಗೆ ಇರುವ ವ್ಯತ್ಯಾಸವೆ ಇದು ಎಂಬುದು ಸ್ವಾಮಿಜಿಗೆ ತಿಳಿದಿತ್ತು. ಈಗಿನ ಕಾಲದ ಭರತಖಂಡದ ಆದರ್ಶದಲ್ಲಿ ಬುದ್ಧ ಮತ್ತು ಬೌದ್ಧರಿಗೆ ಒಂದು ಯೋಗ್ಯವಾದ ಸ್ಥಳ ಮೀಸಲಾಗಿಯೇ ಇರುವುದು. ಗುಪ್ತರ ಕಾಲದಿಂದಲೂ ಭಾರತದ ಶಿಕ್ಷಣ ರಂಗದಲ್ಲಿ ರಾಮಾಯಣ ಮಹಾಭಾರತ ಪ್ರಭಾವವಿದ್ದಂತೆ ಇಂದಿನಕಾಲದಲ್ಲಿ ಅಶೋಕ ಮತ್ತು ಅಶೋಕನ ಪೂರ್ವಕಾಲದ ಚರಿತ್ರೆ ತನ್ನ ಪ್ರಭಾವವನ್ನು ಬೀರುವುದೆಂದು ತಮಗೆ ಇದು ತಿಳಿದಿತ್ತೆ? ಹಿಂದೂದೇಶದಿಂದ ಬೌದ್ಧದೇಶಗಳಿಗೆ ಒಂದು ಹೊಸಪ್ರಾಣಬರುವುದೆಂದೂ ಮತ್ತು ಅಲ್ಲಿಂದ ಭರತಖಂಡಕ್ಕೆ ಹೊಸ ಉತ್ಸಾಹವನ್ನು ತರುವ ಭಾವನೆಗಳು ಬರುವುದೆಂದು ಅವರು ಗಮನಿಸಿದ್ದರೆ ಎನ್ನಿಸುವುದು. ಅದು ಹೇಗಾದರೂ ಇರಲಿ, ಎರಡು ಧರ್ಮಗಳನ್ನು ಒಂದುಗೂಡಿಸುವ ವಿಶೇಷಶಕ್ತಿ ಹಿಂದೂಧರ್ಮದಲ್ಲಿ ಮಾತ್ರ ಅವರಿಗೆ ಗೋಚರವಾಯಿತು. ತಾಯಿಯಂತೆ ಇರುವ ಹಿಂದೂಧರ್ಮಮಾತ್ರ ಸರ್ವವನ್ನೂ ಸ್ವೀಕರಿಸಲು ಸಿದ್ಧಳಾಗಿದ್ದಳೇ ಹೊರತು ಮಗಳಂತೆ ಇದ್ದ ಬೌದ್ಧಧರ್ಮವಲ್ಲ. ಮಹಿಮಾನ್ವಿತಳಾದ ಮೂಲಧರ್ಮದಲ್ಲಿ ಮಾತ್ರ ಎಲ್ಲಾ ಕಾಲಕ್ಕೂ ಅವತಾರಗಳಲ್ಲೆಲ್ಲಾ ಸಿಂಹಸದೃಶನಾಗಿರುವವನಿಗೆ ಒಂದು ಸ್ಥಳವನ್ನು ಮೀಸಲಾಗಿಟ್ಟಿರುವುದು. ಬುದ್ಧನ ಧರ್ಮಕ್ಕೆ ಇಲ್ಲಿ

ಸ್ಥಳವಿದೆ, ಅವನ ಬೋಧನೆಗೆ ಪುರಸ್ಕಾರ ಗೌರವಗಳಿವೆ; ಅವನ ಅನು ಯಾಯಿಗಳಮೇಲೆ ಮಾತೃಸಹಜಪ್ರೀತಿ ಇದೆ. ಅವನು ತಂದ ಹೊಸ ಶಿಷ್ಯರನ್ನು ಸ್ವಾಗತಿಸುವಳು, ಅವರನ್ನು ಕರುಣೆಯಿಂದ ನೋಡುವಳು ಹಿಂದೂಧರ್ಮ. ಆದರೆ ಸತ್ಯ ಅವನ ಧರ್ಮಕ್ಕೆ ಮಾತ್ರ ಮೀಸಲು ಎಂಬುದನ್ನು ಎಂದಿಗೂ ಹೇಳುವುದಿಲ್ಲ; ಮುಕ್ತಿ ಕೇವಲ ಸನ್ಯಾಸದಿಂದ ಮಾತ್ರ ಸಾಧ್ಯ ಎಂದು ಎಂದಿಗೂ ಹೇಳುವುದಿಲ್ಲ. ಬೌದ್ಧಧರ್ಮದ ವಿಷಯವಾಗಿ ಸ್ವಾಮಿ ವಿವೇಕಾನಂದರು ಆಡಿದ ಗಮನಾರ್ಹವಾದ ನುಡಿ ಗಳು ಇವು: "ಬೌದ್ಧರಿಗೂ ಹಿಂದುಗಳಿಗೂ ಇದ್ದ ಮುಖ್ಯ ವ್ಯತ್ಯಾಸವೇ ಇದು. ಬೌದ್ಧರು ಇದೆಲ್ಲಾ ಭ್ರಾಂತಿ ಎಂದು ನೋಡು ಎಂದರು. ಹಿಂದು ಗಳು ಈ ಭ್ರಾಂತಿಯೊಳಗೆ ಸತ್ಯವಿದೆ ಎಂದು ತಿಳಿ ಎಂದರು. ಇದನ್ನು ಹೇಗೆ ಸಾಧಿಸಬೇಕೆಂಬುದರ ವಿಚಾರದಲ್ಲಿ ಹಿಂದುಗಳು ಯಾವುದೋ ಒಂದು ನಿರ್ದಿಷ್ಟಮಾರ್ಗವನ್ನು ಮಾತ್ರ ಹೇಳಲಿಲ್ಲ. ಬುದ್ಧನ ಬೋದನೆಯನ್ನು ಸನ್ಯಾಸದ ಮೂಲಕ ಅನುಷ್ಠಾನ ಮಾಡಬಹುದು. ಆದರೆ ಹಿಂದೂಗಳ ಬೋಧನೆಯನ್ನು ಜೀವನದ ಯಾವ ಸ್ಥಿತಿಯಲ್ಲಿದ್ದರೂ ಆಚರಣೆಗೆ ತರ ಬಹುದು. ಎಲ್ಲವೂ ಒಂದೇ ಸತ್ಯಕ್ಕೆ ಒಯ್ಯುತ್ತವೆ. ವ್ಯಾಧನೊಬ್ಬ ಗಹನ ತತ್ತ್ವವನ್ನು ಬೋಧಿಸುವನು. ಗೃಹಿಣಿಯೊಬ್ಬಳು ಸನ್ಯಾಸಿಗೆ ಪರಮ ಸತ್ಯವನ್ನು ಬೋಧಿಸುವಳು. ಬೌದ್ಧರ ಧರ್ಮವಾದರೊ ಸನ್ಯಾಸಿಗಳ ಧರ್ಮವಾಗುವುದು. ಆದರೆ ಹಿಂದೂಧರ್ಮ ಸನ್ಯಾಸವನ್ನು ಪವಿತ್ರದೃಷ್ಟಿ ಯಿಂದ ನೋಡಿದರೂ ಜನಸಾಧಾರಣರಿಗೆ ಕರ್ತವ್ಯಪರಾಯಣತೆಯ ಧರ್ಮವನ್ನು ಬೋಧಿಸುವುದು. ಕರ್ತವ್ಯ ಯಾವುದಾದರೂ ಆಗಲಿ ಕೊನೆಗೆ ಒಂದೇ ಗುರಿ ಎಡೆಗೆ ಒಯ್ಯುವುದು."

೧೯

## ಸ್ವಾಮಿಜಿ ಮತ್ತು ಕ್ರೈಸ್ತಧರ್ಮ

ನಮ್ಮ ಜೀವನದಲ್ಲಿ ಕೆಲವು ಗಾಢವಾದ ನಂಬಿಕೆಗಳು ಯಾವುದೋ ಮೂಲದಿಂದ ಬರುವುವು. ಆದರೆ ಆ ನಂಬಿಕೆಗಳು ಇತರರ ಮೇಲೆ ಅದೇ ಪ್ರಭಾವವನ್ನು ಬೀರಲಾರದೆಂದು ತೋರುವುದು. ಒಬ್ಬನ ಉದ್ದೇಶ ಅಥವಾ ವ್ಯಕ್ತಿತ್ವವನ್ನು ತಕ್ಷಣ ಹೀಗೇ ಎಂದು ನಿರ್ಧರಿಸುತ್ತೇವೆ. ಇದನ್ನು ಇತರರಿಗೆ ಸ್ಪಷ್ಟವಾಗಿ ವಿವರಿಸುವುದಕ್ಕೆ ಆಗುವುದಿಲ್ಲ. ಆದರೂ ಯಾರು ಇದನ್ನು ನಿರ್ಧರಿಸುವರೋ ಅವರ ಮೇಲೆ ಅಪಾರವಾದ ಪ್ರಭಾವವನ್ನು ಬೀರುವುದು. ಅದು ನಿಜವಾದರೂ ಆಗಿರಬಹುದು ಸುಳ್ಳಾದರೂ ಆಗಿರ ಬಹುದು; ತುಂಬಾ ಸೂಕ್ಷ್ಮವಾಗಿ ಅವನನ್ನು ಗಮನಿಸಿದುದರ ಫಲವಾಗಿರ ಬಹುದು ಅಥವಾ ತಾತ್ಕಾಲಿಕ ಉದ್ವೇಗದಿಂದ ಪ್ರೇರಿತನಾಗಿರಬಹುದು. ಇದು ಹೇಗಾದರೂ ಇರಲಿ, ಯಾರ ಮೇಲೆ ಇದು ತನ್ನ ಪ್ರಭಾವವನ್ನು ಬೀರು ವುದೋ ಆತನು ಮಾಡುವ ಆಲೋಚನೆಯಲ್ಲೆಲ್ಲ ಇದು ಕಂಡುಬರುವುದು. ಇದು ಇತರರಿಗೆ ಪ್ರಸ್ತುತ ವಸ್ತುವಿನೊಂದಿಗೆ ಹೋಲಿಸಿ ನೋಡಿದಾಗ ತುಂಬಾ ಜ್ಞಾನವೆಂದಾದರೂ ಹೊಳೆಯಬಹುದು, ಕೆಲಸಕ್ಕೆ ಬಾರದ್ದು ಎಂದಾದರೂ ಕಾಣಬಹುದು. ಹೀಗೆಯೆ ನಾವು ಪುನರ್ಜನ್ಮಸಿದ್ಧಾಂತವನ್ನು ಒಪ್ಪಿಕೊಂಡರೆ, ಕೆಲವರಿಗೆ ಅಪೂರ್ವವಾಗಿ ತಮ್ಮ ಹಿಂದಿನ ಜನ್ಮಗಳ ಸ್ಮೃತಿ ಸ್ವಲ್ಪ ಗೊತ್ತಾ ಗುವುದೆಂದೂ ಇತರರಿಗೆ ಗೊತ್ತಾಗುವುದಿಲ್ಲವೆಂದೂ ಒಪ್ಪಿಕೊಳ್ಳಬೇಕಾಗಿದೆ. ಇದರ ಮೂಲಕವಾಗಿ ಅವರ ನಂಬಿಕೆಗೆ ಮೂಲಕಾರಣ ಗೊತ್ತಾಗಬಹುದು. ಇದಕ್ಕೂ ಬರೀ ಕಲ್ಪನೆಗೂ ಇರುವ ವ್ಯತ್ಯಾಸವನ್ನು ಅರಿಯುವುದು, ಇದನ್ನು ವಿಮರ್ಶಿಸಬಲ್ಲ ಕೆಲವು ವ್ಯಕ್ತಿಗಳಿಗೆ ಮಾತ್ರ ಸಾಧ್ಯ.

ಸ್ವಾಮಿಜಿ ಭಾವನೆಯನ್ನು ಅರಿಯಬೇಕಾದರೆ ಮೇಲಿನಂತೆ ನಾವು ಏನಾದರೂ ಆಲೋಚನೆಮಾಡಬೇಕು. ಈ ದೃಷ್ಟಿಯಿಂದ ನೋಡಿದಾಗ ಸ್ವಾಮಿಜಿ ಜೀವನದಲ್ಲಿ ಮೂರು ಮುಖ್ಯ ಅನುಭವಗಳು ಬರುವುವು. ಇವೇ ನನ್ನ ಗುರುದೇವನ ಮನಸ್ಸಿನ ಮೇಲೆ ಬಹಳ ಪರಿಣಾಮಕಾರಿಯಾದುವು. ಇದರಲ್ಲಿ ಮುಖ್ಯವಾದ ಮೊದಲನೆಯದೆ ಸಿಂಧೂನದಿಯ ತೀರದಲ್ಲಿ ವೇದದ ಋಕ್ ಮಂತ್ರಗಳನ್ನು ಹೇಳುತ್ತಿದ್ದ ಒಬ್ಬರನ್ನು ಕಂಡ ದೃಶ್ಯ. ಇದ ರಿಂದಲೇ ಸ್ವಾಮಿಜಿ ತಮ್ಮ ಸಂಸ್ಕೃತಭಾಷೋಚ್ಚಾರಣೆಯನ್ನು ಸರಿಪಡಿಸಿ

ಕೊಂಡಿದ್ದರು. ಇದು ಸಾಧಾರಣ ವೇದಪಾರಾಯಣದಂತೆ ಇಲ್ಲ. ಗ್ರಿಗೋರಿಯನ್ ಚರ್ಚಿನಲ್ಲಿ ಸರಳವಾಗಿ ಹಾಡುವಂತೆ ಇದೆ. ಇಲ್ಲಿ ಹಿಂದಿನ ಆರ್ಯರು ಹೇಗೆ ಉಚ್ಚಾರಮಾಡುತ್ತಿದ್ದರು ಎಂಬುದನ್ನು ಅವರು ಅರಿತರಂತೆ. ಶಂಕರಾಚಾರ್ಯರ ಕೃತಿಗಳಲ್ಲಿಯೂ ಇದರಂತೆಯೇ ಇರುವುದನ್ನು ಅವರು ನೋಡಿದರು. ಇಲ್ಲಿಯೂ ಕೂಡ ಸ್ವಾಮಿಜಿ ಶಂಕರಾಚಾರ್ಯರೂ ಕೂಡ ನನ್ನಂತೆಯೆ ಯಾರೊ ವೇದ ಹೇಳುವುದನ್ನು ಕೇಳಿದ್ದರು ಎಂದು ಕಾಣುತ್ತದೆ ಎಂದು ಹೇಳುತ್ತಿದ್ದರು.

ಮತ್ತೊಂದು ಅನುಭವ ಅವರಿನ್ನೂ ಹುಡುಗರಾಗಿದ್ದಾಗ ಆದದ್ದು. ಅದು ದಕ್ಷಿಣೇಶ್ವರದಲ್ಲಿ ಶಿಷ್ಯರಾಗಿದ್ದ ಕಾಲ. ಒಂದು ದಿನ ಇವರು ತಮ್ಮ ಸಣ್ಣ ಕೋಣೆಯಲ್ಲಿ ಧ್ಯಾನಮಾಡುತ್ತಾ ಕುಳಿತಿದ್ದರು. ಆಗ ಅವರ ಕೋಣೆಯಲ್ಲಿ ದೀರ್ಘದೇಹಿಯಾದ ಬಲಾಢ್ಯನೊಬ್ಬ ಕಾಣಿಸಿಕೊಂಡನು. ಮುಖದಲ್ಲಿ ಪ್ರಶಾಂತಿ ಮುದ್ರೆ ಮಂಡಿಸಿತ್ತು. ಅನಂತತೆಯಲ್ಲಿ ತನ್ಮಯನಾಗಿ ಸುಖದುಃಖಗಳೆರಡನ್ನೂ ಮರೆತಂತೆ ಇದ್ದನು. ಶಿಷ್ಯ ಎದ್ದು ಬಂದವನಿಗೆ ನಮಸ್ಕರಿಸಿದನು. ನಂತರ ಅವನನ್ನು ಎವೆಯಿಕ್ಕದೆ ನೋಡುತ್ತ ಆಶ್ಚರ್ಯಚಕಿತನಾಗಿ ನಿಂತನು. ಎದುರಿಗಿದ್ದ ವ್ಯಕ್ತಿ ಮಾತನಾಡಲು ಯತ್ನಿಸಿದಂತೆ ತೋರಿತು. ಆಗ ಹುಡುಗನಿಗೆ ಅಂಜಿಕೆಯಾಯಿತು. ಕೋಣೆಯಿಂದ ಹೊರಗೆ ಹೋಗಿ ಕದವನ್ನು ಹೊರಗಿನಿಂದ ಮುಚ್ಚಿದನು. ಇದೇ ದೃಶ್ಯವನ್ನೇ ಸ್ವಾಮಿಜಿ ವಿವರಿಸಿದ್ದು ತಾನು ಯುವಕನಾಗಿದ್ದಾಗ ಬುದ್ಧ ತನ್ನ ಮನೆಗೆ ಬಂದಿದ್ದ ಎಂದು ಹೇಳುವಾಗ. "ನಾನು ಅವನ ಪಾದಗಳಿಗೆ ಅಡ್ಡಬಿದ್ದೆ. ಏಕೆಂದರೆ ಆತನೆ ಬುದ್ಧ ಎಂದು ನನಗೆ ಗೊತ್ತಾಯಿತು." ಇವರಿಗೆ ಬುದ್ಧನ ಮೇಲೆ ಅತಿಶಯವಾದ ಶ್ರದ್ಧೆ. ಇಷ್ಟು ಎಂದು ವಿವರಿಸುವಂತೆ ಇರಲಿಲ್ಲ. ಬುದ್ಧನ ವಿಚಾರಶೀಲತೆ, ಅವನ ಅನುಪಮ ತ್ಯಾಗ, ಮತ್ತು ಅನುಕಂಪ ಇವುಗಳೆಲ್ಲ ಯುವಕರಾದಾಗ ಕಂಡ ದೃಶ್ಯದ ಪರಿಣಾಮವಿರಬೇಕು.

ನಿರ್ದಿಷ್ಟವಾದ ಇವರ ಕೊನೆಯದಾದ ಮೂರನೆ ನಂಬಿಕೆಗೆ (ಅವರಿಗೆ ಸಮೀಪದಲ್ಲಿದ್ದ ಜನರಿಗೆ ತಿಳಿದಂತೆ) ಕಾರಣ, ಸ್ವಾಮಿಜಿ ೧೮೯೭ರಲ್ಲಿ ಇಂಡಿಯಾದೇಶಕ್ಕೆ ಹಿಂತಿರುಗುತ್ತಿದ್ದಾಗ ನೋಡಿದ ದೃಶ್ಯ. ಕ್ಯಾಥೊಲಿಕ್‌ಧರ್ಮದ ಯೂರೋಪಿನಲ್ಲಿ ಇವರು ಸಂಚರಿಸುತ್ತಿದ್ದಾಗ ಕಂಡ ಕ್ರೈಸ್ತರಿಗೂ ಹಿಂದುಗಳಿಗೂ ಆಚಾರದಲ್ಲಿದ್ದ ಸಾಮ್ಯ. ಯಾವುದನ್ನು ಅವರು ಸ್ಯಾಕ್ರಮೆಂಟ್ ಎನ್ನುವರೊ ಅದು ವೈದಿಕ ಪ್ರಸಾದವನ್ನು

ಹೋಲುವುದು. ಪಾದ್ರಿಗಳ ಮುಂಡನದಶಿರ ಭರತಖಂಡದ ಸನ್ಯಾಸಿಗಳ ಮುಂಡನವನ್ನು ಅವರಿಗೆ ಜ್ಞಾಪಕಕ್ಕೆ ತಂದಿತು. ಜಸ್ಟೀನಿಯನ್ ಧರ್ಮವನ್ನು ಇಬ್ಬರು ಮುಂಡನ ಮಾಡಿಸಿಕೊಂಡ ಪಾದ್ರಿಗಳಿಂದ ಸ್ವೀಕರಿಸುತ್ತಿದ್ದುದನ್ನು ನೋಡಿದಾಗ ಮುಂಡನಕ್ಕೆ ಮೂಲ ಯಾವುದು ಎಂಬುದನ್ನು ಅವರು ಅರಿತರು. ಬುದ್ಧನಿಗಿಂತ ಮುಂಚೆಯೂ ಇಂಡಿಯಾ ದೇಶದಲ್ಲಿ ಸನ್ಯಾಸಿ ಮತ್ತು ಸನ್ಯಾಸಿನಿಗಳು ಇದ್ದರು ಎಂಬುದನ್ನು ಸ್ವಾಮಿಜಿ ಮರೆತಿರಲಿಲ್ಲ. ಹಿಂದೂಗಳ ಪೂಜೆಯಲ್ಲಿ ಸಂಗೀತ ಮಂಗಳಾರತಿ ಧೂಪ ಎಲ್ಲವೂ ಇದ್ದುವು. ಅಲ್ಲಿ ಜನ ಶಿಲುಬೆಯಂತೆ ತಮ್ಮ ದೇಹವನ್ನು ಮುಟ್ಟಿ ಪೂಜಾ ಸಮಯದಲ್ಲಿ ಅಂಗನ್ಯಾಸಾದಿಗಳನ್ನು ಇಂಡಿಯಾದೇಶದಲ್ಲಿ ಮಾಡುವರು. ಒಂದು ಸಲ ಅವರೊಂದು ಚರ್ಚಿಗೆ ಹೋದಾಗ ಅವರ ನಂಬಿಕೆ ನಿಸ್ಸಂಶಯವಾಗಿ ದೃಢವಾಯಿತು. ಅಲ್ಲಿ ಸಾಕಷ್ಟು ಕುರ್ಚಿಗಳಾಗಲಿ, ಡೆಸ್ಕುಗಳಾಗಲಿ ಇರಲಿಲ್ಲ. ಅಲ್ಲಿ ಅವರು ಒಂದು ದೇವಸ್ಥಾನದಲ್ಲಿ ಇದ್ದಂತೆ ಭಾಸವಾಯಿತು. ಅಂದಿನಿಂದ ಕ್ರೈಸ್ಥಧರ್ಮ ಪರದೇಶಿ ಎಂದು ನಂಬಲಿಲ್ಲ.

ಮತ್ತೊಂದು ಆಲೋಚನೆ ಅವರ ಮೇಲೆ ಪ್ರಭಾವ ಬೀರಿ ಅನಂತರ ಅವರಿಗೆ ಆದ ಒಂದು ಕನಸಿಗೆ ಕಾರಣವಾಗಿತ್ತು. ಆ ಕನಸನ್ನು ನಾನು ಅನಂತರ ಹೇಳುತ್ತೇನೆ. ಸ್ವಾಮಿಜಿಗೆ ಅಮೆರಿಕಾದಲ್ಲಿ ಒಬ್ಬ ಜ್ಯೂ ಶಿಷ್ಯನಿದ್ದ. ಇವನ ಮೂಲಕ ಸಂಪ್ರದಾಯಬದ್ಧ ಜ್ಯೂ ಸಮಾಜ ಪರಿಚಯವಾಗಿ ಅವರ ಪವಿತ್ರ ಗ್ರಂಥವಾದ ಟಾಲ್‌ಮಡ್‌ನ್ನು ಸ್ವಲ್ಪ ಹೆಚ್ಚುಕಡಿಮೆ ಚೆನ್ನಾಗಿ ಓದಲು ಅವಕಾಶವಾಯಿತು. ಇದರಿಂದ ಸೇಂಟ್‌ಪಾಲ್‌ನ ಮನಸ್ಸಿಗೆ ಹಿನ್ನಲೆಯಾಗಿದ್ದ ಭಾವನೆಗಳು ಇವರಿಗೆ ಎಲ್ಲರಿಗಿಂತ ಹೆಚ್ಚಾಗಿ ವೇದ್ಯವಾಯಿತು.

ಕ್ರೈಸ್ಥಧರ್ಮದ ವಿಚಾರವಾಗಿ ಅವರು ಮತ್ತೊಂದು ವಿಷಯವನ್ನೂ ಅರಿತರು. ಅದೇ ಸ್ವಾಮಿಜಿ ಅಮೆರಿಕಾದಲ್ಲಿದ್ದಾಗ ಕ್ರೈಸ್ಥ ವಿಜ್ಞಾನದ ಪಂಗಡದೊಂದಿಗೆ ಆದ ಪರಿಚಯದಿಂದ ಕಲಿತದ್ದು. ಧರ್ಮದ ಆದಿಯನ್ನು ವಿಮರ್ಶಿಸಿದರೆ ಅದರಲ್ಲಿ ಮೂರು ವಿಷಯಗಳು ಇರುವಂತೆ ಕಾಣುವುದು ಎಂದರು. ಅದೇ ಸಿದ್ಧಾಂತ, ಆಚಾರ, ಮಾಯಾಮಂತ್ರ ಅಥವಾ ಪವಾಡ. ಕೊನೆಯದರಲ್ಲಿ ರೋಗ ಗುಣಮಾಡುವುದು ಇವೆಲ್ಲ ಇರುವುದು. ಇವರು ಕೊನೆಯದನ್ನು ಸೇರಿಸಿದ್ದಕ್ಕೆ ಕಾರಣ ಕ್ರೈಸ್ಥ ವಿಜ್ಞಾನಿಗಳ ಪರಿಚಯವೆ ಎಂದು ಕಾಣುವುದು. ಇದರ ಜೊತೆಗೆ ನಮಲ್ಲಿ ಈಗ ಧಾರ್ಮಿಕ ಪ್ರಪಂಚ

ದಲ್ಲಿ ಒಂದು ಸಮಗ್ರಭಾವ ಮೂಡುತ್ತಿದೆ ಎಂಬ ನಂಬಿಕೆಯೂ ಕಾರಣ ವಾಗಿತ್ತು. ಕೊನೆಗೆ ಇವರಿಗೆ ಆದ ಒಂದು ಕನಸು ಇವರ ಮನಸ್ಸಿನ ಮೇಲೆ ಎಂದೆಂದಿಗೂ ಅಚ್ಚಳಿಯದ ಒಂದು ಪ್ರಭಾವವನ್ನು ಬೀರಿತ್ತು.

ರಾತ್ರಿ ನೇಪಲ್ಸ್ ಪಟ್ಟಣದಲ್ಲಿ ಸ್ವಾಮಿಜಿ ಹತ್ತಿದ ಹಡಗು ಪೋರ್ಟ್ ಸೆಡ್ ಹತ್ತಿರ ಹೋಗುತ್ತಿತ್ತು. ಆಗ ಇವರಿಗೊಂದು ಕನಸಾಯಿತು. ಒಬ್ಬ ವೃದ್ಧನಾದ ಬಿಳಿಯ ಗಡ್ಡದ ಮನುಷ್ಯನೊಬ್ಬ ಇವರ ಬಳಿಗೆ ಬಂದು "ನಿನಗೆ ತೋರಿಸುವ ಈ ಸ್ಥಳವನ್ನು ಗಮನದಲ್ಲಿಡು. ನೀನೀಗ ಕ್ರೀಟ್ ದ್ವೀಪದಲ್ಲಿರುವೆ. ಇಲ್ಲಿ ಕ್ರೈಸ್ತಧರ್ಮ ಪ್ರಾರಂಭವಾಯಿತು" ಎಂದು ಹೇಳಿದನು. ಇದನ್ನು ಸ್ಪಷ್ಟಪಡಿಸುವುದಕ್ಕಾಗಿ ಅವನು ಎರಡು ಪದಗಳನ್ನು ಹೇಳಿದನು. ಅದರಲ್ಲಿ ಒಂದೇ ಥೆರಾಪಿಟೊ ಎಂಬುದು. ಇನ್ನೊಂದು ಪದ ಈಗ ನನಗೆ ಗೊತ್ತಿಲ್ಲ. ಇವೆರಡಕ್ಕೂ ಸಂಸ್ಕೃತವೇ ಮೂಲ ಎಂದು ಸ್ವಾಮಿಜಿ ವಿವರಿಸಿದರು. ಸ್ವಾಮಿಜಿ ಅನಂತರ ಈ ಕನಸಿನ ವಿಷಯವಾಗಿ ಅನೇಕ ಸಲ ಹೇಳುತ್ತಿದ್ದರು. ಆ ಸಮಯದಲ್ಲಿ ಎರಡು ಪದಗಳನ್ನು ಕೊಡುತ್ತಿದ್ದರು. ಮತ್ತೊಂದು ಯಾವುದೋ ಅದು ಈಗ ನನಗೆ ಮರೆತು ಹೋಗಿದೆ. ಅದು ಜ್ಞಾಪಕಕ್ಕೆ ಬರುವಂತೆ ಇಲ್ಲ. ಥೇರಪಿಟೊ ಎಂದರೆ ಥೇರರ ಮಕ್ಕಳು ಎಂದು. ಥೇರ ಎಂದರೆ ಬೌದ್ಧ ಭಿಕ್ಷುಗಳಲ್ಲಿ ಹಿರಿಯರು, ಪಿತೊ ಎಂದರೆ ಪುತ್ರರು. ಕನಸಿನಲ್ಲಿ ಬಂದಾತ "ಇದಕ್ಕೆ ತಕ್ಕ ಪ್ರಮಾಣಗಳೆಲ್ಲ ಇಲ್ಲವೆ ಅಗಿಯಿರಿ ಸಿಕ್ಕುವುದು" ಎಂದು ಹೇಳಿದನು.

ಸ್ವಾಮಿಜಿಗೆ ಎಚ್ಚರವಾಯಿತು. ಇದು ಸಾಧಾರಣ ಕನಸಾಗಿರಲಿಲ್ಲ. ಡೆಕ್ಕಿನ ಮೇಲೆ ಗಾಳಿಸಂಚಾರಕ್ಕೆ ಹೋದರು. ಆಗ ಹಡಗಿನ ಒಬ್ಬ ಅಧಿಕಾರಿ ಸಿಕ್ಕಿದನು. ಅವನನ್ನು ಸಮಯವೆಷ್ಟು ಈಗ ಎಂದು ಕೇಳಿದರು. ಮಧ್ಯರಾತ್ರಿಯ ಸಮಯ ಎಂದ ಆತ. ಈಗ ನಾವು ಎಲ್ಲಿರುವೆವು ಎಂದರು. ಕ್ರೀಟನಿಂದ ಸುಮಾರು ಐವತ್ತು ಮೈಲಿ ದೂರದಲ್ಲಿರುವೆವು ಎಂದ.

ಅನಿರೀಕ್ಷಿತವಾದ ಈ ಹೊಂದಾಣಿಕೆ ಸ್ವಾಮಿಜಿಗೆ ಆಶ್ಚರ್ಯವನ್ನುಂಟು ಮಾಡಿತು. ಇದರಿಂದ ಕನಸಿನ ಅಂಶವೂ ಸತ್ಯವಿರಬಹುದೆಂದು ಭಾವಿಸ ತೊಡಗಿದರು. ಇವರಿಗೆ ಆದ ಈ ಅನುಭವದಿಂದ ಮನಸ್ಸಿನಲ್ಲಿ ಭಾವನೆ ಸ್ಪಷ್ಟವಾಗತೊಡಗಿತು. ಈ ಕನಸು ಆಗದೆ ಇದ್ದಿದ್ದರೆ ಅದೊಂದು ಸಂಬಂಧ ವಿಲ್ಲದ ಅರ್ಥವಿಲ್ಲದ ಆಲೋಚನೆಗಳ ಕಂತೆಯಂತೆ ಇರುತ್ತಿತ್ತು. ಅನಂತರ ಸ್ವಾಮಿಜಿ ನಮ್ಮ ಹತ್ತಿರ ಒಪ್ಪಿಕೊಂಡರು, ಈ ಕನಸು ಆಗುವುದಕ್ಕೆ ಮುಂಚೆ

ತಾವೆಂದೂ ಕ್ರಿಸ್ತ ಚಾರಿತ್ರಿಕ ವ್ಯಕ್ತಿ ಎಂಬುದನ್ನು ಅನುಮಾನಿಸಿರಲಿಲ್ಲ. ಈ ಕನಸಾದ ಮೇಲೆ ಅವನು ಚಾರಿತ್ರಿಕ ವ್ಯಕ್ತಿ ಎಂಬುದನ್ನು ನಂಬಲು ಸಾಧ್ಯವೇ ಆಗಲಿಲ್ಲ. ಸೇಂಟ್ ಪಾಲ್ ಮಾತ್ರ ಚಾರಿತ್ರಿಕ ವ್ಯಕ್ತಿ ಎಂದು ನಿಸ್ಸಂದೇಹವಾಗಿ ನಂಬಬಹುದು ಎನ್ನುತ್ತಿದ್ದರು. ಕ್ರಿಸ್ತನ ಶಿಷ್ಯರ ಸಂದೇಶ ಗಾಸ್ಪೆಲ್ಲಿಗಿಂತ (ಬೈಬಲ್ಲಿಗಿಂತ) ಹಳೆಯದೆಂಬುದರ ಅರ್ಥ ಹೊಳೆಯಿತು. ಕ್ರಿಸ್ತನ ಬೋಧನೆಯೆಂಬುದು ರಬ್ಬಿಹಿಲ್ಲಾನ ಬೋಧನೆಯೇ ಇರಬೇಕು. ಹಳೆಯ ನಜರತ್ತಿನಲ್ಲಿದ್ದ ಪಂಗಡದಿಂದ ಗ್ರಾಮ ಮತ್ತು ವ್ಯಕ್ತಿಯ ಹೆಸರು ಗಳು ಬಂದಿರಬಹುದು. ಅಜ್ಞಾತಮೂಲದಿಂದ ಬಂದ ಆ ಸುಂದರ ಸಂದೇಶ ಈಗಲೂ ಅನುರಣಿತವಾಗುತ್ತಿದೆ.

ಈ ಕನಸು ಇವರ ಮನಸ್ಸಿನಮೇಲೆ ಅಚ್ಚಳಿಯದ ಪರಿಣಾಮವನ್ನು ಉಂಟುಮಾಡಿದರೂ ಅದನ್ನು ಇತರರಿಗೆ ಒಂದು ಪ್ರಮಾಣವೆಂದು ಕೊಡು ವುದು ಹುಚ್ಚುತನ ಎಂದು ಭಾವಿಸಿದರು. ಇಂತಹ ಅನುಭವವನ್ನು ಒಪ್ಪಿ ಕೊಂಡರೂ, ಇದು ಕೇವಲ ತಮಗೆ ಮಾತ್ರ ಸಂಬಂಧಿಸಿರುವುದು. ಇದರಿಂದ ಕ್ರಿಸ್ತ ಚಾರಿತ್ರಿಕ ವ್ಯಕ್ತಿಯಾಗಿದ್ದ ಎಂಬುದನ್ನು ನಂಬದೆ ಇರಬಹುದು, ಆದರೆ ಕ್ರೀಟ್ ಕ್ರೈಸ್ತಧರ್ಮದ ತವರೂರು ಎಂದು ಅವರು ಎಂದೂ ಹೇಳ ಲಿಲ್ಲ. ಇದನ್ನು ಸಮರ್ಥಿಸುವುದಾಗಲಿ ಅಥವಾ ಖಂಡಿಸುವುದಾಗಲಿ ಕೇವಲ ಲೌಕಿಕ ವಿದ್ವಾಂಸರಿಗೆ ಸೇರಿದ ಸಮಸ್ಯೆ. ಅಲೆಗ್ಸಾಂಡ್ರಿಯಾದಲ್ಲಿ ಇಂಡಿಯಾ ಮತ್ತು ಈಜಿಪ್ಟ್ ಸಂಸ್ಕೃತಿಗಳು ಸಂಗಮವಾಗಿದ್ದವು ಎಂಬ ಭೂಗೋಳದ ಪ್ರಶ್ನೆಯನ್ನು ಮಾತ್ರ ಅವರು ಎತ್ತಿದ್ದರು. ಕ್ರಿಸ್ತ ಚಾರಿತ್ರಿಕ ವ್ಯಕ್ತಿ ಎಂಬ ಅಂಶದಲ್ಲಿ ಸಂದೇಹವಿದ್ದರೂ ಆ ಮೇರಿಯ ಮಗನ ಮೇಲೆ ಇವರಿಗೆ ಇದ್ದ ಗೌರವ ಕಡಿಮೆಯಾಗಲಿಲ್ಲ. ಹಿಂದೂಗೆ ಬೇಕಾಗಿರು ವುದು ಆದರ್ಶದ ಪರಿಪೂರ್ಣತೆ. ಅದು ಕಾಲದೇಶವನ್ನೊಳಗೊಂಡ ಚರಿ ತ್ರೆಯ ಘಟನೆಯೆ ಅಲ್ಲವೆ ಎಂಬುದನ್ನು ಅವನು ಲೆಕ್ಕಿಸುವುದಿಲ್ಲ. ಯಾರೊ ಒಂದು ಸಲ ಸ್ವಾಮಿಜಿಗೆ ಮೇರಿ ಮತ್ತು ಬಾಲಕ್ರಿಸ್ತನ ಚಿತ್ರವನ್ನು ಅವರಿಗೆ ಆಶೀರ್ವದಿಸಿ ಕೊಡಿ ಎಂದು ಕೊಟ್ಟರು. ಆಗ ಅವರು ಆ ಮಗುವಿನ ಕಾಲನ್ನು ತಲೆಗೆ ಒತ್ತಿಕೊಂಡು ಕೊಟ್ಟರು. "ನಾನು ಪ್ಯಾಲಿಸ್ಟೈನಿನಲ್ಲಿ ಇದ್ದಿದ್ದರೆ ಜೀಸಸ್ಸಿನಕಾಲದಲ್ಲಿ ಅವನ ಪಾದಗಳನ್ನು ನಾನು ಕಣ್ಣೀರಿನಿಂದ ತೊಳೆಯು ತ್ತಿರಲಿಲ್ಲ, ನನ್ನ ಹೃದಯದ ರಕ್ತದಿಂದ ತೊಳೆಯುತ್ತಿದ್ದೆ" ಎಂದರು. ಹೀಗೆ ಅವರು ವ್ಯವಹರಿಸಿದ್ದಕ್ಕೆ ಹಿಂದೆ ಶ್ರೀ ರಾಮಕೃಷ್ಣರೇ ಅದಕ್ಕೆ ಒಪ್ಪಿಗೆ

ಕೊಟ್ಟಿದ್ದರು. ಇವರು ಹುಡುಗರಾಗಿದ್ದಾಗ ಇಂತಹ ಪ್ರಶ್ನೆಯೊಂದನ್ನು ಶ್ರೀರಾಮಕೃಷ್ಣರಿಗೆ ಹಾಕಿದಾಗ ಅವರು ಹೀಗೆ ಹೇಳಿದರು: "ಯಾರು ಇಂತಹ ಆದರ್ಶಗಳನ್ನು ಸೃಷ್ಟಿಸಬಲ್ಲವರಾಗಿದ್ದರೊ ಅಂತಹವರ ಜೀವನವೆ ಪೂಜೆಗೆ ಯೋಗ್ಯವಾದ ಆದರ್ಶವಾಗಬಲ್ಲದು ಎಂದು ನೀನು ಭಾವಿಸಲಾರೆಯಾ?"



## ೨೦

## ಸ್ತ್ರೀಯರು ಮತ್ತು ನಿಮ್ನವರ್ಗ

ದಕ್ಷಿಣೇಶ್ವರ ದೇವಾಲಯವನ್ನು ಕೈವರ್ತಕ ಕುಲಕ್ಕೆ ಸೇರಿದ ಶ್ರೀಮಂತಳಾದ ರಾಣಿ ರಾಸ್ಮಣಿ ೧೮೫೫ರಲ್ಲಿ ಕಟ್ಟಿಸಿದಳು. ಶ್ರೀರಾಮ ಕೃಷ್ಣರು ಅಲ್ಲಿ ಒಬ್ಬ ಪೂಜಾರಿಯಂತೆ ಆಗ ಸೇರಿದರು.

ಸ್ವಾಮಿ ವಿವೇಕಾನಂದರ ಜೀವನದ ಮೇಲೆ ಈ ವಿಷಯ ತಾವೇ ಭಾವಿಸಿದ್ದುದಕ್ಕಿಂತ ಹೆಚ್ಚಾಗಿ ಪ್ರಭಾವವನ್ನು ಬೀರಿತು. ನಿಮ್ನಕುಲದ ಸ್ತ್ರೀಯೊಬ್ಬಳು ತಮ್ಮ ಗುರುದೇವನ ಶಿಷ್ಯರೆಲ್ಲ ಮುಂದೆ ಒಟ್ಟುಕಲೆತು ಆದ ಸಂಸ್ಥೆಗೆ ಒಂದು ದೃಷ್ಟಿಯಿಂದ ಆಧಾರಸ್ಥಂಬದಂತೆ ಆದಳು. ಮಾನವಕ ದೃಷ್ಟಿಯಿಂದ ನೋಡಿದರೆ ದಕ್ಷಿಣೇಶ್ವರ ದೇವಾಲಯವಿಲ್ಲದೆ ಇದ್ದರೆ ಶ್ರೀರಾಮಕೃಷ್ಣರು ಇರುತ್ತಿರಲಿಲ್ಲ; ಶ್ರೀರಾಮಕೃಷ್ಣರು ಇಲ್ಲದೇ ಇದ್ದರೆ ವಿವೇಕಾನಂದರು ಇರುತ್ತಿರಲಿಲ್ಲ; ವಿವೇಕಾನಂದರಿಲ್ಲದೇ ಇದ್ದರೆ ಪಾಶ್ಚಾತ್ಯ ದೇಶಕ್ಕೆ ಸಂದೇಶವನ್ನು ಒಯ್ಯುವವರೇ ಇರುತ್ತಿರಲಿಲ್ಲ ಎಂದು ಹೇಳ ಬಹುದು. ಈ ಕಥೆಗೆಲ್ಲ ಕಾರಣ ಹತ್ತೊಂಬತ್ತನೇ ಶತಮಾನದ ಮಧ್ಯ ಭಾಗದಲ್ಲಿ ಕಲ್ಕತ್ತೆಗೆ ಸ್ವಲ್ಪ ಮೈಲಿಗಳಾಚೆ ಗಂಗಾನದೀತೀರದಲ್ಲಿ ಕಟ್ಟಿದ ದೇವಾಲಯ. ಇದನ್ನುಕೂಡ ಕೀಳುಮತದಿಂದ ಬಂದ ಒಬ್ಬ ಶ್ರೀಮಂತ ಭಕ್ತಳು ಕಟ್ಟಿಸಿದ್ದು. ಸ್ವಾಮಿಜಿ ಹೇಳಿದಂತೆ ಬ್ರಾಹ್ಮಣ ಪ್ರಾಬಲ್ಯವನ್ನು ಸ್ಥಿರವಾಗಿಡಲು ಸಂಕಲ್ಪಿಸಿದ್ದ ಹಿಂದೂರಾಜ್ಯವಿದ್ದಿದ್ದರೆ ಇದು ಎಂದಿಗೂ ಸಾಧ್ಯವಾಗುತ್ತಿರಲಿಲ್ಲ. ಆದಕಾರಣ ಭರತಖಂಡದ ಕೇಂದ್ರಸರ್ಕಾರ ಜಾತಿಯನ್ನು ಗಣನೆಗೆ ತಾರದೆ ಇರುವುದು ಎಷ್ಟು ಮುಖ್ಯ ಎಂಬುದನ್ನು ಅವರು ಅರಿಯತೊಡಗಿದರು.

ರಾಣಿ ರಾಸ್ಮಣಿ ತನ್ನ ಕಾಲದಲ್ಲಿ ವೀರನಾರಿಯಾಗಿದ್ದಳು. ಇಂಗ್ಲೀಷಿನವರು ಅನ್ಯಾಯವಾಗಿ ಸುಂಕವನ್ನು ಬಡ ಬೆಸ್ತರ ಮೇಲೆ ಹಾಕಿದಾಗ ಆಕೆ ತನ್ನ ಗಂಡನಿಗೆ ಇಂಗ್ಲೀಷ್ ಸರ್ಕಾರಕ್ಕೆ ಹಣ ಕೊಟ್ಟು ನದಿಯಲ್ಲಿ ಮೀನು ಹಿಡಿಯುವುದಕ್ಕೆ ಹಕ್ಕನ್ನು ಪಡೆಯುವಂತೆ ಹೇಳಿದಳು. ಅನಂತರ ಯಾವ ಇಂಗ್ಲೀಷರ ಹಡಗುಗಳೂ ನದಿಯಮೇಲೆ ಹೋಗದಂತೆ ತಡೆಗಟ್ಟಿದಳು. ಈಗಲೂ ಕೂಡ ಜನ ಈ ಕಥೆಯನ್ನು ಹೇಳುವರು. ಇದರಂತೆಯೇ ತನ್ನ ಮನೆದೇವರನ್ನು ಗಂಗಾನದಿಗೆ ಮೆರವಣಿಗೆ ತೆಗೆದುಕೊಂಡುಹೋಗುತ್ತಿ

ದ್ದಾಗ ರಸ್ತೆಯ ಅಕ್ಕಪಕ್ಕದ ಇಂಗ್ಲೀಷರು ಇದಕ್ಕೆ ಆಕ್ಷೇಪಣೆ ಎತ್ತಿದರು. ತನ್ನ ಮನೆಯಿಂದ ಗಂಗಾನದಿಗೆ ಇರುವ ದಾರಿಯೆಲ್ಲ ರಾಣಿಗೆ ಸೇರಿದುದ ರಿಂದ ಮಧ್ಯೆಮಧ್ಯೆ ಗೋಡೆಯನ್ನು ಕಟ್ಟಿ ರಸ್ತೆಗೆ ಅಡಚಣೆ ತಂದಳು. ಇದರಿಂದ ಕಲ್ಕತ್ತೆಯ ಅತಿ ಮುಖ್ಯವಾದ ರಾಜಮಾರ್ಗಕ್ಕೇ ತೊಂದರೆ ಯಾಯಿತು. ತನ್ನ ಹಕ್ಕನ್ನು ಉಳಿಸಿಕೊಳ್ಳಲು ಧೀರಳಾಗಿ ಇದಕ್ಕೆ ಹೋರಾಡಿದಳು. ತಾನು ವಿಧವೆಯಾದ ಹೊಸದರಲ್ಲಿ ತನ್ನ ಬ್ಯಾಂಕರು ಗಳಿಂದ ತನ್ನ ಹಣವನ್ನೆಲ್ಲಾ ಉದ್ಯಮಕ್ಕಾಗಿ ಶೇಖರಿಸುವುದಕ್ಕಾಗಿ ಬಹಳ ಬುದ್ಧಿವಂತಿಕೆಯಿಂದ ವರ್ತಿಸಬೇಕಾಯಿತು. ಇಲ್ಲಿ ಬಹಳ ಜಾಣತನ ದಿಂದಲೂ ಚಾಕಚಕ್ಯತೆಯಿಂದಲೂ ವ್ಯವಹರಿಸಬೇಕಾಯಿತು. ಅನಂತರ ತಾನೆ ಎಲ್ಲದಕ್ಕೂ ಸರ್ವಾಧಿಕಾರಿಣಿಯಾದಳು. ಅನಂತರ ಕೋರ್ಟಿನಲ್ಲಿ ನಡೆದ ಒಂದು ಕೇಸಿನಲ್ಲಿ ತನ್ನ ಲಾಯರ ಮೂಲಕ ಅವಳು ಕೊಡುತ್ತಿದ್ದ ಬುದ್ಧಿವಂತಿಕೆಯ ವಾದ ಎಲ್ಲರನ್ನೂ ಮುಗ್ಧಗೊಳಿಸಿ ಕಲ್ಕತ್ತೆಯಲ್ಲೆಲ್ಲ ಹಿಂದೂಗಳಲ್ಲಿ ಇದು ಮನೆ ಮಾತಾಯಿತು.

ರಾಣಿರಾಸ್ಮಣಿಯ ಮಗಳ ಗಂಡನಾದ ಮಥುರಬಾಬು ಶ್ರೀರಾಮ ಕೃಷ್ಣರ ದಕ್ಷಿಣೇಶ್ವರ ಜೀವನದ ಪ್ರಥಮ ಅಂಕದಲ್ಲಿ ಬಹಳ ಪ್ರಮುಖ ಪಾತ್ರ ವಹಿಸಿರುವನು. ಈತನೇ ಶ್ರೀರಾಮಕೃಷ್ಣರನ್ನು ಜನ ಹುಚ್ಚರೆಂದು ಕರೆಯುತ್ತಿದ್ದಾಗ ಅವರನ್ನು ರಕ್ಷಿಸಿದ್ದು. ಈತನೇ ಶ್ರೀರಾಮಕೃಷ್ಣರು ಏನೂ ಕೆಲಸಮಾಡದೇ ಇದ್ದರೂ ದಕ್ಷಿಣೇಶ್ವರದಲ್ಲಿರುವುದಕ್ಕೆ ಮತ್ತು ಅವರಿಗೆ ಎಲ್ಲಾ ಸೌಕರ್ಯಗಳೂ ಒದಗುವಂತೆ ಸಹಾಯ ಮಾಡಿದನು. ಈ ವಿಚಾರ ಗಳಲ್ಲಿ ಮಥುರನಾಥ ಇವರ ಅತ್ತೆಯ ಅನುಮತಿಯಂತೆಯೇ ನಡೆದು ಕೊಂಡನು. ರಾಣಿರಾಸ್ಮಣಿ ಪ್ರಥಮದಿಂದಲೇ ಶ್ರೀರಾಮಕೃಷ್ಣರ ತಪಃ ಪ್ರಭಾವವನ್ನು ಅರಿತಳು. ಅಂದಿನಿಂದ ಎಂದೆಂದಿಗೂ ಅವಳಲ್ಲಿ ಆ ಪೂಜ್ಯ ಭಾವವೇ ಪರಮಹಂಸರ ಮೇಲೆ ಇತ್ತು.

ಆದರೂ ಕೂಡ ಶ್ರೀರಾಮಕೃಷ್ಣರು ಮೊದಲು ಕಾಮಾರಪುಕುರದಿಂದ ಬಂದಾಗ ಕೈವರ್ತಕ ಹೆಂಗಸು ಗುಡಿಕಟ್ಟಿಸಿದ್ದು ಮತ್ತು ಅದಕ್ಕೆ ಎಲ್ಲಾ ಸೌಕರ್ಯಗಳನ್ನೂ ಒದಗಿಸಿಕೊಟ್ಟಿದ್ದನ್ನು ಒಪ್ಪಲಿಲ್ಲ. ದೇವಸ್ಥಾನದ ಪ್ರವೇಶೋತ್ಸವದ ದಿನ ಶ್ರೀರಾಮಕೃಷ್ಣರು ಅಲ್ಲಿ ಪೂಜೆಗೆ ಒಪ್ಪಿ ಬಂದಿದ್ದ ತಮ್ಮ ಅಣ್ಣನಿಗೆ ಹಲವು ಗಂಟೆಗಳ ಕಾಲ ಪೂಜೆಗೆ ಸಹಾಯ ಮಾಡಬೇಕಾ ಯಿತು. ಆದರೂ ಅಲ್ಲಿಯ ಯಾವ ಪ್ರಸಾದವನ್ನೂ ತೆಗೆದುಕೊಳ್ಳಲಿಲ್ಲ.

ಕೆಲಸವೆಲ್ಲ ಆದಮೇಲೆ ರಾತ್ರಿ ಬಹಳ ಹೊತ್ತಾದಾಗ ಇವರು ಹತ್ತಿರದ ಒಂದು ಅಂಗಡಿಯಿಂದ ಪುರಿ ಕೊಂಡು ತಿಂದರು.

ಈ ಘಟನೆ ನಿಜವಾಗಿಯೂ ಅನಂತರ ಶ್ರೀರಾಮಕೃಷ್ಣರು ಆ ದೇವ ಸ್ಥಾನದಲ್ಲಿ ಅಧಿಕಾರವನ್ನು ವಹಿಸಿದುದರ ಪ್ರಾಮುಖ್ಯತೆಯನ್ನು ಹೆಚ್ಚಿಸು ವುದು. ಇವರು ಮರೆತು ಕೈವರ್ತಕ ಕುಲದ ರಾಣಿಯ ಕೆಳಗೆ ಕೆಲಸ ಮಾಡಲು ಪ್ರಾರಂಭಿಸಲಿಲ್ಲ. ಇವರು ಕಾಮಾರಪುಕುರದಲ್ಲಿದ್ದಾಗ ಆಚರಣೆಗೆ ಬಂದ ಕೆಲವು ಸಾಂಪ್ರದಾಯಕ ನಡವಳಿಕೆಗಳು ತಾವೆ ಬಿದ್ದುಹೋದವು ಇವರು ಅದರ ಅನಾವಶ್ಯಕತೆಯನ್ನು ಕಂಡಾಗ. ಜೀವನದ ಮಹೋದ್ದೇಶದ ಎದುರಿಗೆ ಒಬ್ಬ ಸಮಾಜದ ಯಾವ ಅಂತಸ್ತಿನಲ್ಲಿ ಇರಲಿ ಎಲ್ಲರೂ ಧಾರ್ಮಿಕ ದೃಷ್ಟಿಯಿಂದ ಸಮ ಎನ್ನುವುದನ್ನು ಅವರ ಜೀವನವೇ ಉದಹರಿಸುವುದು.

ಯಾವುದು ಹೇಗಾದರೂ ಇರಲಿ ನನ್ನ ಗುರುದೇವ ಮಾತ್ರ ತಾವು ಯಾವ ಸಂಸ್ಥೆಗೆ ಸೇರಿದ್ದರೊ ಅದು ಎಂದೆಂದಿಗೂ ಸ್ತ್ರೀ ಮತ್ತು ನಿಮ್ನ ವರ್ಗದ ಹಿತಕ್ಕಾಗಿ ನಿಂತಿದೆ ಎಂದು ಸಾರಿದರು. ಈ ಸಂದೇಶವನ್ನೇ ಇವರು ಅಮೆರಿಕಾದಲ್ಲಿದ್ದಾಗ ಖೇತ್ರಿ ಮಹಾರಾಜರಿಗೆ ಒಂದು ಸಂದೇಶವನ್ನು ಕಳುಹಿಸುವ ಒಂದು ಫೋನೋಗ್ರಾಫ್ ರಿಕಾರ್ಡಿನಲ್ಲಿ ಹೇಳಿದರು. ಇವರು ಪಾಶ್ಚಾತ್ಯ ದೇಶದಲ್ಲಿದ್ದಾಗ ಇನ್ನೇನು ಸಾಯುವ ಸ್ಥಿತಿಗೆ ಬಂದರೇನೊ ಎಂದು ಕೆಲವು ವೇಳೆ ಭಾವಿಸಿದಾಗ ತಮ್ಮ ಶಿಷ್ಯರಿಗೆ ಈ ಒಂದು ಸಂದೇಶ ವನ್ನು ಮಾತ್ರ ಕೊಡುತ್ತಿದ್ದರು: "ಎಂದಿಗೂ ಮರೆಯಬೇಡಿ, ಸ್ತ್ರೀಯರ ಮತ್ತು ನಿಮ್ನವರ್ಗದವರ ಹಿತವನ್ನು."

ಪಂಗಡಗಳಾದಾಗಲೆ ಸಮಾಜದ ತೀವ್ರ ಶಕ್ತಿ ವ್ಯಕ್ತವಾಗುವುದು. ಸ್ವಾಮಿಜಿ ಇದನ್ನು ಪರಿಶೀಲಿಸಿ ಈ ಬಾಹ್ಯ ಸಂಸ್ಥೆ ಚೇತನವನ್ನು ಕೊಡ ಲಾರದು ಸ್ಫೂರ್ತಿಯನ್ನು ಕೊಡಲಾರದು ಎಂದು ಭಾವಿಸಿದ್ದರು. ಮೃತ್ಯು ಮುಖವಾಗಿರುವುದು ಮತ್ತು ಪಂಗಡವಾಗಿರುವುದು ಸ್ವಾಮಿಜಿ ದೃಷ್ಟಿಯಲ್ಲಿ ಒಂದೇ ಆಗಿತ್ತು. ಒಂದು ಪಂಗಡವಾಗಿ, ತಾಟಸ್ಥ್ಯವಾಗಿ ನಿಂತ ಸಮಾಜ ಸುಧಾರಣೆ, ಬೆಳೆಯದೆ ನಿಂತ ಮರದಂತೆ. ಅವರ ದೃಷ್ಟಿಯಲ್ಲಿ ಇದೊಂದು ಉದ್ವೇಗದ ಭ್ರಾಂತಿ. ಅವರ ದೃಷ್ಟಿಯಲ್ಲಿ ಈ ಉದ್ವೇಗ, ಸ್ವಾರ್ಥ ಇಂದ್ರಿಯ ಲಾಲಸೆ ಮತ್ತು ಯಾವುದೋ ಒಂದು ಪ್ರತಿಫಲಾಪೇಕ್ಷೆಯಿಂದ ಕೈಕೊಂಡ ಕಾರ್ಯ.

ಸ್ವಾಮಿಜಿ ಜಾತಿಯ ಪ್ರಶ್ನೆಯನ್ನು ಯಾವಾಗಲೂ ಪರಿಶೀಲಿಸು

ತ್ತಿದ್ದರು. ಅವರು ಎಂದಿಗೂ ಅದನ್ನು ದೂರಲಿಲ್ಲ; ಅದನ್ನು ಪರೀಕ್ಷಿಸು ತ್ತಿದ್ದರು. ಇದು ಮಾನವ ಸಹಜವಾದುದು. ಕೇವಲ ಹಿಂದೂಗಳಲ್ಲಿ ಮಾತ್ರ ಇರುವುದಲ್ಲ. ಒಬ್ಬ ಇಂಗ್ಲೀಷಿನವನನ್ನು ಆತ ಹಿಂತಿರುಗಿ ಹೋದಾಗ ಅವನನ್ನು ಭದ್ರಮನುಷ್ಯರ ಗುಂಪಿಗೆ ಸೇರಿಸದೇ ಇದ್ದುದಕ್ಕೆ ಕಾರಣ ಆತ ಮೈಸೂರಿನಲ್ಲಿ ಇದ್ದಾಗ ದನವನ್ನು ಕೊಂದದ್ದು. ಸ್ವಾಮಿಜಿ ಇದನ್ನು ಕೇಳಿ ಮನುಷ್ಯನನ್ನು ನಿಗ್ರಹದಲ್ಲಿಡುವ ಅತಿಸೂಕ್ಷ್ಮವಾದ ಪರಮಾಧಿಕಾರವೆ ತನ್ನ ಜಾತಿಯ ಅಭಿಮತ ಎಂದರು. ಆಗ ಕೆಲವು ಮಾತಿನಲ್ಲಿ ಸ್ವಾಮಿಜಿ ನ್ಯಾಯಕ್ಕೆ ಬಾಗಿ ನಡೆಯುವವರಿಗೂ ದರೋಡೆ ಕಾರರಿಗೂ ಇರುವ ವ್ಯತ್ಯಾಸವನ್ನು ವಿವರಿಸಿದರು. ಒಂದು ಕಡೆ ಶ್ರದ್ಧಾ ವಂತರಿಗೂ ಅಶ್ರದ್ಧಾವಂತರಿಗೂ ಇರುವ ವ್ಯತ್ಯಾಸವನ್ನು ಹೇಳಿದರು. ಮತ್ತೊಂದು ಕಡೆ ಸೂಕ್ಷ್ಮವಾದ ಸಮಾಜಕ್ಕೆ ಹಿತಕಾರಿಯಾದ ಆದರ್ಶ ನಮ್ಮನ್ನು ಅಲ್ಪಸಂಖ್ಯಾತರ ಹಿತರಕ್ಷಣೆಗಾಗಿ ದುಡಿಯುವಂತೆ ಪ್ರೋತ್ಸಾಹಿಸುವುದು.

ಆದರೆ ಇದು ಸ್ವಾಮಿಜಿಯ ಪಕ್ಷಪಾತವನ್ನು ಸೂಚಿಸುವುದಿಲ್ಲ. ಸನ್ಯಾಸಿ, ಜೀವನದ ಪ್ರೇಕ್ಷಕ, ಅದರಲ್ಲಿ ಭಾಗಿಯಲ್ಲ. ಇವರು ಯಾವ ಪಂಗಡದ ನಾಯಕತ್ವವನ್ನೂ ವಹಿಸಲಿಲ್ಲ. ಯಾವುದಾದರೂ ಪಕ್ಷದ ನಾಯಕರಾಗಬೇಕೆಂದು ಬಂದ ಸಲಹೆಯನ್ನೆಲ್ಲಾ ಅಲ್ಲಗಳೆದರು. ಸ್ತ್ರೀಯರು ಮತ್ತು ನಿಮ್ನವರ್ಗದವರಿಗೆ ವಿದ್ಯೆ ದೊರಕಲಿ ಸಾಕು ಎನ್ನುತ್ತಿದ್ದರು. ಅನಂತರ ಅವರ ಸಮಸ್ಯೆಯನ್ನು ಅವರೇ ಪರಿಹರಿಸಿಕೊಳ್ಳುವರು. ಇದೇ ಸ್ವಾಮಿಜಿಯ ಸ್ವತಂತ್ರದೃಷ್ಟಿ. ಇವರು ಇದಕ್ಕಾಗಿ ಜೀವಿಸಿದ್ದರು. ಆ ಶಿಕ್ಷಣ ಹೇಗೆ ಇರಬೇಕೆಂಬುದು ಇವರಿಗೆ ಗೊತ್ತಿತ್ತು. ಆದರೆ ಅದನ್ನು ಇನ್ನೂ ಸ್ಪಷ್ಟಪಡಿಸಿರಲಿಲ್ಲ. ವ್ಯಕ್ತಿಸ್ವಾತಂತ್ರ್ಯವನ್ನು ಇವರು ಎಷ್ಟೇ ಕೊಂಡಾಡಿದರೂ ಮತ್ತೊಬ್ಬನನ್ನು ಪ್ರೀತಿಸುವ ವಿಧವೆಯನ್ನು ಇವರು ಮೆಚ್ಚುತ್ತಿರಲಿಲ್ಲ. ಅದಕ್ಕಿಂತ ಮತ್ತೆ ಏನಾದರೂ ಉತ್ತಮ ಎನ್ನುತ್ತಿದ್ದರು. ಏಕಾಂಗಿಯಾದ ವಿಧವೆಯ ಬಿಳಿಯ ಸೆರಗಿಲ್ಲದ ಸೀರೆಯ ಅಂಚು ಪವಿತ್ರ ತೆಯ ಚಿಹ್ನೆಯಂತೆ ಇತ್ತು ಅವರಿಗೆ. ಯಾವ ವಿಧವಾದ ಶಿಕ್ಷಣವಾದರೂ ಆಗಲಿ, ಮೇಲಿನದಕ್ಕೆ ವಿರೋಧವಾಗಿದ್ದರೆ ಅವರು ಸ್ವಾಭಾವಿಕವಾಗಿ ಅದನ್ನು ಒಪ್ಪುತ್ತಿರಲಿಲ್ಲ. ಹುಡುಗಾಟಿಕೆಯ ಸ್ವಭಾವದ, ಭೋಗಾಭಿಲಾಷಿಗಳಾದ, ತಮ್ಮ ಜನಾಂಗದ ಆದರ್ಶವನ್ನು ಮರೆತ ಜನ, ನೋಡುವುದಕ್ಕೆ ಎಷ್ಟೇ

ಮೋಹಕವಾಗಿದ್ದರೂ ಅವರ ದೃಷ್ಟಿಯಲ್ಲಿ ಅಧೋಗತಿಗೆ ಇಳಿದಿದ್ದರು. ಯಾವ ಆಧುನಿಕ ವಿದ್ಯಾವಂತೆಯಲ್ಲಿ ಹಿಂದಿನಂತೆ ಪಾತಿವ್ರತ್ಯ ಧರ್ಮವಿತ್ತೊ ಮತ್ತು ತನ್ನ ಗಂಡಂದಿರ ಮನೆಯವರನ್ನು ವಿಶ್ವಾಸದಿಂದ ಕಾಣುತ್ತಿದ್ದಳೊ ಅವಳೇ ಸ್ವಾಮಿಜಿಯವರ ದೃಷ್ಟಿಯಲ್ಲಿ "ಆದರ್ಶ ಹಿಂದೂ ಸತಿ". ನಿಜವಾದ ಸತೀತ್ವ ನಿಜವಾದ ಸನ್ಯಾಸದಂತೆ ಬಾಹ್ಯಾಚಾರದಲ್ಲಿ ಇಲ್ಲ. ನಿಜವಾದ ಸತಿಯ ಆದರ್ಶವನ್ನು ಪುಷ್ಟಿಪಡಿಸದ ಶಿಕ್ಷಣದಿಂದ ಪ್ರಯೋಜನವಿಲ್ಲ.

ಭವಿಷ್ಯದ ನಾರಿಯ ಆದರ್ಶದ ಲಕ್ಷಣಗಳನ್ನು ಅವರು ಗಮನಿಸುತ್ತಿದ್ದರು. ವ್ಯಕ್ತಿಗೆ ಸ್ವಲ್ಪ ಹೆಚ್ಚು ಸ್ವಾತಂತ್ರ್ಯ ಸ್ವಾಭಾವಿಕವಾಗಿ ಬಂದೇ ಬರುವುದು. ವಯಸ್ಸಾದನಂತರ ಮದುವೆಯಾಗುವುದು ಮತ್ತು ಗಂಡನನ್ನು ಆರಿಸಿಕೊಳ್ಳುವುದರಲ್ಲಿ ಸ್ತ್ರೀಗೆ ಸ್ವಲ್ಪ ಸ್ವಾತಂತ್ರ್ಯ ಬಂದೇ ಬರುವುದು. ಇದರಿಂದ ಬಾಲವಿಧವೆಯ ಸಮಸ್ಯೆಯ ಬಹುಭಾಗ ನಿವಾರಣೆಯಾಗುವುದು. ಆದರೆ ಹಿಂದಿನ ಕಾಲದಲ್ಲಿ ಬಾಲ್ಯವಿವಾಹ ಜಾರಿಗೆ ಬಂದದ್ದು ವಯಸ್ಸಾದ ಮೇಲೆ ಮದುವೆಯಾಗುವಾಗ ಬರುವ ಲೋಪದೋಷಗಳನ್ನು ತಿದ್ದುವುದಕ್ಕೆ ಎಂಬುದನ್ನು ಮರೆಯದೆ ಇರಬೇಕು.

ಹಿಂದಿನಕಾಲದ ಧ್ಯಾನಸ್ವಭಾವದ ಸ್ತ್ರೀಯರಿಲ್ಲದುದನ್ನು ಸ್ವಾಮಿಜಿ ಎಂದಿಗೂ ಭವಿಷ್ಯದಲ್ಲಿ ಕಲ್ಪಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಆಧುನಿಕಶಾಸ್ತ್ರಗಳನ್ನು ಸ್ತ್ರೀ ಕಲಿಯಬೇಕು; ಆದರೆ ಹಿಂದಿನ ಆಧ್ಯಾತ್ಮಿಕ ಸ್ವಭಾವವನ್ನು ಅದಕ್ಕಾಗಿ ಬಲಿ ಕೊಡಬಾರದು. ಆದರ್ಶಶಿಕ್ಷಣವೆ ನಮ್ಮ ಸಮಾಜದಲ್ಲಿ ಆದಷ್ಟು ಕಡಿಮೆ ಬದಲಾವಣೆಯನ್ನು ಮಾಡಬೇಕು. ಕಾಲಕ್ರಮೇಣ ಭರತಖಂಡ ಪ್ರಖ್ಯಾತ ಸ್ತ್ರೀ ಶ್ರೇಣಿಯಲ್ಲಿದ್ದ ಶೀಲವನ್ನು ತಮ್ಮ ಜೀವನದಲ್ಲಿ ವ್ಯಕ್ತಗೊಳಿಸುವಂತೆ ಇರಬೇಕು.

ಹಿಂದಿನಕಾಲದ ಪ್ರತಿಯೊಂದು ಆದರ್ಶವೂ ತಮ್ಮ ತಮ್ಮ ಪ್ರಭಾವವನ್ನು ಬೀರಿಹೋಗಿವೆ. ರಜಪೂತರಕಾಲದ ಕಥೆಗಳಲ್ಲಿ ಬರುವ ಸ್ತ್ರೀಯರಲ್ಲಿ ಶಕ್ತಿ ಮತ್ತು ಧೈರ್ಯ ತುಂಬಿತುಳುಕಾಡುತ್ತಿವೆ. ಆದರೆ ಈ ಶಕ್ತಿಪ್ರವಾಹ ಹೊಸರೂಪಗಳನ್ನು ಧಾರಣೆಮಾಡಬೇಕಾಗಿದೆ. ರಾಣಿ ಅಹಿಲ್ಯಾಬಾಯಿ ಬಹುಶಃ ಶ್ರೇಷ್ಠರಮಣಿ ಇದ್ದಿರಬಹುದು. ಆಕೆ ಮಾಡಿದ ಸಾರ್ವಜನಿಕ ಕಾರ್ಯಗಳನ್ನು ನೋಡಿದ ಹಿಂದೂ ಸನ್ಯಾಸಿ ಹಾಗೆ ಭಾವಿಸಬಹುದು. ಆದರೂ ಭವಿಷ್ಯದ ಆದರ್ಶ ಕೇವಲ ಹಿಂದಿನದರ ಪುನರಾವೃತ್ತಿಯಾಗುವುದಿಲ್ಲ

ಅದನ್ನು ಒಳಗೊಂಡಿದ್ದರೂ. ಭವಿಷ್ಯದ ನಾರಿಯಲ್ಲಿ ತಾಯಿಯ ಮೃದು ಹೃದಯ ಇರಬೇಕು; ಆದರೆ ಅಲ್ಲಿ ಕೆಚ್ಚೆದೆಯ ಧೀರೆಯ ಇಚ್ಛಾಶಕ್ತಿಯೂ ಮಿಲನವಾಗಿರಬೇಕು. ಹಿಂದೆ ವೈದಿಕ ಹೋಮದಿಂದೆದ್ದ ಸ್ವತಂತ್ರ ಪ್ರಶಾಂತಮೂರ್ತಿ ಸಾವಿತ್ರಿಯ ಹಿನ್ನೆಲೆ ಇರಬೇಕು ಭವಿಷ್ಯನಾರಿಯರ ಆದರ್ಶದಲ್ಲಿ. ಆದರೆ ಇವರಲ್ಲಿ ಮಲಯಮಾರುತನಲ್ಲಿರುವಂತೆ ಮಾಧುರ್ಯ ಮತ್ತು ನಯ ವಿನಯವೂ ನೆಲಸಿರಬೇಕು.

ಸ್ತ್ರೀಯರ ಶಕ್ತಿ ವೃದ್ಧಿಯಾಗಬೇಕೆ ಹೊರತು ಅದು ಕ್ಷೀಣಿಸ ಕೂಡದು. ವಿಧವೆಯರ ಮನೆಗಾಗಲಿ, ಹುಡುಗಿಯರ ಸ್ಕೂಲಿನ ಅಥವಾ ಕಾಲೇಜಿನ ನಕ್ಷೆಯನ್ನಾಗಲಿ ಬರೆಸುವಾಗ ಕಟ್ಟಡದ ಸುತ್ತಲೂ ಹುಲ್ಲುಗಾವ ಲನ್ನು ಚಿತ್ರಿಸುತ್ತಿದ್ದರು. ಅಂಗಸಾಧನೆ ತೋಟ ದನಕರುಗಳನ್ನು ನೋಡಿ ಕೊಳ್ಳುವುದು ಇವು ಅವರ ನಿತ್ಯಜೀವನದ ಅಂಗವಾಗಿರಬೇಕು. ಈ ಹೊಸ ಆದರ್ಶದಲ್ಲಿ ಧರ್ಮ ಮತ್ತು ಪುಣ್ಯಾಶ್ರಮಗಳ ತಪಸ್ಸು ಕೇಂದ್ರವಾಗಬೇಕು; ಇದೇ ಎಲ್ಲಾ ಚಟುವಟಿಕೆಗೆ ಹಿನ್ನೆಲೆಯಾಗಿರಬೇಕು. ಅಂಗರಕ್ಷಕರಂತೆ ಇರುವ ಒಂದು ಸ್ತ್ರೀಪಡೆಯನ್ನು ಹೀಗೆ ಸೃಷ್ಟಿಸಬೇಕು. ಅವರು ಸ್ತ್ರೀಯರ ಸಮಸ್ಯೆಯನ್ನೆಲ್ಲಾ ಪರಿಹರಿಸಿರಬೇಕು. ಅವರಿಗೆ ಕೆಲಸಮಾಡುವುದಕ್ಕೆ ಮಾತ್ರ ಮನೆ, ಆಧ್ಯಾತ್ಮ ಒಂದು ವಿನಃ ಮತ್ತಾವ ಬಂಧನವೂ ಇಲ್ಲ. ಗುರು ಜನ ಮತ್ತು ಮಾತೃಭೂಮಿಯ ಮೇಲೆ ಇಟ್ಟ ಪ್ರೀತಿಯಲ್ಲದೆ ಮತ್ತಾವ ಪ್ರೀತಿಯೂ ಇರಕೂಡದು. ಇಂತಹ ಒಂದು ಬಗೆಯ ಆದರ್ಶವೇ ಅವರ ಕನಸಾಗಿತ್ತು. ಮುಖ್ಯವಾಗಿ ಬೇಕಾಗಿರುವುದು ಒಂದು ಸ್ತ್ರೀ ಶಿಕ್ಷಕರ ತಂಡ. ಇವರನ್ನು ಸೃಷ್ಟಿಸಲೋಸುಗವೇ ಮೇಲಿನ ಆದರ್ಶ. ಸ್ತ್ರೀಪುರುಷ ರಿಬ್ಬರಿಗೂ ಸ್ವಾಮಿಜಿ, 'ಶಕ್ತಿ ಶಕ್ತಿ ಶಕ್ತಿ' ಎಂದು ಒತ್ತಿ ಹೇಳುತ್ತಿದ್ದರು. ಆದರೆ ಶಕ್ತಿ ಎಂದರೆ ಏನು ಎಂಬುದನ್ನು ಮುಚ್ಚುಮರೆಯಿಲ್ಲದೆ ಅವರು ವಿಮರ್ಶಿಸಬಲ್ಲವರಾಗಿದ್ದರು. ಹೆಮ್ಮೆ ಕೊಚ್ಚಿಕೊಳ್ಳುವುದನ್ನಾಗಲಿ ಅಥವಾ ಕಂಬನಿಗರೆಯುವುದನ್ನಾಗಲಿ ಅವರು ಮೆಚ್ಚುತ್ತಿರಲಿಲ್ಲ. ಇವರ ಮನಸ್ಸೆಲ್ಲಾ ಪೂರ್ವದಿಂದಲೂ ಬಂದ ಅದ್ಭುತ ಆದರ್ಶಗಳ ಕಡೆಗಿತ್ತು. ಮೌನ ಮಾಧುರ್ಯ ಸ್ಥಿರತೆ ಬೇಕಾಗಿತ್ತೆ ಹೊರತು ಕೇವಲ ಬಾಹ್ಯಾಚಾರವಲ್ಲ. ಆದರೂ ಭರತಖಂಡ ಯಾವ ಜ್ಞಾನ ಮತ್ತು ಧರ್ಮಕ್ಕೆ ಪ್ರಖ್ಯಾತ ವಾಗಿದೆಯೊ ಅದಕ್ಕೆಲ್ಲಾ ಪುರುಷನಂತೆ ಸ್ತ್ರೀಯೂ ಹಕ್ಕುದಾರಿಣಿ. ಸತ್ಯಕ್ಕೆ ಲಿಂಗಭೇದವಿಲ್ಲ. ಮನಸ್ಸು ಅಥವಾ ಆತ್ಮನನ್ನು ಗಂಡಸು ಅಥವಾ ಹೆಂಗಸು

ಎಂಬ ಭೇದಭಾವದಿಂದ ಬಂಧಿಸುವ ಯಾವ ಜೀವನದ ನಿಯಮಾವಳಿಗಳನ್ನೂ ಸ್ವಾಮಿಜಿ ಒಪ್ಪುತ್ತಿರಲಿಲ್ಲ. ವ್ಯಕ್ತಿ ಎಷ್ಟು ಮಹತ್ತಾಗಿದೆಯೊ ಅಷ್ಟು ತನ್ನ ಮನಸ್ಸು ಲಿಂಗಾತೀತವಾಗಿರುವುದು. ಇವರು ಎಷ್ಟು ಅತೀತವಾಗಿ ಹೋದರೆ ಜನ ಅಷ್ಟು ಹೆಚ್ಚು ಅವರನ್ನು ಗೌರವಿಸುವರು.

ಭಿಕ್ಷುಣಿಯರಿಗೆ ಯೋಗ್ಯವಾದಂತಹ ಶಿಕ್ಷಣ ಕೊಡುವುದಕ್ಕೆ ವಿಧವೆಯರು ಪ್ರಥಮದಲ್ಲಿ ಯೋಗ್ಯ ಎಂದು ಭಾವಿಸಿದರು. ಆದರೆ ಎಲ್ಲಾ ಕಡೆಗಳಂತೆಯೆ ಇಲ್ಲಿಯೂ ಯಾವ ನಿರ್ದಿಷ್ಟ ಯೋಜನೆಯನ್ನೂ ತಯಾರಿಸಲಿಲ್ಲ. ತಮ್ಮ ರೀತಿಯಲ್ಲಿ ಜಾಗ್ರತರಾಗಿ ಮುಂದೆ ಹೋಗಿ; ಯೋಜನೆಗಳು ನಂತರ ತಾವೇ ಬೆಳೆದು ಕಾರ್ಯರೂಪಕ್ಕೆ ಬರುವುವು ಎನ್ನುತ್ತಿದ್ದರು. ಆದರೂ ಎಲ್ಲಿಂದಲಾದರೂ ಸಾಮಗ್ರಿ ಸಿಕ್ಕಿದ್ದರೆ ಅದನ್ನು ಸ್ವೀಕರಿಸುತ್ತಿದ್ದರು. ಶಕ್ತಿ ಪರಿಶುದ್ಧವಾದ ಚಾರಿತ್ರ ಮತ್ತು ಬುದ್ಧಿ ಇದ್ದರೆ ಆ ಸ್ತ್ರೀಯ ಮೂಲಕ ಶ್ರೇಷ್ಠ ಆದರ್ಶಗಳು ವ್ಯಕ್ತವಾಗಲು ಯಾವ ಅಭ್ಯಂತರವೂ ಇಲ್ಲ ಎಂದು ಸ್ವಾಮಿಜಿ ಭಾವಿಸಿದ್ದರು. ಋಜುತ್ವದಿಂದ ಎಂತಹ ಪಾಪದಿಂದ ಬೇಕಾದರೂ ಪಾರಾಗಬಹುದು. ಎಲ್ಲಾ ಪರಮ ಉದ್ದೇಶವನ್ನೂ ಸ್ವತಂತ್ರವಾಗಿ ಸಾಧಿಸಬೇಕು ಎಂದು ಸ್ತ್ರೀಯರ ಪರವಾಗಿರುವವನೊಬ್ಬ ಬರೆಯುವನು. ಸ್ವಾಮಿಜಿ ಸ್ವಾತಂತ್ರ್ಯವನ್ನು ಕೊಟ್ಟರೆ ಏನಾಗುವುದೊ ಎಂದು ಅಂಜುವವರಲ್ಲ. ಅವರಿಗೆ ಸ್ತ್ರೀಯರ ಮೇಲೆ ಅಪನಂಬಿಕೆ ಇರಲಿಲ್ಲ. ಆದರೆ ಅವರು ಕನಸು ಕಾಣುತ್ತಿದ್ದ ಸ್ವಾತಂತ್ರ್ಯ ಚಳುವಳಿ ಜಗಳ ಅಥವಾ ಧ್ವಂಸ ಮಾರ್ಗಾವಲಂಬನದಿಂದ ಬಂದುದಾಗಿರಲಿಲ್ಲ. ಅದು ಅಪರೋಕ್ಷವಾಗಿ ಮೌನವಾಗಿ ತಾನಾಗಿ ಬಂದದ್ದಾಗಿರಬೇಕು. ಸಮಾಜದ ಆದರ್ಶವನ್ನು ಗೌರವದಿಂದ ಸ್ವೀಕರಿಸಿದರೆ ಸ್ತ್ರೀಯರು ಮುಂದುವರಿದಂತೆ ತಮ್ಮ ಹಕ್ಕು ಮತ್ತು ಬಾಧ್ಯತೆಗಳನ್ನು ಅರಿಯುವರು. ಇದೇ ನಿಜವಾದ ಜನಾಂಗದ ಜೀವನ. ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ನಿರ್ವಹಿಸಿ ದೊರೆತ ಅವಕಾಶಗಳನ್ನು ಸರಿಯಾಗಿ ಉಪಯೋಗಿಕೊಂಡರೆ, ಹಿಂದೆ ಎಂದೂ ಕನಸು ಕೂಡ ಕಾಣದಷ್ಟು ಅದ್ಭುತವಾಗುವುದು ಅವರ ಭವಿಷ್ಯ. ಆದರೂ ಆ ಸ್ಥಿತಿಯಲ್ಲಿಯೂ ಅವರು ಹಿಂದಿಗಿಂತ ಹೆಚ್ಚು ಭಾರತೀಯರಾಗಿ ಉಳಿಯುವರು.

ಸ್ವಾಮಿಜಿಯವರ ಸ್ವಾತಂತ್ರ್ಯಪ್ರಿಯತೆ ಭಾರತೀಯ ಜೀವನದ ಸ್ವಾತಂತ್ರ್ಯವನ್ನು ಕಾಪಾಡಬೇಕು ಎಂಬ ಅಂಶದಲ್ಲಿ ವ್ಯಕ್ತವಾದಷ್ಟು ಮತ್ತೆಲ್ಲಿಯೂ ಇಲ್ಲ ಎಂದು ಹೇಳಬಹುದು. ಹಿಂದಿನ ಅಭ್ಯಾಸದ ಪವಿತ್ರ

ದೃಷ್ಟಿ ಯಾವಾಗಲೂ ಮುಂದೆ ಬರುವುದನ್ನು ಪವಿತ್ರಗೊಳಿಸುತ್ತಿತ್ತು. ಸರಸ್ವತಿ ದೇವಿಯ ಚಿತ್ರವನ್ನು ಬರೆಯುವುದು ಅವರ ದೃಷ್ಟಿಯಲ್ಲಿ ಅವಳನ್ನು ಆರಾಧಿಸಿದಂತೆಯೆ. ವೈದ್ಯಶಾಸ್ತ್ರವನ್ನು ಓದುವುದು ಅನಾರೋಗ್ಯ ಕಶ್ಮಲದ ಕಂಟಕದಿಂದ ಪಾರಾಗಲು ದೇವರನ್ನು ಪ್ರಾರ್ಥಿಸುವುದಕ್ಕೆ ಸರಿಸಮನಾಗಿತ್ತು. ಹಿಂದಿನ ಕಾಲದಿಂದ ಬಂದ ಗೋಭಕ್ತಿ ಆಧುನಿಕ ಡೈರಿ ಫಾರಂಗೆ ಸಹಾಯವಾಗಿತ್ತು. ಧ್ಯಾನದಲ್ಲಿ ಮನಸ್ಸನ್ನು ಏಕಾಗ್ರಗೊಳಿಸ ಬೇಕಾದರೆ ಬುದ್ಧಿ ತನ್ನ ಪರಾಕಾಷ್ಠತೆಯನ್ನು ಮುಟ್ಟುವಂತೆ ಮಾಡಬೇಕು. ಅಧ್ಯಯನವೆ ತಪಸ್ಸು. ಹಿಂದೂಗಳ ಧ್ಯಾನಪ್ರಿಯತೆ ವೈಜ್ಞಾನಿಕ ದೃಷ್ಟಿಗೆ ಸಹಕಾರಿ. ಎಲ್ಲಾ ಬಗೆಯ ಕರ್ಮವೂ ಒಂದು ಬಗೆಯ ತ್ಯಾಗ. ಮನೆ ಮತ್ತು ಸಂಸಾರದ ಮೇಲಿನ ಪ್ರೇಮ ಕೂಡ ಕ್ರಮೇಣ ವಿಶ್ವವ್ಯಾಪಿಯಾದ ಪವಿತ್ರ ಪ್ರೇಮದಂತೆ ಮಾರ್ಪಡಬಲ್ಲದು.

ಹಿಂದೂಗಳಿಗೆ ಅಕ್ಷರರೂಪದಲ್ಲಿ ಬರೆದಿರುವುದೆಲ್ಲ ಪವಿತ್ರ ಎಂಬುದನ್ನು ಹೇಳಲು ಸ್ವಾಮಿಜಿ ಹಿಗ್ಗುತ್ತಿದ್ದರು. ಸಂಸ್ಕೃತದಷ್ಟೇ ಪವಿತ್ರವಾಗಿತ್ತು ಇಂಗ್ಲೀಷ್ ಮತ್ತು ಪಾರ್ಸಿ ಭಾಷೆಗಳು. ಆದರೆ ಅನ್ಯರ ಆಚಾರವ್ಯವಹಾರ ವನ್ನು ಅನುಕರಿಸುವುದನ್ನು ಕಂಡರೆ ಇವರಿಗೆ ಆಗುತ್ತಿರಲಿಲ್ಲ. ಬರೀ ಹೊರ ಗಿನದನ್ನು ಮಾತ್ರ ಬದಲಾಯಿಸಬೇಕು ಎಂದು ಹೇಳುತ್ತಿದ್ದವರನ್ನು ಕಂಡರೆ ಇವರಿಗೆ ಸಹನೆ ಇರಲಿಲ್ಲ. ಹೋಲಿಸುವಾಗ ಅವರವರ ಆದರ್ಶದೃಷ್ಟಿಯಿಂದ ಅವರವರನ್ನು ಹೋಲಿಸುತ್ತಿದ್ದರು. ಅವು ಹಿಂದಿನಕಾಲದಲ್ಲಿ ಆಗಲಿ ಈಗಿನ ಕಾಲದಲ್ಲಿ ಆಗಲಿ ಎಷ್ಟುಮಟ್ಟಿಗೆ ಯಶಸ್ವಿಯಾದವು ಎಂಬುದನ್ನು ಅವರ ಆದರ್ಶದೃಷ್ಟಿಯಿಂದ ಮಾತ್ರ ಅಳೆಯುತ್ತಿದ್ದರು.

ಎಲ್ಲಕ್ಕಿಂತ ಹೆಚ್ಚಾಗಿ ಅವರ ಪ್ರೇಮದ ಮೇರೆ ಅಸೀಮವಾಗಿತ್ತು. ಅಲ್ಲಿ ತಮಗೂ ಇತರರಿಗೂ ಭೇದಭಾವವೇ ಇರಲಿಲ್ಲ. ಇತರರನ್ನು ಅನ್ಯರು ಎಂದು ಕರೆದಾಗಲೆ ಅವರ ಕಿವಿಗೆ ದ್ವೇಷ ಪ್ರಾರಂಭವಾ ದಂತೆ ಕಾಣಿಸುತ್ತಿತ್ತು. ಟೀಕೆಗೆ ಪಾತ್ರರಾದವರೊಡನೆ ಇವರು ಯಾವಾ ಗಲೂ ಸೇರುತ್ತಿದ್ದರು. ಪ್ರಪಂಚವನ್ನು ಉದ್ಧಾರವಾಗುವವರು ಆಗದವರು ಎಂದು ಎರಡು ಭಾಗಮಾಡಲು ಸಾಧ್ಯವಾಗುವ ಹಾಗೆ ಇದ್ದರೆ ಸ್ವಾಮಿಜಿ ಯಾವಾಗಲೂ ಉದ್ಧಾರವಾಗದವರ ಪಕ್ಷವನ್ನು ವಹಿಸುತ್ತಿದ್ದರು. ಇದ ರಿಂದ ಅವರಿಗೆ ಸಹಾಯಮಾಡುತ್ತೇನೆ ಅಥವಾ ಅವರ ಮನಸ್ಸನ್ನು ತಿರುಗಿ ಸುತ್ತೇನೆ ಎಂದಲ್ಲ. ಅವರು ಯಾವ ದುಃಖವನ್ನು ಅನುಭವಿಸಬೇಕಾಗಿ

ದೆಯೊ ಅದರೊಂದಿಗೆ ಭಾಗವಹಿಸುವುದಕ್ಕೆ. ಒಬ್ಬ ಎಷ್ಟು ಅನುಭವಿಸಲು ಸಾಧ್ಯವಾಗುವುದೊ ಅಷ್ಟನ್ನು ತಾವೇ ಅವರೊಡನೆ ಅನುಭವಿಸುವುದಕ್ಕಾಗಿ ಸಿದ್ಧರಾಗಿದ್ದರು. ಇದು ಸ್ವಾಮಿಜಿ ಒಡನೆ ಇದ್ದವರಿಗೆ ಗೊತ್ತಿತ್ತು.

ಸ್ವಾಮಿಜಿ ತಮ್ಮ ಪತ್ರದಲ್ಲಿ ವ್ಯಕ್ತಗೊಳಿಸಿದಂತೆ ದಯೆ ಕೂಡ ನಾವು ಇತರರಿಗೆ ಮಾಡುವ ಸೇವೆಗೆ ಮೂಲವಾಗಿರಕೂಡದು ಎಂಬುದನ್ನು ಎತ್ತಿ ತೋರಿಸಬಹುದು. ಅವರಲ್ಲಿ ಇಂತಹ ಆಶ್ರಯದಾತನೆಂಬ ಅಹಂಭಾವ ವಿರಲಿಲ್ಲ. ದಯೆ ಎಂದರೆ ಇತರರನ್ನು ಜೀವ ಎಂದು ತಿಳಿದು ಅವರಿಗೆ ಸಹಾಯಮಾಡುವುದು. ಆದರೆ ಪ್ರೀತಿ ಇತರರು ನನ್ನವರೆ ಎಂದು ತಿಳಿಯು ವುದು, ಒಂದೇ ಆತ್ಮ ಎಂದು ತಿಳಿಯುವುದು. ಪ್ರೀತಿಯೇ ಪೂಜೆ, ಪೂಜೆಯೇ ದೇವದರ್ಶನ. ಅದ್ವೈತಿಗೆ ಒಂದೇ ಉದ್ದೇಶವಿರುವುದು. ಅದೇ ಪ್ರೀತಿ. ಮಹಾಸೇವೆಯನ್ನು ಮಾಡುವುದಕ್ಕೆ ದೊರೆತ ಅವಕಾಶಕ್ಕಿಂತ ಮಿಗಿಲಾದ ಹಕ್ಕು ಮತ್ತೊಂದು ಇಲ್ಲ. ರಕ್ಷಕ ಸಂತೋಷಪಡುತ್ತ ಹೋಗಬೇಕೆ ಹೊರತು ರಕ್ಷಿಸಿಕೊಂಡವನಲ್ಲ ಎಂದು ಒಂದು ಕಡೆ ಸ್ವಾಮಿಜಿ ಪತ್ರದಲ್ಲಿ ಹೇಳುವರು. ದೊಡ್ಡದೊಂದು ಪೂಜೆಗೆ ಪೂಜಾರಿ ಭಯಭಕ್ತಿಯಿಂದ ಸಿದ್ಧ ನಾಗಿ ಬರುವ ಎಲ್ಲಾ ಕಷ್ಟವನ್ನೂ ಸಹಿಸುವುದಕ್ಕೆ ಅಣಿಯಾಗುವಂತೆ ಇರ ಬೇಕು ಸ್ತ್ರೀ ಶಿಕ್ಷಣವೆಂಬ ಪವಿತ್ರಕಾರ್ಯಕ್ಕೆ ತಮ್ಮ ಬಾಳನ್ನು ಅರ್ಪಿಸಿ ಮುಂದೆ ಬಂದವರು. ಕಲ್ಕತ್ತೆಯಲ್ಲಿ ಮಹಾಕಾಲೀಪಾಠಶಾಲೆಯನ್ನು ಸ್ಥಾಪಿಸಿದ ಮಾತಾಜಿ ಮಹಾರಾಣಿ ಎಂಬ ಮಹಾರಾಷ್ಟ್ರ ಹೆಂಗಸು ಇವರಿಗೆ ಹೇಳಿದ ಮಾತನ್ನೇ ಜ್ಞಾಪಿಸಿಕೊಂಡು ಅನೇಕವೇಳೆ ಇದನ್ನು ಇತರರಿಗೆ ಸ್ವಾಮಿಜಿ ಹೇಳುತ್ತಿದ್ದರು. ಆಕೆ ತಾನು ಪಾಠ ಹೇಳಿಕೊಡುತ್ತಿದ್ದ ಮಕ್ಕ ಳನ್ನು ತೋರಿ, "ಸ್ವಾಮಿಜಿ, ನನಗೆ ಯಾವ ಸಹಾಯವೂ ಇಲ್ಲ. ಆದರೆ ನಾನು ಈ ಮಕ್ಕಳನ್ನು ಪೂಜಿಸುತ್ತೇನೆ. ಇವರ ಮೂಲಕ ನನಗೆ ಮೋಕ್ಷ ದೊರಕುವುದು" ಎಂದು ಹೇಳಿದರು.

ಸ್ವಾಮಿಜಿ ಯಾರನ್ನು ನಿಮ್ನವರ್ಗ ಎಂದು ಕರೆದರೊ ಅವರ ವಿಷಯ ವಾಗಿ ಮಾತನಾಡುವಾಗಲೂ ಅದೇ ಸ್ಫೂರ್ತಿ ಇವರಲ್ಲಿ ಉಕ್ಕುತ್ತಿತ್ತು. ಮೇಲಿನ ವರ್ಗದವರಿಗೆ ವಿದ್ಯೆ ಎಷ್ಟುಮಟ್ಟಿಗೆ ಆವಶ್ಯಕವೋ ಅಷ್ಟೇ ಆವಶ್ಯಕ ನಿಮ್ನವರ್ಗದವರಿಗೂ. ಅದನ್ನು ಪಡೆಯಲು ಇವರಿಗೂ ಅಷ್ಟೇ ಹಕ್ಕಿದೆ. ಅವರು ವಿದ್ಯಾವಂತರಾದ ಮೇಲೆ ತಾವೆ ಸ್ವತಃ ಸಮಸ್ಯೆಯನ್ನೆಲ್ಲಾ ಬಗೆಹರಿಸಿಕೊಳ್ಳುವರು. ಸ್ವಾಮಿಜಿ ಬುದ್ಧನಿಂದ ಇಂದಿನ

ವರೆಗೂ ಬಂದ ಮಹಾ ಆಚಾರ್ಯರು ಅನುಸರಿಸಿದ ಸಂಪ್ರದಾಯವನ್ನೇ ಅನುಸರಿಸಿದರು. ಹಿಂದೆ ಉಪನಿಷತ್ತಿನ ತತ್ತ್ವ ಕೇವಲ ಆರ್ಯರ ಒಂದು ಕೋಮಿಗೆ ಮಾತ್ರ ಮೀಸಲಾಗಿದ್ದಾಗ ತಥಾಗತ ಉದಿಸಿ ನಿರ್ವಾಣದ ಅಷ್ಟಾಂಗಮಾರ್ಗವನ್ನು ಎಲ್ಲರಿಗೂ ಬೋಧಿಸುವನು. ಎಲ್ಲೋ ಕೆಲವರು ಮಾತ್ರ ಉಪದೇಶಕ್ಕೆ ಯೋಗ್ಯರು ಎಂದು ತಿಳಿದಕಾಲದಲ್ಲಿ ಶ್ರೀರಾಮಾನುಜಾಚಾರ್ಯರು ಕಂಚೀಪುರದ ಗುಡಿಯ ಗೋಪುರದ ಮೇಲಿನಿಂದ ಎಲ್ಲರಿಗೂ ಮಹಾಮಂತ್ರವನ್ನು ಮುಕ್ತಕಂಠದಿಂದ ಸಾರುವರು. ಈಗ ಆಧುನಿಕಕಾಲದ ಉದಯ ಭರತಖಂಡದಲ್ಲಿ. ಲೌಕಿಕ ಶಿಕ್ಷಣದ ಮೂಲಕ ಎಲ್ಲರನ್ನೂ ಪುರುಷಸಿಂಹರನ್ನಾಗಿ ಮಾಡಬೇಕೆಂದು ಸಂಕಲ್ಪಿಸಿಕೊಂಡಿದೆ. ಸ್ವಾಭಾವಿಕವಾಗಿ ಸ್ವಾಮಿಜಿಯ ಆದ್ಯಕರ್ತವ್ಯ ಯಾವ ರೀತಿ ನಿಮ್ನವರ್ಗದವರಿಗೆ ಶಿಕ್ಷಣವನ್ನು ಕೊಡಬೇಕು ಎಂಬುದು.

ಭರತಖಂಡದಲ್ಲಿ ಭೌತಿಕ ಕಲ್ಯಾಣವಾಗಬೇಕಾದರೆ ಇಡೀ ಜನಾಂಗದ ಶಕ್ತಿ ಮತ್ತು ಸಹಕಾರ ಒಂದುಗೂಡಬೇಕು ಎಂಬುದನ್ನು ಮನಗಂಡರು. ಭೌತಿಕ ಕಲ್ಯಾಣದ ಪುನರುತ್ಥಾನ ಅತ್ಯಾವಶ್ಯಕ ಎಂಬುದನ್ನು ಚೆನ್ನಾಗಿ ಅರಿತರು. ಸ್ವಾಮಿಜಿ ಕೆಲವುವೇಳೆ ಸ್ವಾಭಾವಿಕವಾಗಿ ಒತ್ತಿ ಹೇಳುವಂತೆ ಇಹಲೋಕದಲ್ಲಿ ಒಂದು ಚೂರು ರೊಟ್ಟಿಯನ್ನು ಕೊಡದ ದೇವರು ಪರಲೋಕದಲ್ಲಿ ಮೋಕ್ಷವನ್ನು ಕೊಡುತ್ತಾನೆ ಎಂದು ಹೇಗೆ ನಂಬುವುದು ಎಂದು ಹೇಳುತ್ತಿದ್ದರು. ವಿದ್ಯಾಭ್ಯಾಸವನ್ನು ಪ್ರಚಾರಮಾಡುವುದರಿಂದ ಮಾತ್ರ ದೇಶ ತನ್ನಲ್ಲಿರುವ ಸಾಂಸ್ಕೃತಿಕ ಮತ್ತು ಧಾರ್ಮಿಕ ನಿಧಿಯನ್ನು ಸರಿಯಾಗಿ ಗೌರವಿಸಲು ಸಾಧ್ಯ ಎಂಬುದೂ ಅವರಿಗೆ ಹೊಳೆದಿರಬೇಕು. ಹೇಗಾದರೂ ಆಗಲಿ, ಹೊಸ ಜೀವನಜಾಗೃತಿಯನ್ನು ಮೇಲಿನ ವರ್ಗದಲ್ಲಿ ಹುಟ್ಟಿಸಬೇಕಾದರೆ ಪ್ರಜಾಸರ್ಕಾರ ಒಂದು ಆಗಬೇಕಾಗಿದೆ ಎಂದು ಅವರು ನಂಬಿದ್ದರು. ನಾಯಕ ಇಂತಹ ಕುಲದಿಂದಲೇ ಬಂದಿರಬೇಕು ಎಂಬ ಭಾವನೆಯನ್ನು ಮೊದಲು ತ್ಯಜಿಸಬೇಕಾಗಿದೆ. ಯಾವುದನ್ನು ಪ್ರತಿಭೆ ಎಂದು ಕರೆಯುವರೊ ಅದೇ ಮೇಲಿನ ಮಟ್ಟಕ್ಕೆ ಹೋಗುವಂತೆ ಮಾಡಿದ ಸಾಧಾರಣ ತಿಳಿವಳಿಕೆ. ಇದು ರೈತನಲ್ಲಾಗಲಿ, ವರ್ತಕನಲ್ಲಾಗಲಿ, ಕ್ಷತ್ರಿಯನಲ್ಲಾಗಲಿ, ಬ್ರಾಹ್ಮಣನಲ್ಲಾಗಲಿ ಇರಬಹುದು. ಕ್ಷತ್ರಿಯನಿಗೆ ಮಾತ್ರ ಧೈರ್ಯಮೀಸಲಾಗಿದ್ದರೆ ತಾಂತ್ಯಾಟೋಪಿ ಹೇಗೆ ಬರುತ್ತಿದ್ದ? ಇಡೀ ಭರತಖಂಡ ಬದಲಾವಣೆಯ ಒಂದು ಮಹಾ ಮೂಸೆಯೊಳಗೆ

ಬೀಳುವುದಿದೆ. ಇದರಿಂದ ಯಾವ ಹೊಸ ಶಕ್ತಿ ಮತ್ತು ಚೇತನಗಳು ವ್ಯಕ್ತವಾಗುವವೂ ಅದನ್ನು ಯಾರೂ ಹೇಳಲಾರರು ಎಂದು ಸ್ವಾಮಿಜಿ ನಂಬಿದ್ದರು.

ವಿದ್ಯಾವಂತರಾಗಿರುವವರು ನಿಮ್ನವರ್ಗದವರಿಗೆ ವಿದ್ಯೆಯನ್ನು ಕೊಡಬೇಕಾಗಿದೆ. ಇದೇ ಅವರ ಕರ್ತವ್ಯ. ಇತರರು ಯಾರೂ ಇದನ್ನು ಮಾಡುವುದಿಲ್ಲ ಎಂದು ಅವರಿಗೆ ಸ್ಪಷ್ಟವಾಗಿ ಹೊಳೆಯಿತು. ಪರದೇಶೀಯರು ಪರಭಾಷೆಯ ಮೂಲಕ ಜ್ಞಾನಪ್ರಚಾರ ಮಾಡುವುದರಲ್ಲಿ ಬಹಳ ಅಪಾಯ ಅಡಗಿದೆ ಎಂಬುದನ್ನು ಅವರು ಒಂದುಕ್ಷಣವೂ ಮರೆಯಲಿಲ್ಲ. ಆದಕಾರಣವೆ ಅವರು ಬರೆದ ಪತ್ರಗಳಲ್ಲಿ ಸಂಚಾರ ಮಾಡುತ್ತಿರುವ ವಿದ್ಯಾರ್ಥಿಗಳು ಮಾಯಾಲಾಂದ್ರ ಕ್ಯಾಮರ ಮತ್ತು ಕೆಲವು ರಸಾಯನಿಕ ದ್ರವ್ಯಗಳ ಮೂಲಕ ಜನಸಾಮಾನ್ಯರಿಗೆ ವಿಷಯವನ್ನು ಹೇಳಬೇಕೆಂದು ತಿಳಿಸುತ್ತಿದ್ದರು. ಸಾಧುಸಂತರು ಜನರೊಡನೆ ಆಧ್ಯಾತ್ಮಿಕ ವಿಷಯಗಳನ್ನು ಕುರಿತು ಮಾತನಾಡುತ್ತಿದ್ದಾಗ ಕೆಲವು ವ್ಯಾವಹಾರಿಕ ವಿಷಯಗಳನ್ನು ಕೂಡ ಅವರು ಬೋಧಿಸಲಿ ಎನ್ನುವರು. ಇದೆಲ್ಲಾ ಜನಸಾಮಾನ್ಯರಲ್ಲಿ ವಿದ್ಯಾಭಿರುಚಿ ಹುಟ್ಟಿಸುವುದಕ್ಕೆ ಮಾತ್ರ. ಅದನ್ನು ಕಲಿಯುವುದಕ್ಕೆ ಪ್ರತಿಯೊಬ್ಬನೂ ತಾನೆಯೊ ಇತರರೊಡನೆ ಸೇರಿಯೊ ಪ್ರಯತ್ನಪಡಬೇಕಾಗಿದೆ. ಅನೇಕ ಜನರಿಗೆ ತಮಗಿನ್ನೂ ಗೊತ್ತಿಲ್ಲದ ಹೊಸದೊಂದು ಭಾವನಾಪ್ರಪಂಚವಿದೆ ಎಂಬುದನ್ನು ತೋರಬೇಕು. ಇದೇ ಜನರಲ್ಲಿ ವಿದ್ಯಾಭಿರುಚಿ ಹುಟ್ಟಿಸುವುದಕ್ಕೆ ಮೊದಲ ಮೆಟ್ಟಲು. ಇಂತಹ ವಿಷಯಗಳಲ್ಲಿ ಸ್ವಾಮಿಜಿ ನಿಜವಾಗಿಯೂ ಸರಿಯಾದ ಮಾರ್ಗದಲ್ಲಿದ್ದರು.

ಧಾರ್ಮಿಕ ಗುರುವಿಗೆ ತಕ್ಕ ಕೆಲಸವನ್ನು ತಾವೇ ಸ್ಥಾಪಿಸಿ ಪ್ರಾರಂಭಿಸಿದರು. ಅದೇ ರೋಗಿಗಳಿಗೆ ಅಥವಾ ದರಿದ್ರರಿಗೆ ಸೇವೆ ಮಾಡುವುದು. ೧೮೯೯ ರಲ್ಲಿ ಪ್ಲೇಗಿನ ರೋಗದ ಹಾವಳಿಯಿಂದ ಪಾರಾಗಲು ಕಲ್ಕತ್ತಾ ನಗರವನ್ನು ನಿರ್ಮಲವಾಗಿಡಲು ಸಂಸ್ಥೆ ಪ್ರಥಮವಾಗಿ ಕೆಲಸ ಪ್ರಾರಂಭಿಸಿತು. ಇದಕ್ಕೆ ಹಣವನ್ನು ಸ್ವಾಮಿಜಿಯೇ ವಸೂಲಿ ಮಾಡಿದರು. ಅಂದು ಆರಂಭವಾದ ಕೆಲಸವನ್ನು ಇಂದಿಗೂ ತ್ಯಜಿಸಿಲ್ಲ. ಅವರು ಪಾಶ್ಚಾತ್ಯದೇಶದಲ್ಲಿದ್ದಾಗ ಇಂಡಿಯಾದೇಶದ ಪರೆಯರಿಗೆ ಕೆಲಸಮಾಡಲು ಯಾರಾದರೂ ಸಿಕ್ಕುತ್ತಾರೆಯೆ ಎಂದು ನೋಡುತ್ತಿದ್ದರು. ೧೮೯೭ ರಲ್ಲಿ ತಮ್ಮ ಬ್ರಾಹ್ಮಣ ಶಿಷ್ಯರು ನಿಮ್ನವರ್ಗದ ಕಾಲರಾ ರೋಗಿಗಳಿಗೆ ಶುಶ್ರೂಷೆಮಾಡುತ್ತಿರುವುದನ್ನು

ನೋಡಿದಾಗಲಂತೂ ಅವರಿಗೆ ಪರಮಾನಂದವಾಯಿತು. ಇದನ್ನು ಕುರಿತು ಅವರು ಬುದ್ಧನ ಕಾಲದಲ್ಲಿ ಏನು ಆಯಿತೋ ಅದೇ ಪುನಃ ಆಗುತ್ತಿರುವುದು ಎಂದು ಹೇಳಿದರು. ಸ್ವಾಮಿಜಿ ಪರಿಚಯ ಹೆಚ್ಚು ಇದ್ದವರಿಗೆ ಕಾಶಿಯಲ್ಲಿ ರುವ ಸಣ್ಣ ಆಸ್ಪತ್ರೆಯನ್ನು ನೋಡಿದರೆ ಅದು ವಿಶೇಷ ಗೌರವ ಮತ್ತು ಪ್ರೀತಿಗೆ ಪಾತ್ರವಾಗದೆ ಇರದು. ಇದೇ ಸ್ವಾಮಿಜಿಯ ಪ್ರೀತಿ ಮತ್ತು ದಯೆಯಿಂದ ಜನಿಸಿದ ಕೊನೆಯ ಶಿಶು.

ಇತರ ಉದ್ಯಮಗಳ ಮೇಲೆ ಕೂಡ ಸ್ವಾಮಿಜಿ ಪ್ರೀತಿ ಏನೂ ಕಡಿಮೆ ಇರಲಿಲ್ಲ. ಇವು ನೇರವಾಗಿ ಇವರದಲ್ಲ. ಕೇವಲ ಜ್ಞಾನಪ್ರಸಾರಕ್ಕೆ ಸಂಸ್ಥೆಯಿಂದ ಹೊರಡುತ್ತಿದ್ದ ಹಲವು ಮಾಸಪತ್ರಿಕೆಗಳು, ಮುರ್ಶಿದಾಬಾದಿನ ಅನಾಥಾಲಯದಲ್ಲಿ ಕೊಡುತ್ತಿದ್ದ ವೃತ್ತಿಶಿಕ್ಷಣ, ಇವು ಸ್ವಾಮಿಜಿ ದೃಷ್ಟಿ ಯಲ್ಲಿ ಬಹಳ ಮುಖ್ಯವಾಗಿದ್ದುವು. ಈಗಿನ ಸ್ಥಿತಿಯಲ್ಲಿ ಭರತಖಂಡದಲ್ಲಿ ಮಾಸಪತ್ರಿಕೆಗಳು ಸಂಚರಿಸುತ್ತಿರುವ ಶಾಲೆ ಕಾಲೇಜು ವಿಶ್ವವಿದ್ಯಾನಿಲಯ ದಂತೆ ಇವೆ. ಇವು ಬಹಳ ಪ್ರಭಾವಕಾರಿ. ಇವು ಭಾವನೆಯನ್ನು ಪ್ರಸಾರ ಮಾಡುವುವು, ಮತ್ತೆ ಕೆಲವರಿಗೆ ಬರೆಯಲು ಅವಕಾಶವನ್ನು ಕಲ್ಪಿ ಸುವುದು. ವಿದ್ಯಾಭ್ಯಾಸದ ದೃಷ್ಟಿಯಿಂದ ಇವುಗಳಿಗೆ ಇರುವ ಬೆಲೆಯನ್ನು ಅರಿತೇ ಸ್ವಾಮಿಜಿ ತಮ್ಮ ಗುರುಭಾಯಿಗಳು ಮತ್ತು ಶಿಷ್ಯರು ನಡೆಸುತ್ತಿದ್ದ ಪತ್ರಿಕೆಗಳು ಹೇಗೆ ನಡೆಯುತ್ತಿವೆ ಎಂದು ಬಹಳ ಕುತೂಹಲದಿಂದ ವಿಚಾರಿ ಸುತ್ತಿದ್ದರು. ಒಂದೇ ಮಾಸಪತ್ರಿಕೆಯಲ್ಲಿ ಒಂದು ಲೇಖನ ಬಹಳ ಗಹನ ವಾದ ಆಧ್ಯಾತ್ಮಿಕ ತತ್ತ್ವದ ವಿಷಯವಾಗಿರುವುದು ಮತ್ತೊಂದು ಯಾವುದೋ ಒಂದು ಲೌಕಿಕ ವಿಷಯವಾಗಿರುವುದು ಸಂಧಿಕಾಲದ ಮೂಲಕ ಸಾಗಿಹೋಗುತ್ತಿದ್ದ ಜನರ ಮನಸ್ಸನ್ನು ಪ್ರತಿಬಿಂಬಿಸುವುದು. ಸ್ವಾಮಿಜಿ ಈ ಅಸಮಂಜಸವಾದ ವಿಷಯವನ್ನು ಕುರಿತು ಹೀಗೆ ಹೇಳಿದರು: "ಹಿಂದೂಗೆ ಜ್ಞಾನಕ್ಕೆ ಮಾರ್ಗ ಧ್ಯಾನ. ಇದು ಗಣಿತಶಾಸ್ತ್ರವಾದರೆ ಸರಿ ಯಾಗುವುದು. ಆದರೆ ದುರದೃಷ್ಟವಶಾತ್ ಭೂಗೋಳಶಾಸ್ತ್ರ ತೆಗೆದು ಕೊಂಡರೂ ಅವನು ಇದೇ ಮಾರ್ಗವನ್ನು ಅನುಸರಿಸುವನು. ಆದರೆ ಇದ ರಿಂದ ಹೆಚ್ಚು ಭೂಗೋಳ ಗೊತ್ತಾಗುವಂತೆ ಇಲ್ಲ!"

ವಿವೇಕಾನಂದರ ಅನುಕಂಪ ಕೇವಲ ಭಾರತೀಯರ ಮೇಲೆ ಮಾತ್ರ ಇರಲಿಲ್ಲ. ಇವರು ಪೌರಾತ್ಯ ದೇಶದಲ್ಲಿ ಜನಿಸಿದ್ದುದರಿಂದ ಇವರು ಯಾವಾಗಲೂ ಸಣ್ಣ ರೈತ ಸಣ್ಣ ವರ್ತಕನನ್ನು ಒಪ್ಪುತ್ತಿದ್ದರೇ ಹೊರತು

ಪಾಶ್ಚಾತ್ಯರು ಅನುಮೋದಿಸುವಂತೆ ದೊಡ್ಡ ದೊಡ್ಡ ಉದ್ಯಮಗಳನ್ನು ಒಪ್ಪುತ್ತಿರಲಿಲ್ಲ. ಇನ್ನು ಮೇಲೆ ಬರುವ ಮಾನವರು ಕೆಲಸಗಾರರ ಸಮಸ್ಯೆಯನ್ನು ಮೊದಲು ಪರಿಹರಿಸಲೆತ್ನಿಸುವರು. ಅಥವಾ ಅವರು ಹೇಳಿ ದಂತೆ ಶೂದ್ರರ ಕಷ್ಟವನ್ನು ಪರಿಹರಿಸಲು ಯತ್ನಿಸುವರು. ಮೊದಲು ಪಾಶ್ಚಾತ್ಯ ದೇಶಗಳಿಗೆ ಬಂದಾಗ ಅಲ್ಲಿಯ ತೋರಿಕೆಯ ಸಾರ್ವಜನಿಕ ನೀತಿಗೆ ಮಾರುಹೋಗಿದ್ದರು. ಅನಂತರ ೧೯೦೦ ರಲ್ಲಿ ಅಲ್ಲಿಗೆ ಪುನಃ ಹೋದಾಗ ಹಣಕ್ಕಾಗಿ ಅವರಲ್ಲಿದ್ದ ಸ್ವಾರ್ಥ, ಹಕ್ಕುಗಳಿಗಾಗಿ ಹೋರಾಡುತ್ತಿರುವುದು ಇವನ್ನೆಲ್ಲಾ ನೋಡುವರು. ಪಾಶ್ಚಾತ್ಯ ದೃಶ್ಯ ಆಗ ನರಕ ಸದೃಶವಾಯಿತು. ಇವರ ಅನುಭವ ಮಾಗಿದ ಮೇಲೆ, ಚೈನ ಪಾಶ್ಚಾತ್ಯ ರಾಷ್ಟ್ರಗಳಿಗಿಂತ ಹೆಚ್ಚು ಮಾನವಕೋಟಿಯ ನೈತಿಕ ಆದರ್ಶದ ಕಡೆ ಹೋಗಿದೆ ಎನ್ನು ತ್ತಿದ್ದರು. ಹೊಸ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಉದಾತ್ತ ನೈತಿಕ ಆದರ್ಶ ಈಗ ಮೂಡಿಲ್ಲ, ಮುಂದೆ ಮೂಡುವಂತೆಯೂ ಕಾಣುವುದಿಲ್ಲ ಎಂದು ಹೇಳು ತ್ತಿದ್ದರು. ಆದರೂ ಭವಿಷ್ಯಪ್ರಪಂಚ ಜನಸುಧಾರಣೆಗಾಗಿ ಬರುವುದು ಎಂಬುದನ್ನು ಅವರು ಎಂದಿಗೂ ಅನುಮಾನಿಸಲಿಲ್ಲ. "ನಾವು ಶೂದ್ರರ ಸಮಸ್ಯೆಯನ್ನು ಪರಿಹರಿಸಬೇಕಾಗಿದೆ. ಆದರೆ ಎಷ್ಟೊಂದು ಇದಕ್ಕಾಗಿ ಗೊಂದಲ!" ಎಂದು ಒಂದು ದಿನ ಹೇಳಿದರು. ಅವರ ಭವಿಷ್ಯವನ್ನು ನೇರ ವಾಗಿ ನೋಡುತ್ತಿರುವಂತೆ ಮಾತನಾಡಿದರು. ಅವರ ವಾಣಿಯಲ್ಲಿ ದ್ರಷ್ಟಾರನ ಪ್ರತಿಭೆಯಿತ್ತು. ಕೇಳುವವರು ಸ್ವಾಮಿಜಿ ಇನ್ನೂ ಮಾತನಾಡು ತ್ತಾರೆಯೊ ಎಂದು ಕುತೂಹಲದಿಂದ ಕಾಯುತ್ತಿದ್ದರು. ಆದರೆ ಅವರು ದೀರ್ಘ ಆಲೋಚನೆಯಲ್ಲಿ ತತ್ಪರರಾಗಿ ಮೌನವಾದರು.

ಇಂತಹ ಒಂದು ಗಲಿಬಿಲಿ ಮತ್ತು ಭಯವನ್ನು ಎದುರಿಸುವಾಗ ಮನುಷ್ಯರು ದಾರಿತಪ್ಪದೆ ಗುರಿಯನ್ನು ತೋರುವುದಕ್ಕಾಗಿಯೆ ಶ್ರೀರಾಮ ಕೃಷ್ಣರು ಮತ್ತು ಸ್ವಾಮಿ ವಿವೇಕಾನಂದರು ಮಾತೃಶಕ್ತಿಯನ್ನು ಉದ್ಬೋಧನಗೊಳಿಸಿರುವರು. ಅವಳೇ ಅನುಭವಗಳ ಅತಿರೇಕವನ್ನು ಒಟ್ಟುಗೂಡಿಸುವವಳು. ಅವಳು ಪಾಪಪುಣ್ಯಗಳೆಲ್ಲದರ ಮೂಲಕ ಕಾಣು ತ್ತಿರುವಳು. ದಾರಿಯಾವುದಾದರೂ ಗುರಿ ಅವಳೇ. ಯಾವಾಗಲಾದರೂ ಸ್ವಾಮಿಜಿ ದೇವಿ ಸ್ತೋತ್ರವನ್ನು ಪಾರಾಯಣ ಮಾಡುತ್ತಿದ್ದುದನ್ನು ಕೇಳಿದರೆ ಯಾವುದೋ ಮೆಲುದನಿಯ ವಾದ್ಯವೃಂದದ ಹಿನ್ನೆಲೆಯಂತೆ ಈ ಭಾವನೆ ಅದರಲ್ಲಿ ಅನುರಣಿತವಾಗುತ್ತಿದ್ದುದು ಗೋಚರವಾಗುತ್ತಿತ್ತು.

"ಶೀಲವಂತರ ಮನೆಯಲ್ಲಿ ನೀನೆ ಶ್ರೀ ಮತ್ತು ಸುಕೃತಿ;" "ಯಾರು ದುಷ್ಟರೊ ಜಗಳಗಂಟರೊ ಅವರ ಮನೆಯಲ್ಲಿ ದುಃಖ ಮತ್ತು ಅಲಕ್ಷ್ಮಿಯೂ ನೀನೆ." ಸಾಮಾನ್ಯ ಭರವಸೆ ಮತ್ತು ಅಂಜಿಕೆಯಲ್ಲಿ ದಬ್ಬಾಳಿಕೆ ನಡೆಸುತ್ತಿರುವವರು ಮತ್ತು ದಬ್ಬಾಳಿಕೆಗೆ ಕಾರಣರಾದವರಿಬ್ಬರೂ ಒಟ್ಟಿಗೆ ಕಲೆತಾಗ, ಜನಾಂಗಗಳ ಗೊಂದಲ ಹೆಚ್ಚಿದಾಗ, ಸೇನಾಭಾರಕ್ಕೆ ಧರೆ ಕುಸಿದು ಧ್ವನಿಸ್ಪಷ್ಟವಾಗಿ ಧಿಗ್ ಭಿತ್ತಿಯನ್ನು ಒಡೆದಂತೆ ಅವರಿಗೆ ಕೇಳಿದಾಗ, ಅವುಗಳನ್ನೆಲ್ಲಾ ಮುಳುಗಿಸುವ ಒಂದು ಮಂಗಳ ಶ್ಲೋಕ ಅವರಿಂದ ಹೊರಬರುತ್ತಿತ್ತು.

ಪ್ರಕೃತಿಸ್ತ್ವಂ ಚ ಸರ್ವಸ್ಯ ಗುಣತ್ರಯ ವಿಭಾವಿನೀ
ಕಾಲರಾತ್ರಿ ಮಹಾರಾತ್ರಿ ರ್ಮೋಹರಾತ್ರಿಶ್ಚದಾರುಣಾ

[ನೀನೆ ಸರ್ವಭೂತಗಳ ಪ್ರಕೃತಿ ಮತ್ತು ತ್ರಿಗುಣಗಳನ್ನು ಉಂಟುಮಾಡುವವಳು; ಬ್ರಹ್ಮಲಯವಾಗುವ ಪ್ರಳಯದ ಕಾಳರಾತ್ರಿ ನೀನೆ, ಜಗತ್ತು ಲಯವಾಗುವ ಮಹಾರಾತ್ರಿ ನೀನೆ, ದಾರುಣವಾದ ಮೋಹರಾತ್ರಿಯೂ ನೀನೆ.]

ಸರ್ವಮಂಗಳ ಮಾಂಗಲ್ಯೆ ಶಿವೇ ಸರ್ವಾರ್ಥ ಸಾಧಿಕೇ
ಶರಣ್ಯೇ ತ್ರ್ಯಂಬಕೇ ಗೌರೀ ನಾರಾಯಣಿ ನಮೋಸ್ತುತೇ

[ಹೇ ನಾರಾಯಣಿ, ಸೃಷ್ಟಿಸ್ಥಿತಿ ವಿನಾಶಗಳ ಶಕ್ತಿರೂಪಳೂ, ಸನಾತನಿಯೂ ತ್ರಿಗುಣಗಳ ಆಶ್ರಯವೂ ತ್ರಿಗುಣಮಯಳೂ ಆದ ನಿನಗೆ ನಮಸ್ಕಾರ.]

---

೨೧

## ಪಾಶ್ಚಾತ್ಯ ಸೇವಾವ್ರತಿಗೆ ಶಿಕ್ಷಾಕ್ರಮ

ಸ್ವಾಮಿಜಿ ಗಾಜೀಪುರದ ಪವಹಾರಿ ಬಾಬಾರನ್ನು ಒಂದು ಸಲ ಕರ್ಮದಲ್ಲಿ ಜಯಗಳಿಸುವುದರ ರಹಸ್ಯವೇನು? ಎಂದು ಕೇಳಿದ್ದರು. ಅದಕ್ಕೆ ಆತ ಗುರಿಯೇ ದಾರಿಯಾಗಬೇಕು ಎಂದಿದ್ದನು.

ಮಧ್ಯ ಮಧ್ಯ ಮನನ ಮಾಡುವಂತಹ ನುಡಿ ಇದು. ಕೆಲಸಮಾಡುವವನ ಶಕ್ತಿಯೆಲ್ಲ ಮಾರ್ಗದಲ್ಲಿ ಕ್ರೇಂದ್ರೀಕೃತವಾಗಬೇಕು, ಇದೇ ಸಧ್ಯಕ್ಕೆ ಗುರಿ ಎಂದು ಭಾವಿಸಬೇಕು, ಬೇರೆ ಗುರಿಯನ್ನು ಮರೆಯಬೇಕು ಎಂದು ಇದರ ಅರ್ಥವಾದರೆ, ಗೀತೆಯಲ್ಲಿ ಬರುವ, ಕರ್ಮ ಮಾಡುವುದಕ್ಕೆ ಮಾತ್ರ ನಿನಗೆ ಅಧಿಕಾರ ಅದರ ಫಲಕ್ಕಲ್ಲ ಎಂಬುದನ್ನು ಬೋಧಿಸುವ ಮತ್ತೊಂದು ರೀತಿಯಾಯಿತು.

ನನ್ನ ಗುರುದೇವನಲ್ಲಿ ಆದರ್ಶವನ್ನು ಅನುಷ್ಠಾನಕ್ಕೆ ತರುವಂತೆ ಪ್ರೋತ್ಸಾಹಿಸುವಂತಹ ಅದ್ಭುತ ಶಕ್ತಿರಹಸ್ಯ ಇತ್ತು. ಇಂಡಿಯಾದೇಶದಲ್ಲಿ ಇಂಡಿಯಾದೇಶದ ಪರವಾಗಿ ಕೆಲಸಮಾಡುವ ಐರೋಪ್ಯರು ಭಾರತೀಯ ರೀತಿಯಲ್ಲಿ ಕೆಲಸಮಾಡಬೇಕೆಂದು ಸ್ವಾಮಿಜಿ ಭಾವಿಸಿದ್ದರು. ಅವರಿಗೆ ಇದಕ್ಕೆ ಸಾಕಷ್ಟು ಕಾರಣಗಳಿದ್ದವು. ಸ್ವಾಮಿಜಿ ಇಲ್ಲಿ ಮುಖ್ಯವಾವುದು, ಅಮುಖ್ಯವಾವುದು ಎಂಬುದನ್ನು ಸ್ವಲ್ಪವೂ ಮರೆಯಲಿಲ್ಲ. ಆದರೂ ಯಾವ ಗೌಣವಾದ ವಿಷಯವನ್ನು ಕೂಡ ನಾವು ನಿರ್ಲಕ್ಷಿಸಕೂಡದಾಗಿತ್ತು. ಎಲ್ಲರೂ ಯಾವ ಆಹಾರವನ್ನು ಒಪ್ಪುವರೋ ಅದನ್ನು ತಿನ್ನಬೇಕು, ಅದನ್ನು ಕೈಯಿಂದಲೇ ಊಟ ಮಾಡಬೇಕು, ನೆಲದ ಮೇಲೆ ಕುಳಿತುಕೊಳ್ಳಬೇಕು, ಮಲಗಬೇಕು, ಹಿಂದೂಗಳ ಆಚರಣೆಯನ್ನು ಅನುಸರಿಸಬೇಕು, ಹಿಂದೂಗಳ ಆಚರಣೆ ಮತ್ತು ಭಾವವನ್ನು ಚಾರು ಚೂರು ತಪ್ಪದಂತೆ ಮಾಡಬೇಕು. ಹೀಗೆ ಮಾಡಿದರೆ ಮಾತ್ರ ಭಾರತೀಯ ದೃಷ್ಟಿಯಿಂದ ಅನಂತರ ದೊಡ್ಡ ಸಮಸ್ಯೆಯನ್ನು ಪರಿಹರಿಸಲು ಸಾಧ್ಯ ಎಂದು ಸ್ವಾಮಿಜಿ ಭಾವಿಸಿದ್ದರು. ಬಹಳ ಅನಾಗರಿಕ ಎಂದು ಭಾವಿಸುವ ಜಾತಿ ಪದ್ಧತಿಯನ್ನೂ ಒಪ್ಪಿಕೊಂಡು ಅದರಂತೆ ಅನುಸರಿಸಬೇಕು. ತಮ್ಮಂತೆ ಇವುಗಳೆಲ್ಲದರಿಂದ ಪಾರಾದ ಸಮಯ ಒಂದು ಬರುವುದೆಂದು ಅವರು ದೃಢವಾಗಿ ನಂಬಿದ್ದರು. ಆಧರೆ ಎಲ್ಲಾ ಅನುಭವಗಳ ಮೂಲಕ ಸಾಗಿಹೋಗಿ

ಸ್ವತಂತ್ರವನ್ನು ಪಡೆಯುವುದು ಬೇರೆ, ಇವುಗಳನ್ನೆಲ್ಲ ಗಣನೆಗೆ ತರದೆ ಅಲ್ಲಗಳೆದು ಸ್ವಾತಂತ್ರ್ಯವನ್ನು ಪಡೆಯುವುದು ಬೇರೆ.

ಸ್ವಾಮಿಜಿಗೆ ಪ್ರತಿಯೊಂದು ಆಚಾರದ ಹಿಂದೆಯೂ ಒಂದು ಆದರ್ಶವನ್ನು ನೋಡಬಲ್ಲ ಒಂದು ಗಮನಾರ್ಹವಾದ ಶಕ್ತಿ ಇತ್ತು. ಈಗಲೂ ಕೂಡ ದೀಪವನ್ನು ಬಾಯಿನಿಂದ ಆರಿಸುವುದು ಅಶುದ್ಧ ಮತ್ತು ಅನಾಗರಿಕ ಎಂದು ಕಂಪಿಸುವರು. ಸೀರೆಯನ್ನು ಉಟ್ಟು ತಲೆಯಮೇಲೆ ಮುಸುಕನ್ನು ಹಾಕಿಕೊಳ್ಳುವುದು ಸೌಶೀಲ್ಯ ಮತ್ತು ಸಹಿಷ್ಣುತಾ ಶಕ್ತಿಯ ಚಿಹ್ನೆ. ಹಾಗಿಲ್ಲದೇ ಇರುವುದು ಗಂಡುಬೀರಿತನವನ್ನು ತೋರುವುದು. ಬಾಹ್ಯ ಚಿಹ್ನೆಗಳು ಎಷ್ಟುಮಟ್ಟಿಗೆ ಇಂಡಿಯಾಜನಾಂಗದ ಆದರ್ಶವನ್ನು ಪ್ರತಿಬಿಂಬಿಸುತ್ತವೆ ಎಂಬುದನ್ನು ನಾವು ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಒಂದು ಸಲಿ ಸ್ವಾಮಿ ಸದಾನಂದರು, "ತಲೆಯಮೇಲೆ ಮುಸುಕುಹಾಕುವುದನ್ನು ಮರೆಯಬೇಡ. ಸಾಧ್ವಿಯ ಅರ್ಥ ಸೌಶೀಲ್ಯವೇ ಅದರಲ್ಲಿದೆ" ಎಂದು ಎಚ್ಚರಿಸಿದ್ದರು.

ಇವುಗಳೆಲ್ಲದರ ಮೂಲಕ ಆಗಲೆ ಯಾವುದು ಸರಿಯಾದಮಾರ್ಗ ಎಂದು ಇತರರು ತಿಳಿದಿದ್ದರೊ ಆ ಮಾರ್ಗದಲ್ಲಿ ಹೋಗಲು ಸಾಧ್ಯವಾಯಿತು. ಭರತಖಂಡದ ಶಿಕ್ಷಣ ಸಮಸ್ಯೆಯನ್ನು ಪರಿಹರಿಸಲು ಯಾರಾದರೂ ಯತ್ನಿಸಲು ಇಚ್ಛಿಸಿದರೆ ಅವರಿಗೆ ದೀನ ಉಪಾಧ್ಯಾಯನ ವೃತ್ತಿಯ ಅನುಭವ ಇರಬೇಕಾದುದು ಬಹಳ ಮುಖ್ಯ. ಇದನ್ನು ನಾವು ಕಲಿಯಬೇಕಾದರೆ ಒಂದು ಸ್ವಲ್ಪ ಕಾಲವಾದರೂ ಕಲಿತುಕೊಳ್ಳುವ ಹುಡುಗನ ದೃಷ್ಟಿಯಿಂದ ನೋಡಬೇಕಾಗಿದೆ. ಶಿಕ್ಷಣ ಶಾಸ್ತ್ರವೆಲ್ಲ ಈ ದೃಷ್ಟಿಯಿಂದ ಸಾರುತ್ತದೆ. ತಿಳಿದಿರುವುದರಿಂದ ತಿಳಿಯದೆ ಇರುವುದರೆಡೆಗೆ, ಸರಳದಿಂದ ಜಟಲದಕಡೆ, ಸ್ಥೂಲದಿಂದ ಸೂಕ್ಷ್ಮದ ಕಡೆ, ಹೋಗಬೇಕು ಎನ್ನುವುದು. ಎಲ್ಲಿಯವರೆಗೆ ಕಲಿಸುವವನು ಕಲಿತುಕೊಳ್ಳುವವನ ದೃಷ್ಟಿಯಿಂದ ನೋಡಲಾರನೊ ಅವನ ಬೋಧನೆಯೆಲ್ಲ ನಿಷ್ಪ್ರಯೋಜನ, ಅವನು ತನ್ನ ಉದ್ದೇಶವನ್ನು ಸಾಧಿಸಿದಂತೆ ಆಗಲಿಲ್ಲ.

ಸ್ವಾಮಿಜಿ ಅವರು ಭಾರತೀಯ ಭಾವನೆ ಇಂತಹ ನೂರಾರು ಆಚಾರಗಳಲ್ಲಿ ವ್ಯಕ್ತವಾಗುತ್ತಿದೆ ಎಂಬುದನ್ನು ಅವರು ಜನ್ಮತಃ ಅರಿತಿದ್ದರು. ಅವರ ತರಬೇತಿನಲ್ಲಿ ಇದು ವಿಸ್ಮಯಜನಕವಾಗಿತ್ತು. ನಾವು ಸ್ವಲ್ಪ ಕೂಲಂಕಶವಾಗಿ ಆಲೋಚಿಸಿದರೆ ಶ್ರೀರಾಮಕೃಷ್ಣರು ಕೂಡ ಇದೇ

ಮಾರ್ಗವನ್ನು ಅನುಸರಿಸಿದ್ದರೆಂದು ಕಾಣುವುದು. ಯಾವುದಾದರೂ ಹೊಸಧರ್ಮವನ್ನು ಇವರು ಅನುಷ್ಠಾನ ಮಾಡಲು ಯತ್ನಿಸಿದರೆ ಆ ಧರ್ಮಾವಲಂಬಿಗಳು ಯಾವ ಬಟ್ಟೆ ಹಾಕುತ್ತಾರೆ, ಯಾವ ಭಾಷೆ ಮಾತನಾಡುತ್ತಾರೆ, ಏನು ತಿನ್ನುತ್ತಾರೆ ಅದನ್ನೆಲ್ಲಾ ಅನುಸರಿಸುತ್ತಿದ್ದರು. ಎಲ್ಲೋ ಕೆಲವು ಧರ್ಮಕ್ಕೆ ಸಂಬಂಧಪಟ್ಟ ಆಚಾರಗಳನ್ನು ಮಾತ್ರ ಅನುಸರಿಸುವುದರಲ್ಲಿ ತೃಪ್ತರಾಗುತ್ತಿರಲಿಲ್ಲ.

ಸ್ವಾಮಿಜಿ ಶಿಕ್ಷಣೋತ್ತಮರಾದುದರಿಂದ ಇಂತಹ ವಿಷಯಗಳಲ್ಲಿಯೂ ಸ್ವಾತಂತ್ರ್ಯಕ್ಕೆ ಭಂಗ ತರಲಿಲ್ಲ. ಆದರೆ ಒಮ್ಮೆ ಪ್ರಯತ್ನಮಾಡಿದುದರ ಮೇಲೆ ಅವರ ಉದ್ದೇಶ ಸ್ವಲ್ಪ ಸ್ವಲ್ಪವಾಗಿ ವ್ಯಕ್ತವಾಗುತ್ತಾ ಬಂತು. ಅವರು ಯಾವಾಗಲೂ ಉದ್ದೇಶದ ಪವಿತ್ರತೆಯನ್ನು ಪ್ರಶ್ನಿಸುತ್ತಿದ್ದರೆಂಬುದು ನಿಜ. ತಮ್ಮ ಅಥವಾ ಇತರರ ಸ್ವಾರ್ಥತೆ ಉದ್ದೇಶಕ್ಕೆ ಎಲ್ಲಿ ಆತಂಕವಾಗಿ ನಿಲ್ಲುವುದೋ ಎಂದು ಅನುಮಾನಿಸುತ್ತಿದ್ದರು. "ನಾನು ಯಾರನ್ನೂ ನೆಚ್ಚುವುದಿಲ್ಲ. ಏಕೆಂದರೆ ನನ್ನನ್ನು ನಾನೇ ನೆಚ್ಚುವುದಿಲ್ಲ. ನಾನು ನಾಳೆ ಏನಾಗುವೆನೊ ಯಾರಿಗೆ ಗೊತ್ತು?" ಎನ್ನುತ್ತಿದ್ದರು. ಆದರೆ ಇನ್ನೊಬ್ಬರು ಮಾಡುವ ತಪ್ಪನ್ನು ತಡೆಯುವುದಕ್ಕಾದರೂ ಸ್ವಾತಂತ್ರ್ಯಕ್ಕೆ ಭಂಗತರುವುದು ಅವರ ಸ್ವಭಾವಕ್ಕೇ ವಿರೋಧ. ಆಗಲೆ ಒಂದುಸಲಿ ತಪ್ಪು ಮಾಡಿದ ಮೇಲೆ ಅದಕ್ಕೆ ಕಾರಣವನ್ನು ಮಾತ್ರ ಅವರು ತೋರುತ್ತಿದ್ದರು.

ನಾನು ೧೮೯೮ರ ಪ್ರಾರಂಭದ ಆರು ತಿಂಗಳು ಕಲ್ಕತ್ತೆಯಲ್ಲಿದ್ದೆ. ಆಗ ಐರೋಪ್ಯರು ಇಂಡಿಯಾ ದೇಶದವರು ಯಾರ ಯಾರೊ ಮನೆಯಲ್ಲಿ ನಾನು ಊಟ ಮಾಡಿದೆ. ಸ್ವಾಮಿಜಿ ಮನಸ್ಸಿಗೆ ಇದರಿಂದ ಸ್ವಲ್ಪ ವ್ಯಾಕುಲವಾಯಿತು. ಇದರಿಂದ ಪೂರ್ಣ ಸಂಪ್ರದಾಯವಂತರ ಸರಳ ಜೀವನವನ್ನು ಕಂಡರೆ ಆಗದ ಸ್ಥಿತಿಗೆ ಎಲ್ಲಿ ನಾನು ಬರುತ್ತೇನೊ ಎಂದು ಅವರು ಶಂಕಿಸಿದರು. ಯಾರೊಂದಿಗೆ ನಾನು ಬೆರೆಯುತ್ತಿದ್ದೆನೊ ಅವರ ಜಾತಿಯ ಪರವಾಗಿ ಎಲ್ಲಿ ನನ್ನ ಮನಸ್ಸು ವಾಲುವುದೊ ಎಂದು ಅನುಮಾನಿಸಿದರು. ಪಾಶ್ಚಾತ್ಯದೇಶದಲ್ಲಿ ತುಂಬಾ ನಾಜೋಕಾದ ಹೆಂಗಸಿನ ಕೀರ್ತಿಲಾಲಸೆಯಿಂದ ಆ ಸಂಸ್ಥೆಯೇ ನಾಶವಾದುದನ್ನು ಸ್ವಾಮಿಜಿ ನೋಡಿದ್ದರು. ಆದರೂ ಸ್ವಲ್ಪವೂ ನನಗೆ ಅವರು ಅಡ್ಡಲಾಗಿ ಬರಲಿಲ್ಲ. ಯಾವಾಗಲಾದರೊಮ್ಮೆ ಅವರು ಅಧಿಕಾರವಾಣಿಯಿಂದ ಒಂದು ಮಾತನ್ನು ಹೇಳಿದ್ದರೂ ನಾನು ನಿಲ್ಲಿಸಿಬಿಡುತ್ತಿದ್ದೆ. ಅವರೆಂದಿಗೂ ತಮ್ಮ ಅಸಮ್ಮತಿಯನ್ನು ತೋರಲಿಲ್ಲ.

ತಮ್ಮ ಬಳಿಗೆ ಬಂದು ಹೇಳಿದ ಪ್ರತಿಯೊಂದು ಅನುಭವವನ್ನೂ ಅವರು ಕುತೂಹಲದಿಂದ ಕೇಳುತ್ತಿದ್ದರು. ಅವರು ಒಟ್ಟನಲ್ಲಿ ಕೆಲವು ವೇಳೆ ತಮ್ಮ ಅಂಜಿಕೆಯನ್ನು ತೋರುತ್ತಿದ್ದರೆ ವಿನಃ, ಎಚ್ಚರಿಕೆ ಈಯುತ್ತಿದ್ದರೆ ವಿನಃ, ಪ್ರತ್ಯೇಕ ಘಟನೆಗಳನ್ನು ಗಮನಿಸುತ್ತಿರಲಿಲ್ಲ. ವರ್ತಮಾನಭರತಖಂಡದ ಜನಾಂಗದ ಆಶಯಗಳನ್ನೆಲ್ಲಾ ಸ್ಪಷ್ಟವಾಗಿ ಕಲಿಸುವ ಆವಶ್ಯಕತೆ ನಿಜವಾಗಿ ಇದೆ ಎಂದು ಮನಗಂಡು ಸ್ವಾಮಿಜಿ ಶಿಷ್ಯಳಿಗೆ ತನ್ನ ಮಾರ್ಗವನ್ನೇ ಅನುಸರಿಸುವಂತೆ ಸ್ವಾತಂತ್ರ್ಯ ಕೊಟ್ಟರು.

ಇಂಗ್ಲೆಂಡಿಗೆ ಹೋಗುವಾಗ ಹಡಗಿನಲ್ಲಿ ಸ್ವಾಮಿಜಿ ತಮ್ಮ ಮನಸ್ಸಿನಲ್ಲಿದ್ದ ಆದರ್ಶವನ್ನು ವ್ಯಕ್ತಪಡಿಸಿದರು: "ನೀನು ಅಲ್ಲಿ ಇಲ್ಲಿ ಹೋಗುವುದನ್ನು ಬಿಟ್ಟು ಕಟ್ಟನಿಂದ ಒಬ್ಬಳೇ ಇರಬೇಕು" ಎಂದರು. ಒಂದು ದಿನ ಸ್ತ್ರೀಯರ ಬಗ್ಗೆ ಮಾಡುವ ಭವಿಷ್ಯ ಕರ್ತವ್ಯವನ್ನು ಕುರಿತು ಹೀಗೆಂದರು: "ನಿನ್ನ ಆಚಾರ ವ್ಯವಹಾರ ಆಲೋಚನೆ ಭಾವನೆ ಆವಶ್ಯಕತೆಯನ್ನೆಲ್ಲಾ ಹಿಂದೂ ದೃಷ್ಟಿಯಿಂದ ಪರಿವರ್ತನಗೊಳಿಸಬೇಕು. ನಿನ್ನ ಬಾಹ್ಯ ಮತ್ತು ಆಂತರಿಕ ಜೀವನ ಬ್ರಾಹ್ಮಣ ಬ್ರಹ್ಮಚಾರಿಣಿಯಂತೆ ಇರಬೇಕು. ನೀನು ಸಾಕಾದಷ್ಟು ಇಚ್ಛಿಸಿದರೆ ಮಾರ್ಗ ತಾನೆ ನಿನಗೆ ತೋರುವುದು. ಆದರೆ ನೀನು ನಿನ್ನ ಪೂರ್ವಾಶ್ರಮವನ್ನು ಮರೆಯಬೇಕು; ಮರೆತುಹೋಗುವಂತೆ ಮಾಡಬೇಕು. ಅದರ ನೆನಪುಕೂಡ ಅವಶೇಷವಾಗಿ ಹೋಗಬೇಕು."

ವಿವೇಕಾನಂದರಲ್ಲಿ ಮೇಲುನೋಟಕ್ಕೆ ಸೌಕರ್ಯ ಮತ್ತು ನಿರ್ಭಯತೆಗಳಿದ್ದರೂ ಅವರ ಯತಿಶೀಲ ಜಾಗೃತವಾಗಿತ್ತು. ಆದರೂ ಒಬ್ಬ ಸೇವಾವ್ರತಳ ಸುತ್ತಲೂ ಮಠದ ಬೇಲಿಯ ಬದಲು ಭಾರತೀಯ ಜನ ಮತ್ತು ಅವರ ಜೀವನವನ್ನು ಇಟ್ಟರು. ಸ್ವಾಮಿಜಿ ಪ್ರತಿಭೆಗೆ ಇದು ಒಂದು ಶ್ರೇಷ್ಠತಮ ಉದಾಹರಣೆಯಾಗಿದೆ ಎಂದು ಭಾವಿಸುತ್ತೇನೆ ಕೆಲವು ವೇಳೆ ಇದನ್ನು ಕುರಿತು ಯೋಚಿಸಿದರೆ. ಪ್ರತಿಯೊಬ್ಬರೊಡನೆಯೂ ಅವರವರ ಸಂಪ್ರದಾಯದ ಮೂಲಕವೇ ಮಾತನಾಡೋಣ ಎಂದರು. ಒಮ್ಮೆ ಇಂಗ್ಲೀಷ್ ಚರ್ಚಿನಲ್ಲಿ ಒಂದು ಹಿಂದೂ ಸಂಪ್ರದಾಯದ ಶಾಖೆಯನ್ನು ಈ ರೀತಿ ಚಿತ್ರಿಸತೊಡಗಿದರು: "ಕಾಶಾಯ ತೊಟ್ಟು ಬರೀ ಕಾಲಿನಲ್ಲಿ ಹೋಗುತ್ತಾ ತಪಸ್ಯೆಯಲ್ಲಿ ನಿರತರಾಗಿ ಎಲ್ಲಾ ಧರ್ಮಗಳಿಗೂ ಪರಸ್ಪರ ಸಂಬಂಧವಿದೆ ಎಂಬ ಪರಮಸತ್ಯಕ್ಕೆ ಅವರು ಕಂಕಣಬದ್ಧರಾಗಿರಬೇಕು."

ಹಿಂದೂಗಳ ದೃಷ್ಟಿಯಿಂದ ಸ್ವಾಮಿಜಿ ಆದರ್ಶ ಸುಮ್ಮನೇ

ಯಾವುದಕ್ಕೂ ಒಂದಕ್ಕೆ ಹೋರಾಡುತ್ತಿರುವುದು ಮಾತ್ರವಾಗಿರಲಿಲ್ಲ. ಹಿಂದೂಗಳ ಆಚಾರವನ್ನು ಸ್ವಲ್ಪಸ್ವಲ್ಪವಾಗಿ ವಿವರಿಸುತ್ತಾ ಹೋದರು. ಪಾಶ್ಚಾತ್ಯ ದೇಶದಲ್ಲಿ ಆಧ್ಯಾತ್ಮಿಕ ವಿಷಯಗಳನ್ನು ಶಿಷ್ಯನಿಗೆ ಉಪದೇಶಿಸುವಂತೆ ಇತ್ತು ಇದು. ಪಾಶ್ಚಾತ್ಯರ ನಡೆನುಡಿಯಲ್ಲಿ ತೋರುವ ಚಾಂಚಲ್ಯವನ್ನು ಅವರು ಹೀಗೆ ನಿಗ್ರಹಿಸಲು ಯತ್ನಿಸಿದರು. ಪೌರಾತ್ಯರಿಗೆ ಇದು ಬಹಳ ಅನಾಗರಿಕವಾಗಿ ಕಾಣುವುದು. ವ್ಯಥೆ ಮೆಚ್ಚಿಗೆ ಅಥವಾ ಕುತೂಹಲವನ್ನು ಪದೇ ಪದೇ ವ್ಯಕ್ತಗೊಳಿಸುತ್ತಿರುವುದನ್ನು ಕಂಡರೆ ಅವರಿಗೆ ಆಗದು. ಇದನ್ನು ಅಧರ್ಮ ಎಂದು ಹಳಿಯಲಾಗುವುದಿಲ್ಲ. ಆದರೆ ಇದೊಂದು ಕುಸಂಸ್ಕಾರ. ಪೌರಾತ್ಯ ಒಂದನ್ನು ನೋಡಿದಾಗ ಏನನ್ನು ಅನುಭವಿಸುತ್ತಾನೊ ಅದನ್ನು ಗೋಪ್ಯವಾಗಿ ತಾನೆ ಇಟ್ಟುಕೊಳ್ಳಬೇಕೆಂದು ಬಯಸುತ್ತಾನೆ. ಯಾವುದಾದರೂ ವಿಚಿತ್ರವಾದ ವಸ್ತುವನ್ನಾಗಲಿ, ಕುತೂಹಲಕಾರಿಯಾದ ವಸ್ತುವನ್ನಾಗಲಿ ಪದೇ ಪದೇ ತೋರುತ್ತಿರುವುದು ಮನಸ್ಸಿನ ಆಲೋಚನೆಯ ಏಕಾಗ್ರತೆಗೆ ಭಂಗತಂದಂತೆ ಇರುವುದು. ಹೀಗೆ ಶಾಂತಿಯಿಂದ ಇರುವುದು ಸೋಮಾರಿತನದ ಚಿಹ್ನೆಯಲ್ಲ. ಇದನ್ನು ಒಬ್ಬ ರಾಜ ಋಷಿಯೊಬ್ಬನನ್ನು ದೇವರ ವಿಷಯವಾಗಿ ಕೇಳಿದ ಪ್ರಸಂಗದಲ್ಲಿ ನೋಡುವೆವು. ರಾಜ ದೇವರು ಹೇಗಿರುವನು? ಹೇಗಿರುವನು? ಎಂದು ಪ್ರಶ್ನಿಸುತ್ತಿದ್ದ. ಇಷ್ಟು ಹೊತ್ತೂ ನಾನು ಅದನ್ನೇ ಹೇಳುತ್ತಿದ್ದುದು; ಮೌನವೇ ಅವನ ಸ್ವಭಾವ ಎಂದನು ಋಷಿ.

ಸ್ವಾಮಿಜಿ ಮೇಲಿನ ನಿಯಮದಲ್ಲಿ ಮಾತ್ರ ಚಾರುಚೂರು ತಪ್ಪುತ್ತಿರಲಿಲ್ಲ. ಐರೋಪ್ಯ ಶಿಷ್ಯರಿಗೆ ಬಹಳಕಾಲ ಸುಮ್ಮನೆ ಇರುವಂತೆ ಆಜ್ಞೆ ಮಾಡುತ್ತಿದ್ದರು. ಒಂದು ಸಲಿ ಅವರು ಸ್ವಲ್ಪವೂ ಉದ್ವಿಗ್ನತೆಗೆ ಎಡೆಗೊಡದೆ "ನಿನ್ನನ್ನು ಅರಿಯಲು ಯತ್ನಿಸು" ಎಂದರು.

ಒಂದು ಸಲಿ ಶರತ್ ಕಾಲದ ಪ್ರಶಾಂತ ಸಂಜೆಯ ಸಮಯದಲ್ಲಿ ಮರದಮೇಲಿನಿಂದ ಬೀಳುತ್ತಿದ್ದ ಎಲೆಗಳನ್ನು ನೋಡಿ ಈ ದೃಶ್ಯದಲ್ಲಿ ಕಾವ್ಯವಿಲ್ಲದೇ ಇಲ್ಲ. ಆದರೆ ಕೇವಲ ಬಾಹ್ಯ ಪಂಚೇಂದ್ರಿಯ ಘಟನೆಯಿಂದ ಮನಸ್ಸಿನಲ್ಲಾದ ಉದ್ವೇಗ ಕೇವಲ ಹುಡುಗಾಟಕೆ; ಅದಕ್ಕೆ ಸ್ಥಳವಿಲ್ಲ ಎಂದರು. ಪಾಶ್ಚಾತ್ಯರೆಲ್ಲ ಘಟನೆ ಮತ್ತು ಉದ್ವೇಗವನ್ನು ಬೇರೆ ಬೇರೆ ಇಡುವುದನ್ನು ಕಲಿಯಬೇಕು. ಬೀಳುವ ಎಲೆಗಳನ್ನು ನೋಡಿ. ಆದರೆ ಕೆಲವು ಕಾಲಾನಂತರ ಮನಸ್ಸಿನಲ್ಲಾದ ಉದ್ವೇಗವನ್ನು ಸ್ಮರಿಸಿ ಎಂದರು.

ಐರೋಪ್ಯರಿಗೆ ಗೊತ್ತಿರುವ ಸ್ಮರಣೆ ಮತ್ತು ಶಾಂತಿ ಸಿದ್ಧಾಂತಕ್ಕಿಂತ ಮೇಲಿನದೇನೂ ಹೆಚ್ಚೂ ಅಲ್ಲ, ಕಡಿಮೆಯೂ ಅಲ್ಲ. ರಚನಾತ್ಮಕಪ್ರತಿಭೆಯನ್ನು ಜಾಗ್ರತಗೊಳಿಸುವುದು ಕೂಡ ಹೀಗೆಯೆ? ಪ್ರಪಂಚವೆಲ್ಲ ಒಂದು ಚಿಹ್ನೆ ಎಂದು ಸಾರುವ ಕವನವನ್ನು ಇದು ವ್ಯಕ್ತಪಡಿಸಿ ಬುದ್ಧಿಯನ್ನು ಇಂದ್ರಿಯಕ್ಕೆ ಅತೀತವಾಗಿ ಒಯ್ಯುವುದೆ?

ಒಳ್ಳೆಯ ಸಂಸ್ಕಾರ ಮತ್ತು ಮನೋನಿಗ್ರಹ ಇವುಗಳಿಂದ ಒಂದು ಸಮಸ್ಯೆಯನ್ನು ಬಿಡಿಸಿ ಕೇವಲ ಅಧ್ಯಾತ್ಮಿಕ ತತ್ತ್ವದ ದೃಷ್ಟಿಯೊಂದರಿಂದಲೇ ಅದನ್ನು ವಿವರಿಸುವುದನ್ನು ಒಂದು ಬಗೆಯ ವ್ಯಾಮೋಹವೆನ್ನುತ್ತಿದ್ದರು. ಇದೊಂದು ಸೂಕ್ಷ್ಮವಾದ ದಾರ್ಶನಿಕ ಚರ್ಚೆಯ ಮೇಲಿರುವ ಲಾಲಸೆ. ಎಲ್ಲಾ ಆದರ್ಶಗಳಲ್ಲಿಯೂ ಒಂದು ಅಪಾಯವಿದೆ. ಅದೇ ನಾವುಗಳು ಇರುವ ಸ್ಥಿತಿಯನ್ನೇ ಆದರ್ಶವೆಂದು ಬಣ್ಣಿಸುವುದು. ಇದು ಸತ್ತ ಹೆಣವನ್ನು ಹೂಗಳಿಂದ ಮುಚ್ಚಿದಂತೆ. ಬಹಳ ಬೇಗ ದುರ್ವಾಸನೆ ಬರುವುದು. ಇದನ್ನು ನಾವು ನಿತ್ಯ ಜೀವನದಲ್ಲಿ ಅಭ್ಯಾಸಮಾಡತೊಡಗಿದರೆ ಜನಸಾಮಾನ್ಯದಿಂದ ದೂರವಾಗಿ ಕೈಹಿಡಿದ ಕೆಲಸವೇ ಹಾಳಾಗುವ ಸ್ಥಿತಿಗೆ ಬರುವುದು. ಯಾರು ಪ್ರಲೋಭನೆಗಳಿಗೆ ಅತೀತವಾಗಿ ಸ್ವಾರ್ಥ ಚಿಂತನೆ ಸ್ವಲ್ಪವೂ ಇಲ್ಲದೆ ಆದರ್ಶವನ್ನು ಅನುಸರಿಸುತ್ತಿರುವರೋ ಅವರು ಮಾತ್ರ ಶ್ರದ್ಧಾವಂತರಾಗಿರಬಹುದು.

ಭವಿಷ್ಯದ ಮಾರ್ಗವನ್ನು ಮಾತನಾಡುತ್ತಿದ್ದಾಗ ಅವರು ಹೀಗೆ ಹೇಳಿದರು: "ಜಾಗ್ರತರಾಗಿರಿ! ಕೆಲಸಕ್ಕೆ ಬಾರದ ಕಾಳುಕಡ್ಡಿಯಲ್ಲಿ ಪ್ರಪಂಚದ ಮೋಹಕ ವಸ್ತುಗಳಲ್ಲಿ! ಇವುಗಳನ್ನೆಲ್ಲಾ ಮೂಲದಲ್ಲೇ ಛೇದಿಸಬೇಕು. ಇವೆಲ್ಲ ಕೇವಲ ಉದ್ವೇಗಪರವಶತೆ; ಇಂದ್ರಿಯಜನ್ಯ ವಸ್ತುಗಳು. ಇವು ಬಣ್ಣ ರೂಪು ಸ್ಪರ್ಶಗಳ ಅಕಾರ ತಾಳಿ ಬರುವುವು. ಇವುಗಳನ್ನು ನಿರ್ಮೂಲಮಾಡಿ. ಇವುಗಳನ್ನು ದ್ವೇಷಿಸುವುದನ್ನು ಕಲಿಯಿರಿ. ಇವೆಲ್ಲ ವಿಷಸಮಾನ!"

ಹಿಂದೂಗಳ ಮನೆಯ ಸಾಮಾನ್ಯ ಆಚರಣೆಗಳನ್ನು ಅತಿ ಸುಂದರವಾಗಿ ಸ್ವಾಮಿಜಿ ಚಿತ್ರಿಸತೊಡಗಿದರು. ಹಿಂದೂಗಳಿಗೆ ಮಾತ್ರ ವ್ಯಕ್ತವಾದ ಗಹನ ತತ್ತ್ವಗಳು ಇವು. ಇವರಿಗೆ ಮೊದಲಿನಿಂದಲೂ ಸನ್ಯಾಸ ಸಂಸ್ಥೆಯ ಮೇಲೆ ಪ್ರೀತಿ. ಇವರಿಗೆ ಹುಡುಗರಾಗಿದ್ದಾಗ Imitation of christ ಸಿಕ್ಕಿತು. ಇದರ ಕರ್ತೃವೆಂದು ಭಾವಿಸಿದ ಜೇನ್ ಡಿ ಜರ್‌ಸನ್ ಎಂಬುವನು ಬರೆದ

ಮುನ್ನುಡಿಯಲ್ಲಿ ಸನ್ಯಾಸಿಗಳ ಮಠ ಮತ್ತು ಅಲ್ಲಿಯ ನಿಯಮಾವಳಿಗಳನ್ನು ಚಿತ್ರಿಸಿದ್ದನು. ಹುಡುಗರಾಗಿದ್ದಾಗ ಅವರ ಕಲ್ಪನೆಗೆ ಈ ಮುನ್ನುಡಿ ಅತಿ ಸುಂದರವಾಗಿತ್ತು. ಇದನ್ನು ಪದೇ ಪದೇ ಓದುತ್ತಿದ್ದರು. ಬಹು ಭಾಗ ಕಂಠಪಾಠವಾಗಿ ಹೋಯಿತು. ಇದು ಅವರ ಬಾಲ್ಯದ ಕನಸನ್ನೆಲ್ಲಾ ತುಂಬಿತುಳುಕಾಡತೊಡಗಿತು. ಕೆಲವು ವರುಷಗಳನಂತರ ತಮ್ಮ ಮಧ್ಯಮ ವಯಸ್ಸಿನಲ್ಲಿ ತಾವೇ ಇಂತಹ ಒಂದು ಸಂಸ್ಥೆಯನ್ನು ಗಂಗಾನದೀ ತೀರದಲ್ಲಿ ರೂಪಿಸುವುದಕ್ಕೆ ಯತ್ನಿಸುತ್ತಿರುವುದನ್ನು ಕಂಡು ಅವರಿಗೇ ಆಶ್ಚರ್ಯವಾಯಿತು. ಹುಡುಗರಾಗಿದ್ದಾಗ ಅವರ ಕನಸು ಭವಿಷ್ಯದ ಸೂಚನೆಯಂತೆ ಇತ್ತು.

ಸಂಪ್ರದಾಯ ಬದ್ಧತೆಯ ಅಧಿಕಾರವನ್ನಾಗಲೀ ಅಥವಾ ಶಾಂತಿಯ ಶಿಸ್ತನ್ನಾಗಲೀ ಅವರು ನನ್ನ ಮುಂದೆ ಇಡಲಿಲ್ಲ. ಸಂಸಾರದಲ್ಲಿದ್ದರೂ ತನ್ನ ದಿನಚರಿಯನ್ನು ಸ್ವತಂತ್ರವಾಗಿ ಅನುಸರಿಸುತ್ತಿರುವ ಹಿಂದೂ ವಿಧವೆಯ ಆದರ್ಶವನ್ನು ಐರೋಪ್ಯ ಶಿಷ್ಯಳ ಮುಂದೆ ಇಟ್ಟರು. ಆದರ್ಶ ಶೀಲ ವಂತೆಯೇ ಅವರ ದೃಷ್ಟಿಯಲ್ಲಿ ಸಂಪ್ರದಾಯಸ್ಥ ಬ್ರಾಹ್ಮಣ ಬ್ರಹ್ಮಚಾರಿಣಿ; ಇದನ್ನು ಉಚ್ಚರಿಸುವಾಗ ಅವರ ಧ್ವನಿಯಲ್ಲಿ ಎಂತಹ ಮಾಧುರ್ಯ ಉಕ್ಕು ತ್ತಿತ್ತು ಎಂಬುದನ್ನು ಮಾತು ಬಣ್ಣಿಸಲಾರದು.

ಒಂದು ಸಲ ಸ್ವಾಮಿಜಿ ಮೇಲಿನ ವಿಷಯವನ್ನು ಕುರಿತು ಮಾತ ನಾಡುತ್ತಿದ್ದಾಗ ಹೀಗೆ ಹೇಳಿದರು: "ನಿಮ್ಮ ಸಂಗಡದವರಿಗೆ ನಿಯಮಾವಳಿ ಗಳನ್ನು ರಚಿಸಿ. ನಿಮ್ಮ ಆದರ್ಶವನ್ನು ಅವರ ಮುಂದೆ ಇಡಿ. ಅವಕಾಶ ವಿದ್ದರೆ ಅಲ್ಲಿ ಸ್ವಲ್ಪ ವಿಶ್ವಧರ್ಮವನ್ನು ತನ್ನಿ. ಆದರೆ ಇದನ್ನು ನೆನಪಿನಲ್ಲಿಡಿ. ಪ್ರಪಂಚದಲ್ಲೆಲ್ಲಾ ಇದನ್ನೆ ಅನುಸರಿಸುವರು ಮುಂದೆ ಸಿಕ್ಕುವುದು ಕೂಡ ಕಷ್ಟವಾಗುವುದು. ಸಂಗಡಕ್ಕೆ ಯಾವಾಗಲೂ ಎಡೆಯಿರಬೇಕು, ಮತ್ತು ಅವುಗಳಿಂದ ಮೇಲೆ ಹೋಗುವುದಕ್ಕೂ ಎಡೆ ಇರಬೇಕು. ನಿಮಗೆ ಬೇಕಾದ ಸಾಮಗ್ರಿಗಳನ್ನು ನೀವೇ ತಯಾರು ಮಾಡಬೇಕಾಗಿದೆ. ಕಾನೂನುಗಳನ್ನು ಮಾಡಿ. ಆದರೆ ಜನರಿಗೆ ಅವುಗಳು ಅನವಶ್ಯಕವೆಂದು ತೋರಿದಾಗ ಅವು ಗಳನ್ನು ಮೀರಿ ಹೋಗಲು ಸಾಧ್ಯವಾಗುವಂತೆ ರಚಿಸಿ. ನಮ್ಮ ವೈಶಿಷ್ಟ್ಯತೆ ಇರುವುದೇ ಸ್ವಾತಂತ್ರ್ಯ ಮತ್ತು ವಿಧೇಯತೆಯ ಒಂದು ಅಮೋಘ ಮಿಲನ ದಲ್ಲಿ. ಮಠಗಳಲ್ಲಿಯೂ ಇದನ್ನು ಮಾಡಬಹುದು. ನನ್ನ ಪಾಲಿಗೆ ನನ್ನ ಮುಂದೆ ಯಾವಾಗಲೂ ಒಂದು ದಿಗಂತವಿದೆ."

ಈ ಸಮಯದಲ್ಲಿ ಅವರು ಬೇರೊಂದು ವಿಷಯವನ್ನು ಎತ್ತಿದ್ದರು.

ಅದರ ಮೇಲೆ ಯಾವಾಗಲೂ ಅವರಿಗೆ ಮಮತೆ, ಅದನ್ನು ಅನುಷ್ಠಾನಕ್ಕೆ ತರುವುದು ಯೋಗ್ಯ ಎಂದು ಭಾವಿಸಿದ್ದರು. "ಎರಡು ವಿಭಿನ್ನ ಜನಾಂಗ ಗಳು ಒಂದಾಗಿ ಅದರಿಂದ ಬಲವಾದ ಮತ್ತೊಂದು ಪ್ರತ್ಯೇಕ ಜಾತಿ ಉದ್ಭವಿಸುವುದು. ಇದು ಇತರರೊಡನೆ ಬೆರೆಯದೆ ಇರುವುದಕ್ಕೆ ಪ್ರಯತ್ನಿ ಸುವುದು. ಇಲ್ಲೇ ಜಾತಿಯ ಪ್ರಾರಂಭ. ಸೇಬಿನ ಮರವನ್ನು ನೋಡಿ! ಅದರಲ್ಲಿ ಒಳ್ಳೆಯ ಜಾತಿ ಎರಡು ವಿಭಿನ್ನ ಜಾತಿಯ ಸಮ್ಮಿಶ್ರಣದಿಂದ ಬರುವುದು. ಆದರೆ ಒಂದು ಸಲಿ ಅಂತಹ ಚೆನ್ನಾದ ಸೇಬಿನ ಗಿಡ ಬಂದ ಮೇಲೆ ಆ ಜಾತಿಯನ್ನು ರಕ್ಷಿಸಲು ನಾವು ಪ್ರಯತ್ನಿಸುವೆವು."

ಕೆಲವು ದಿನಗಳಾದ ಮೇಲೆ ಅವರು ಪುನಃ ಇದೇ ವಿಷಯವನ್ನು ಎತ್ತಿದರು. ಬಹಳ ಉತ್ಸಾಹದಿಂದ ಹೀಗೆ ಹೇಳಿದರು: "ಒಂದು ಬಲವಾದ ಪ್ರತ್ಯೇಕ ಜಾತಿಯ ತಳಹದಿ ಮುಂದೆ ಬರುವ ಆದರ್ಶಕ್ಕೆ ಅತ್ಯಾವಶ್ಯಕ. ಎಲ್ಲರಿಗೂ ಅನ್ವಯಿಸುವ ಆದರ್ಶವನ್ನು ಕುರಿತು ಮಾತನಾಡುವುದು ಸುಲಭ. ಆದರೆ ಕೋಟ್ಯಂತರ ವರುಷಗಳಾದರೂ ಪ್ರಪಂಚ ಅದಕ್ಕೆ ಅಣಿಯಾಗ ಲಾರದು."

"ಹಡಗು ಹೇಗಿದೆ ಎಂದು ನೀವು ತಿಳಿದುಕೊಳ್ಳಬೇಕಾದರೆ ಹಡಗು ಹೇಗಿದೆಯೊ ಹಾಗೆ ಹೇಳಬೇಕಾಗುವುದು. ಅದರ ಉದ್ದ ಅಗಲ ಆಕಾರ ಮತ್ತು ಯಾವ ವಸ್ತುವಿನಿಂದ ಆಗಿದೆ ಎಂಬುದನ್ನು ವಿವರಿಸಬೇಕು. ಒಂದು ಜನಾಂಗವನ್ನು ತಿಳಿದುಕೊಳ್ಳಬೇಕಾದರೂ ಹಾಗೆಯೇ ಮಾಡ ಬೇಕು. ಭರತಖಂಡದಲ್ಲಿ ಇರುವವರು ವಿಗ್ರಹಾರಾಧಕರು. ಭರತಖಂಡ ಹೇಗಿದೆಯೋ ಆದಕ್ಕೆ ಹಾಗೆ ಸಹಾಯಮಾಡಬೇಕಾಗಿದೆ. ಯಾರು ಇದನ್ನು ತ್ಯಜಿಸಿ ಹೋಗಿರುವರೊ ಅವರು ಯಾವ ಸಹಾಯವನ್ನೂ ಇದಕ್ಕೆ ಮಾಡಲಾರರು."

ಭರತಖಂಡದಲ್ಲಿ ಸ್ತ್ರೀಯರಿಗೆ ವಿದ್ಯಾಪ್ರಚಾರವನ್ನು ಮಾಡುವಷ್ಟು ಪ್ರಮುಖವಾದ ಸಮಸ್ಯೆ ಮತ್ತೊಂದು ಇಲ್ಲ ಎಂದು ಭಾವಿಸಿದ್ದರು. ಸ್ವಾಮಿಜಿಯವರ ಜೀವನದಲ್ಲಿ ಎರಡು ಪ್ರಮುಖವಾದ ಉದ್ದೇಶಗಳಿದ್ದುವು. ಅದರಲ್ಲಿ ಒಂದೇ ಶ್ರೀರಾಮಕೃಷ್ಣ ಸಂಸ್ಥೆಗೆ ಒಂದು ಕಟ್ಟಡವನ್ನು ಕಟ್ಟುವುದು ಮತ್ತೊಂದೇ ಸ್ತ್ರೀಯರ ಮೇಲ್ಮೆಗಾಗಿ ಏನನ್ನಾದರೂ ಕೆಲಸಮಾಡುವುದು. ಐನೂರು ಜನಗಳಿದ್ದರೆ ಭರತಖಂಡವನ್ನು ಜಯಿಸಲು ಐವತ್ತುವರುಷ

ಗಳಾಗುವುವು. ಅಷ್ಟೇ ಹೆಂಗಸರಿದ್ದರೆ ಕೆಲವು ವಾರಗಳಲ್ಲೇ ಇದನ್ನು ಸಾಧಿಸಬಹುದು ಎನ್ನುತ್ತಿದ್ದರು ಅವರು.

ವಿಧವೆಯರು ಮತ್ತು ಅನಾಥರನ್ನು ತರಬೇತಿಗೆ ಆರಿಸುವುದರಲ್ಲಿ ಜಾತಿಯನ್ನು ಸ್ವಲ್ಪವೂ ಗಮನಿಸಕೂಡದೆಂದು ಹೇಳುತ್ತಿದ್ದರು. ಆದರೆ ಯಾರನ್ನು ಆರಿಸುವೆವೊ ಅವರು ಇನ್ನೂ ಯೌವನದಲ್ಲಿರಬೇಕು, ಅಡ್ಡ ದಾರಿಗೆ ಬಿದ್ದಿರಕೂಡದು. ಜನ್ಮದಲ್ಲಿ ಏನಿಲ್ಲ, ಎಲ್ಲಾ ವಾತಾವರಣದಲ್ಲಿದೆ ಎನ್ನುತ್ತಿದರು. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ತಾಳ್ಮೆಕೆಡದಿರಬೇಕು. ಇದು ಅಕ್ಷಮ್ಯ. ಹನ್ನೆರಡುವರುಷಗಳಲ್ಲಿ ಏನಾದರೂ ಸ್ವಲ್ಪ ಪ್ರತಿಫಲ ಸಿದ್ಧಿಸಿದರೂ ಎಷ್ಟೋ ಜಯಗಳಿಸಿದಂತೆ. ಈ ಕಾರ್ಯವನ್ನು ನೆರವೇರಿಸು ವುದಕ್ಕೆ ಸುಮಾರು ಐವತ್ತು ವರುಷಗಳಾದರೂ ಹಿಡಿಯಬಹುದು.

ಕೆಲವುವೇಳೆ ಗಂಟೆ ಗಟ್ಲೆ ಒಂದು ಆದರ್ಶಶಾಲೆಯನ್ನು [ಆಕಾಶ ನಗರ!] ಕುರಿತು ಮಾತನಾಡುತ್ತಿದ್ದರು. ಅದು ಹಾಗಿರಬೇಕು, ಹೀಗಿರ ಬೇಕು ಎಂದು ಉತ್ಸಾಹದಿಂದ ವರ್ಣಿಸುತ್ತಿದ್ದರು. ಆದರೆ ಅಕ್ಷರಶಃ ಅದರ ಯಾವುದನ್ನೂ ಅನುಷ್ಠಾನಕ್ಕೆ ತರದೇ ಇದ್ದರೂ ಇವುಗಳೆಲ್ಲವೂ ಪ್ರಶಸ್ತವಾಗಿದ್ದವು. ಏಕೆಂದರೆ ತಮ್ಮ ದೃಷ್ಟಿಯಿಂದ ಯಾವ ಪ್ರತಿಫಲ ಯೋಗ್ಯ ಎಂದು ತಿಳಿದಿದ್ದರೊ ಅದನ್ನು ಪಡೆಯುವುದಕ್ಕಾಗಿ ಬೇಕಾದಷ್ಟು ಸ್ವಾತಂತ್ರ್ಯವನ್ನು ಕೊಟ್ಟಿದ್ದರು.

ನನ್ನ ಮನಸ್ಸು ಆಗ ಹಿಂದೂಧರ್ಮದ ವಿಷಯದಲ್ಲಿ ತಲ್ಲೀನವಾಗಿದ್ದು ದರಿಂದ ಸ್ವಾಮಿಜಿ ಯೋಜನೆ ಹಿಂದೆಲ್ಲ ಧಾರ್ಮಿಕ ಪ್ರಭಾವ ಇದ್ದೇ ತೀರುವುದೆಂದು ಭಾವಿಸುವುದು ಸ್ವಾಭಾವಿಕವಾಗಿತ್ತು. ಇವು ಸಾಂಪ್ರದಾ ಯಕವಾಗಿದ್ದವೇ ಹೊರತು ಪಾಂಡಿತ್ಯದಿಂದ ಕೂಡಿರಲಿಲ್ಲ. ತಮ್ಮ ಭಾವನೆ ಯನ್ನು ವ್ಯಕ್ತಪಡಿಸಲು ಇಚ್ಛಿಸುತ್ತಿದ್ದರೇ ವಿನಃ ಬೋಧಿಸುವ ರೀತಿಯಲ್ಲಿ ಇರಲಿಲ್ಲ. ಎಲ್ಲೊ ಒಮ್ಮೆ ಅವರು "ಭರತಖಂಡದ ಶ್ರೇಷ್ಠ ವಿದ್ವಾಂಸ ರನ್ನು ನಾವು ಸೃಷ್ಟಿಸಬೇಕು" ಎಂದರು. ಸ್ತ್ರೀಯರ ಲೌಕಿಕ ಶಿಕ್ಷಣದ ವಿಷಯವಾಗಿ ಅವರು ಹೇಳಿದ್ದನ್ನು ನಾನು ಕೇಳಿಯೇ ಇಲ್ಲ ಎನ್ನಬಹುದು. ಇದಕ್ಕೆ ಸಂಬಂಧಪಟ್ಟದ್ದನ್ನು ಎಷ್ಟುಮಟ್ಟಿಗೆ ಇದು ಅವರ ಜೀವನದ ಮೇಲೆ ಪ್ರಭಾವವನ್ನು ಬೀರುವುದು ಎಂಬ ದೃಷ್ಟಿಯಿಂದ ಅಳೆಯಬೇಕು ಎನ್ನು ತ್ತಿದ್ದರು. ಜ್ಞಾನ ಮತ್ತು ಸತ್ಯವನ್ನು ಕೆಳಗೆ ತರುವಂತಹ ಆದರ್ಶಕ್ಕೆ ಇವರು ಸಮ್ಮತಿಸುತ್ತಿರಲಿಲ್ಲ.

ಮನೆಯ ಹಿನ್ನೆಲೆಯ ವಾತಾವರಣದಲ್ಲಿ ಶಿಕ್ಷಣವಾಗಬೇಕು. ಇದು ಪ್ರಗತಿಗಾಮಿಯಾಗಿರಬೇಕು, ಹಿಂದೂ ಸ್ವಭಾವಕ್ಕೆ ನೈಜವಾಗಿರಬೇಕು. ಇದೇ ಸ್ವಾಮಿಜಿ ಮನಸ್ಸನ್ನೆಲ್ಲಾ ವ್ಯಾಪಿಸಿದ ಪ್ರಶ್ನೆ. ಹಿಂದಿನಿಂದ ಬಂದ ಆದರ್ಶಗಳನ್ನು ಉಳಿಸಿಡಬೇಕಾಗಿತ್ತು. ಆಧುನಿಕರ ಗೌರವಕ್ಕೆ ಅದು ಪಾತ್ರ ವಾಗುವಂತೆ ಇರಬೇಕಾಗಿತ್ತು.

ಸಮಾಜದ ನೀತಿ ಮತ್ತು ಐಕ್ಯತೆಗೆ ಭಂಗತರುವಂತಹ ಅನ್ಯ ಆದರ್ಶ ಗಳನ್ನು ಸುಲಭವಾಗಿ ಅನುಕರಿಸುವುದರಿಂದ ಸಮಾಜದ ಮೇಲೆ ಆಗುವ ದುಷ್ಪರಿಣಾಮಗಳು ಯಾವಾಗಲೂ ಸ್ವಾಮಿಜಿ ಮುಂದೆ ಇದ್ದವು. ಹಿಂದಿನ ಸಮಾಜ ಯಾವ ಆದರ್ಶದಿಂದ ಒಂದುಗೂಡಿತೊ ಅದು ಆಧುನಿಕ ಜ್ಞಾನದಿಂದ ಮತ್ತೂ ದೃಢವಾಗಬೇಕು, ಮತ್ತು ಅದನ್ನು ಪವಿತ್ರದೃಷ್ಟಿ ಯಿಂದ ನೋಡುವಂತೆ ಆಗಬೇಕು ಎಂಬುದನ್ನು ಅವರು ಸ್ವಭಾವತಃ ಅರಿತಿದ್ದರು. ಇಲ್ಲದೇ ಇದ್ದರೆ ಅಂತಹ ಜ್ಞಾನ ವಿನಾಶಹೇತು. ಆದರೆ ಬಹು ಸುಲಭವಾಗಿ ಹೊಸದು ಮತ್ತು ಹಳೆಯದನ್ನು ಒಂದುಗೂಡಿಸ ಬಹುದು ಎಂದು ಅವರು ಭಾವಿಸಲಿಲ್ಲ. ಆಧುನಿಕ ಆದರ್ಶವನ್ನು ಹಿಂದೂ ಸಮಾಜಕ್ಕೆ ಹೇಗೆ ಹೊಂದಿಸಿಕೊಳ್ಳಬೇಕು, ಹಿಂದಿನದಕ್ಕೆ ಹೇಗೆ ಒಂದು ಹೊಸರೂಪು ಕೊಡಬೇಕು, ಇದರಿಂದ ಎರಡನ್ನೂ ಹೇಗೆ ಒಂದು ಗೂಡಿಸು ವುದು ಎಂಬ ವಿಷಯವನ್ನೇ ಸ್ವಾಮಿಜಿ ಬಹುಕಾಲ ಚಿಂತಿಸುತ್ತಿದ್ದರು. ಇವುಗಳನ್ನೆಲ್ಲಾ ಒಟ್ಟಿಗೆ ಸೇರಿಸಿದಾಗ ಮಾತ್ರ ಜನಾಂಗದ ಶಿಕ್ಷಣ ಪ್ರಾರಂಭವಾಯಿತು ಎಂದು ಹೇಳಬಹುದು.

ಹಿಂದೂಗಳ ಕರ್ತವ್ಯದಲ್ಲಿ ಈಗಿನಕಾಲದ ದೇಶ ಮತ್ತು ಇತಿಹಾಸಕ್ಕೆ ತಮ್ಮ ಕರ್ತವ್ಯಗಳನ್ನು ಹೇಗೆ ಸೇರಿಸಬಹುದೆಂದು ಒಂದುದಿನ ಅವರಿಗೆ ತಕ್ಷಣ ಹೊಳೆಯಿತು. ಪಂಚಯಜ್ಞಗಳ ಭಾವನೆಮೂಲಕ ಎಂತಹ ಮಹಾಕಾರ್ಯಗಳನ್ನು ನಾವು ಸಾಧಿಸಬಹುದು ಎಂದರು ಸ್ವಾಮಿಜಿ.

ತಕ್ಷಣವೆ ಅವರಿಗೆ ಬೆಳಕು ಗೋಚರಿಸಿತು. ಆದರೆ ಅದು ಬೇಗ ಮರೆಯಾಗಲಿಲ್ಲ. ಅದೇ ಭಾವನೆಯನ್ನು ವಿವರವಾಗಿ ವರ್ಣಿಸುತ್ತಾ ಹೋದರು:

"ನೀವು ಹಿಂದಿನ ಕಾಲದ ಪಿತೃಪೂಜೆಯಿಂದ ಪರಮಪುರುಷರ ಪೂಜೆಯನ್ನು ಸೃಷ್ಟಿಸಬಹುದು. ದೇವಪೂಜೆಯಲ್ಲಿ ನೀವು ವಿಗ್ರಹ ಗಳನ್ನು ಉಪಯೋಗಿಸಲೇ ಬೇಕಾಗಿದೆ. ಆದರೆ ನೀವು ಅವುಗಳನ್ನು

ಬದಲಾಯಿಸಬಹುದು. ಕಾಳಿ ಯಾವಾಗಲೂ ಒಂದೇ ರೀತಿ ಇರಬೇಕಾಗಿಲ್ಲ. ಬೇರೆ ಬೇರೆ ರೀತಿಯಲ್ಲಿ ಅವಳನ್ನು ಚಿತ್ರಿಸುವುದಕ್ಕೆ ನಿಮ್ಮ ಹುಡುಗಿಯರಿಗೆ ಪ್ರೋತ್ಸಾಹ ಕೊಡಿ. ನೂರಾರು ಸರಸ್ವತಿಯ ಆದರ್ಶಗಳು ಇರಲಿ. ಅವರು ತಮ್ಮ ಮನಸ್ಸಿನಲ್ಲಿರುವ ಭಾವನೆಗಳನ್ನು ಚಿತ್ರಿಸಲಿ, ಮಣ್ಣಿಗೆ ಆಕಾರ ಕೊಟ್ಟು ಬಣ್ಣ ಬಳಿಯಲಿ.

"ದೇವಾಲಯದಲ್ಲಿ ದೇವಪೀಠದ ಕೊನೆಯ ಮೆಟ್ಟಲಿನ ಹತ್ತಿರ ಯಾವಾಗಲೂ ಒಂದು ಕಲಶ ನೀರಿನಿಂದ ತುಂಬಿರಬೇಕು. ಅಲ್ಲಿ ದೀಪ ಉರಿಯುತ್ತಿರಬೇಕು. ತಮಿಳು ದೇಶದಲ್ಲಿ ಬಳಸುವಂತಹ ಒಂದು ದೀಪ ಸ್ತಂಬದಲ್ಲಿ ತುಪ್ಪದಿಂದ ಹಚ್ಚಿದ ದೀಪ ಉರಿಯತ್ತಿರಲಿ. ಇದರ ಜೊತೆಗೆ ಯಾವಾಗಲೂ ಏನಾದರೂ ಅರ್ಚನೆ ಮಾಡಲು ಅವಕಾಶವಿದ್ದರೆ ಹಿಂದೂ ಗಳ ಮನಸ್ಸಿಗೆ ಇದಕ್ಕಿಂತಲೂ ಮಿಗಿಲಾದುದು ಇಲ್ಲ.

"ಆದರೆ ಬಳಕೆಗೆ ಬರುವ ಆಚಾರಗಳು ವೈದಿಕವಾಗಿರಬೇಕು. ಒಂದು ಯಜ್ಞ ವೇದಿಕೆ ಇರಬೇಕು. ಪೂಜಾಸಮಯದಲ್ಲಿ ಅಲ್ಲಿ ಬೆಂಕಿ ಇರಬೇಕು. ಅದಕ್ಕೆ ಹವಿಸ್ಸನ್ನು ಕೊಡುವಾಗ ಮಕ್ಕಳು ಭಾಗವಹಿಸ ಬೇಕು. ಇಡೀ ಭರತಖಂಡ ಈ ಆಚಾರವನ್ನು ಗೌರವಿಸಬೇಕು.

"ನಿಮ್ಮ ಸುತ್ತಲೂ ಇರುವ ಮೃಗಗಳನ್ನೆಲ್ಲಾ ಒಟ್ಟಗೆ ಸೇರಿಸಿ. ಹಸು ಪ್ರಾರಂಭದಲ್ಲಿ ಬಹಳ ಒಳ್ಳೆಯದು. ಜೊತೆಗೆ ನಾಯಿ ಬೆಕ್ಕು ಹಕ್ಕಿ ಮುಂತಾದುವೂ ಇರಲಿ. ಮಕ್ಕಳು ಇವಕ್ಕೆ ಆಹಾರ ಕೊಡುವುದಕ್ಕೆ ಇವನ್ನು ನೋಡಿಕೊಳ್ಳುವುದಕ್ಕೆ ಒಂದು ಸಮಯವಿರಲಿ.

"ಅನಂತರ ಜ್ಞಾನಯಜ್ಞವಿದೆ. ಇದೇ ಎಲ್ಲಕ್ಕಿಂತಲೂ ಸುಂದರ ವಾಗಿರುವುದು. ಭರತಖಂಡದಲ್ಲಿ ಪ್ರತಿಯೊಂದು ಪುಸ್ತಕವೂ ಪವಿತ್ರ ಎಂಬುದು ನಿಮಗೆ ಗೊತ್ತೆ? ವೇದಗಳು ಮಾತ್ರವಲ್ಲ, ಇಂಗ್ಲೀಷರಿಗೆ ಮತ್ತು ಮಹಮ್ಮದೀಯರಿಗೆ ಸೇರಿದ ಗ್ರಂಥಗಳು ಕೂಡ ಪವಿತ್ರ.

"ಹಳೆಯ ಕಲೆಗಳನ್ನು ಪುನರುಜ್ಜೀವನಗೊಳಿಸಿ. ನಿಮ್ಮ ಹೆಣ್ಣು ಮಕ್ಕಳಿಗೆ ಹಾಲುಖೋವದಿಂದ ಹಣ್ಣುಗಳಂತೆ ಮಾಡುವುದನ್ನು ಕಲಿಸಿ. ಹೊಲಿಗೆ ಮತ್ತು ಅಡಿಗೆ ಕೆಲಸವನ್ನು ಚೆನ್ನಾಗಿ ಕಲಿಸಿ. ಫೋಟೊ ತೆಗೆಯುವುದು, ಬಣ್ಣದಲ್ಲಿ ಡಿಸೈನ್ ಕತ್ತರಿಸುವುದು, ಚಿನ್ನ ಬೆಳ್ಳಿ ದಾರಗಳಲ್ಲಿ

ಕಸೂತಿ ಕೆಲಸ ಮಾಡುವುದು ಎಲ್ಲವನ್ನೂ ಬೋಧಿಸಿ. ಪ್ರತಿಯೊಬ್ಬರಿಗೂ ಸಮಯ ಬಿದ್ದರೆ ತಮ್ಮ ಜೀವನೋಪಾಯಕ್ಕೆ ಸಹಾಯಕವಾಗುವಂತಹ ಕಸಬು ಏನಾದರೂ ಗೊತ್ತಿರಲಿ. ಎಂದಿಗೂ ಮಾನವಕೋಟಿಯನ್ನು ಮರೆಯ ಬೇಡಿ. ಭರತಖಂಡದಲ್ಲಿ ಒಂದು ವಿಧದಲ್ಲಿ ನೃಯಜ್ಞವಿದೆ. ಆದರೆ ಇದಕ್ಕೆ ಸಾಕಷ್ಟು ಗಮನವನ್ನು ಕೊಟ್ಟಿಲ್ಲ. ನಿಮ್ಮ ಹೆಂಗಸರು ಇದನ್ನು ಚೆನ್ನಾಗಿ ವೃದ್ಧಿಮಾಡಲಿ. ಇದೊಂದು ಕಾವ್ಯವಾಗಲಿ, ಕಲೆಯಾಗಲಿ. ಸ್ನಾನವಾದ ಮೇಲೆ ಊಟಕ್ಕೆ ಮುಂಚೆ ಪ್ರತಿದಿನವೂ ಭಿಕ್ಷುಕರನ್ನು ಪೂಜಿಸುವುದು ನಮ್ಮ ಹೃದಯ ಮತ್ತು ಕೈಗಳಿಗೆ ಒಳ್ಳೆಯ ತರಬೇತನ್ನು ಕೊಡುತ್ತವೆ. ಕೆಲವು ದಿನಗಳು ನಿಮ್ಮ ವಿದ್ಯಾರ್ಥಿಗಳಾಗಿರುವ ಮಕ್ಕಳನ್ನೇ ಪೂಜಿಸಬಹುದು. ಅಥವಾ ನೆರೆಯ ಮನೆಯಿಂದ ಮಕ್ಕಳನ್ನು ಕರೆತಂದು ಅವಕ್ಕೆ ಸ್ನಾನ ಮಾಡಿಸಿ ತಿಂಡಿಕೊಡಬಹುದು. ಮಾತಾಜಿ ನನಗೆ ಹೀಗೆ ಹೇಳಿದರು: "ಸ್ವಾಮಿಜಿ, ನನಗೆ ಯಾವ ಸಹಾಯವೂ ಇಲ್ಲ. ಆದರೆ ನಾನು ಈ ಪವಿತ್ರ ಮಕ್ಕಳನ್ನು ಪೂಜಿಸುತ್ತೇನೆ. ಇವರೇ ನನಗೆ ಮುಕ್ತಿಯನ್ನು ನೀಡುತ್ತಾರೆ." ಆಕೆ ಮಕ್ಕಳಲ್ಲಿ ಉಮಾದೇವಿಯನ್ನು ಪೂಜಿಸುತ್ತಿರುವೆನು ಎಂದು ಭಾವಿಸು ವಳು. ಒಂದು ಶಾಲೆಯನ್ನು ಪ್ರಾರಂಭಿಸಲು ಇದೊಂದು ಒಳ್ಳೆಯ ಆಲೋಚನೆ."

ಹಳೆಯ ಮತ್ತು ಹೊಸ ಆದರ್ಶಗಳನ್ನು ಒಂದುಗೂಡಿಸಲು ಪ್ರಯತ್ನಿಸುತ್ತಿದಾಗ ಸ್ವಾಮಿಜಿಯ ಸಾನ್ನಿಧ್ಯವೇ ಆದರ್ಶದ ರಹಸ್ಯವನ್ನು ತಿಳಿದುಕೊಳ್ಳುವುದಕ್ಕೆ ಒಂದು ಕೀಲಿಕೆಯಂತೆ ಇತ್ತು. ಮಾಡಿದ ಪ್ರತಿ ಯೊಂದು ಕೆಲಸವೂ ಧ್ಯೇಯದೆಡೆಗೆ ಹೋಗುವಂತೆ ಅವರು ಮಾಡುತ್ತಿದ್ದರು. ಅತಿ ಒಡ್ಡನಿಗೂ ಹಿಂದಿನ ಆಚಾರಗಳಲ್ಲಿ ಯಾವ ಆದರ್ಶವಿದೆ ಎಂಬುದನ್ನು ಗೊತ್ತಾಗುವಂತೆ ಮಾಡುತ್ತಿದ್ದವು. ಆಧುನಿಕರು ಇವುಗಳನ್ನೆ ಈಗಿನ ಕಾಲಕ್ಕೆ ಉಪಯೋಗಿಸಿದಾಗ ಅವು ಅಷ್ಟು ಪ್ರಯೋಜನವಾಗಿ ಸ್ಪಷ್ಟವಾಗಿ ಕಂಡವು. ಭಾರತೀಯ ವಿಜ್ಞಾನಿಯೊಬ್ಬನು ಐರೋಪ್ಯ ವೈಜ್ಞಾನಿಕ ವೀರರಿಗೆ, ವಿಜ್ಞಾನಕ್ಕಾಗಿ ಪ್ರಾಣತೆತ್ತವರಿಗೆ, ತೋರುವ ಗೌರವದಲ್ಲಿ ಹಿಂದಿನಕಾಲದ ಋಷಿಯಜ್ಞದ ಆಧುನಿಕ ರೀತಿ ಇದೆ — ಯಾವ ವಿಧವಾದ ಪ್ರಾಪಂಚಿಕ ಲಾಭಗಳನ್ನೂ ಇಚ್ಛಿಸದೆ ಕೇವಲ ಜ್ಞಾನಕ್ಕಾಗಿ ಜ್ಞಾನವನ್ನು ಉಪಾಸನೆ ಮಾಡುವುದರಲ್ಲಿ ಹಿಂದೆ ಜ್ಞಾನಯೋಗದಲ್ಲಿ ನಿಷ್ಠವಾದ ಜನಾಂಗದ

ಹಿರಿಮೆಯನ್ನು ನೋಡುವೆವು. ಐಶ್ವರ್ಯ ಕೀರ್ತಿಗಳನ್ನು ಸ್ವಲ್ಪವೂ ಗಮನಿಸದೆ ಕೆಲಸಮಾಡುವುದು ಸನ್ಯಾಸಿ ಇದ್ದಂತೆಯೆ ಆತ, ಪೌರನಾಗಿರಲಿ ಮನೆಯಲ್ಲಿ ಗೃಹಸ್ಥನ ಪಾತ್ರದಲ್ಲಿ ನಿರತನಾಗಿರಲಿ.

ಅವರ ಜೀವನದಲ್ಲಿ ಭವ್ಯವಾದುದೆಲ್ಲ ಧೀರವಾದುದೆಲ್ಲ ಮೈವೆತ್ತಂತೆ ಇದ್ದವು. ಆಗಲೆ ವ್ಯಕ್ತವಾದ ಆದರ್ಶದ ಒಂದು ಜ್ವಲಂತ ಉದಾಹರಣೆಯಂತೆ ಇದ್ದರು ಸ್ವಾಮಿಜಿ. ಆದರೆ ತಾವು ಹೀಗೆ ಇದ್ದೆ ಎಂದು ಅವರಿಗೇ ಗೊತ್ತಿರಲಿಲ್ಲ. ಆದರೂ ಕೂಡ ಒಬ್ಬ ಊಹಿಸುವಂತೆ ಸ್ವಾಮಿಜಿ ಅವರಲ್ಲಿ ಒಂದು ಆದರ್ಶವನ್ನು ಚೆನ್ನಾಗಿ ವಿವರಿಸಬಲ್ಲ ಶಕ್ತಿಸಾರವೆ ಇದ್ದಿತು. ಅವರು ಶಿಕ್ಷಣದ ವಿಷಯವಾಗಿ ಕೊಡುತ್ತಿದ್ದ ಸಲಹೆಗಳು ಅನೇಕವೇಳೆ ನನಗೇ ಆಶ್ಚರ್ಯವಾಗುತ್ತಿದ್ದವು. ಅವರು ಹರ್‌ಬರ್ಟ್ ಸ್ಪೆನ್ಸರ್ ಬರೆದಿರುವ ಶಿಕ್ಷಣ ಎಂಬ ಪುಸ್ತಕವನ್ನು ಭಾಷಾಂತರಿಸುವುದಕ್ಕೆ ಪ್ರಯತ್ನಪಟ್ಟಿದ್ದರು. ಇದರಿಂದ ವಿಷಯದ ಮೇಲೆ ಅಭಿರುಚಿ ಹುಟ್ಟಿ ಇದಕ್ಕೆ ಸಂಬಂಧಪಟ್ಟ ಗ್ರಂಥಗಳನ್ನೆಲ್ಲಾ ಓದಲು ಪ್ರಾರಂಭಿಸಿದರು. ಕೊನೆಗೆ ಪೆಸ್ಟೋಲಜಿ ಎಂಬುವನ ಗ್ರಂಥವನ್ನು ಕೂಡ ಆವಶ್ಯಕವಿಲ್ಲದೇ ಇದ್ದರೂ ಓದಿದ್ದರು. ಇದನ್ನೆಲ್ಲಾ ಕೇಳಿದರೂ ಸ್ವಾಮಿಜಿ ವಿದ್ಯಾಭ್ಯಾಸದ ತತ್ತ್ವಮೇಲೆ ಕೊಡುತ್ತಿದ್ದ ಸಲಹೆಗೆ ಇವು ಮಾತ್ರವೇ ಸಹಾಯಮಾಡಿದೆ ಎಂದು ನಾನು ನಂಬಲಾಗಲಿಲ್ಲ.

ಹಿಂದೂ ಮಾನಸಿಕದೃಷ್ಟಿಯಲ್ಲಿ ಆಗಲೆ ಚೆನ್ನಾಗಿ ಪಳಗಿರುವನು. ಅವನ ಮುಂದೆ ಆಗಲೇ ಧಾರ್ಮಿಕಜೀವನದ ಮೂಲಕ ಒಂದು ಮಾನಸಿಕ ಏಕಾಗ್ರತೆಯ ಆದರ್ಶವಿರುವುದು. ಆದಕಾರಣ ಅವನು ಶಿಕ್ಷಣರಂಗವನ್ನು ಪೂರ್ಣಭಾವಿಯಾಗಿ ಸಿದ್ಧನಾಗಿ ಪ್ರವೇಶಿಸುವನು. ಶಿಕ್ಷಣಕ್ಕೆ ಸಂಬಂಧಪಟ್ಟ ವೈಜ್ಞಾನಿಕ ನಿಯಮಾವಳಿಗಳ ಕೇಂದ್ರವೇ ಅವನಲ್ಲಿ ಎಂದಾದರೊಮ್ಮೆ ದೊರಕಬಹುದು. ಇಂತಹ ಒಂದು ಗುರಿಯನ್ನು ಮುಟ್ಟಬೇಕಾದರೆ ಈಗಿರುವ ಶಿಕ್ಷಣ ತತ್ತ್ವಗಳು ಅದಕ್ಕೆ ಸಹಕಾರಿ ಎಂದು ಅರಿಯುವುದೇ ಪ್ರಥಮ ಮೆಟ್ಟಲು. ಭಾರತೀಯ ಶಿಕ್ಷಕರು ವಿವೇಕಾನಂದರ ಆದರ್ಶವನ್ನು ಪೂರ್ಣ ಮಾಡಬೇಕಾಗಿದೆ, ಅದನ್ನು ಅಭಿವೃದ್ಧಿಗೊಳಿಸಬೇಕಾಗಿದೆ. ಅದನ್ನು ಸಾಧಿಸಿದರೆ ಸ್ವಾಮಿಜಿಯವರಲ್ಲಿ ಅಗ್ರವಿಷಯಗಳಮೇಲೆ ಇದ್ದ ಗೌರವದ ಜೊತೆಗೆ ಅವರಲ್ಲಿ ಭವಿಷ್ಯ ಜನಾಂಗದ ಮೇಲೆ ಇದ್ದ ಭರವಸೆ ಮತ್ತು ಧೈರ್ಯಗಳನ್ನು ಸೇರಿಸಬೇಕು. ಮತ್ತು ಜ್ಞಾನವೆಲ್ಲ ಪವಿತ್ರ ಎಂಬ

ಅವರ ಭಾವನೆಯನ್ನೂ ಸೇರಿಸಬೇಕು. ಆಗ ಭಾರತೀಯ ಸ್ತ್ರೀಯರು ಜಗದ ನಾರಿಯರೊಂದಿಗೆ ಗೌರವ ಸ್ಥಾನವನ್ನು ಪಡೆಯುವ ಕಾಲ ಕ್ಷಿಪ್ರದಲ್ಲಿಯೇ ಬರುವುದು.



೨೨

## ಸನ್ಯಾಸಿ ಮತ್ತು ಗೃಹಸ್ಥ

ಸ್ವಾಮಿಜಿಗೆ ಅವರ ಸನ್ಯಾಸವ್ರತ ಅತಿ ಪ್ರಶಸ್ಥವಾಗಿತ್ತು. ಅವರಿಗಾಗಲಿ ಅಥವಾ ಯಾವ ನಿಜವಾದ ಸನ್ಯಾಸಿಗಾಗಲಿ, ಮದುವೆ ಅಥವಾ ಅದಕ್ಕೆ ಸಂಬಂಧಿಸಿದ ಯಾವುದಾದರೂ ಆಗಲಿ ಒಂದು ಮಹಾಪರಾಧ— ಈ ಭಾವನೆಯ ನೆನಪಿಗೂ ಅತೀತವಾಗಿ ಹೋಗುವುದು ಅವರ ಗುರಿಯಾಗಿತ್ತು. ತಾವು ಮತ್ತು ಈ ವ್ರತವನ್ನು ಸ್ವೀಕರಿಸಿದ ಇತರರನ್ನು ಈ ಪಾಶಕ್ಕೆ ಬೀಳದಂತೆ ನೋಡಿಕೊಳ್ಳುವುದು ಮುಖ್ಯ ಆಶಯವಾಗಿತ್ತು. ಮದುವೆಯಾಗದಿರುವುದನ್ನು ಸ್ವಾಮಿಜಿ ಆಧ್ಯಾತ್ಮಿಕ ದೃಷ್ಟಿಯಿಂದ ಒಂದು ದೊಡ್ಡ ಪ್ರಯೋಜನ ಎನ್ನುತ್ತಿದ್ದರು. ಇವುಗಳನ್ನೆಲ್ಲಾ ನೋಡಿದರೆ ಸನ್ಯಾಸ ಧರ್ಮವನ್ನು ಸರಿಯಾಗಿ ಪರಿಪಾಲಿಸುವುದು ಮಾತ್ರವಲ್ಲ, ಇದಕ್ಕೆ ಚ್ಯುತಿತರುವ ಆತಂಕಗಳಿಂದ ಪಾರುಮಾಡುವುದು ಕೂಡ ಅವರ ಉದ್ದೇಶವಾಗಿತ್ತು. ತಮ್ಮ ಜೀವನದ ದೃಷ್ಟಿಯಿಂದ ಎಷ್ಟೇ ಆವಶ್ಯಕವಾದರೂ ಇದಕ್ಕೆ ಸಂಬಂಧಪಟ್ಟ ನಿಯಮಗಳನ್ನು ಅವರು ವ್ಯಕ್ತಗೊಳಿಸಲು ಬಹಳ ಕಾಲ ತೆಗೆದುಕೊಂಡರು.

ಸ್ವಾಮಿಜಿ ಅಂಜುತ್ತಿದ್ದುದು ಸ್ತ್ರೀಯನ್ನಲ್ಲ ಕಾಮವನ್ನು ಎಂಬುದನ್ನು ನಾವು ಚೆನ್ನಾಗಿ ಗಮನಿಸಬೇಕು. ಏಕೆಂದರೆ ಪ್ರಪಂಚದಲ್ಲೆಲ್ಲ ಸ್ವಾಮಿಜಿಗೆ ಸ್ತ್ರೀಯರಲ್ಲೇ ಅನೇಕ ಶಿಷ್ಯರು ಸಹಾಯಕರು ಸ್ನೇಹಿತರು ಬೇಕಾದಷ್ಟು ಮಂದಿ ಇದ್ದರು. ಇವರೊಂದಿಗೆಲ್ಲ ಇಂಡಿಯಾ ದೇಶದ ಹಳ್ಳಿಗಳ ಕಡೆ ಇದ್ದಂತೆ ಸಂಬಂಧ ಬೆಳೆಸಿದ್ದರು. ಹಲವು ಕಡೆ ಅವರನ್ನು ತಂಗಿಯರು ಎಂದು ಕರೆಯುತ್ತಿದ್ದರು. ಮತ್ತೊಂದು ಕಡೆ ತಾಯಿ ಎಂದು ಕರೆಯುತ್ತಿದ್ದರು. ಇನ್ನೊಂದು ಕಡೆ ಮಗಳು ಎಂದು ಕರೆಯುತ್ತಿದ್ದರು. ಅವರಲ್ಲಿದ್ದ ಸೌಜನ್ಯ, ಕೆಲಸಕ್ಕೆ ಬಾರದ ಕೆಲವು ಬಾಹ್ಯ ಆಚಾರಗಳನ್ನು ಅವರು ಗಮನಿಸದೆ ಇದ್ದುದು, ಇವನ್ನೆಲ್ಲಾ ಸ್ವಾಮಿಜಿ ಕೆಲವು ವೇಳೆ ತುಂಬಾ ಮೆಚ್ಚುತ್ತಿದ್ದರು. ಏಕೆಂದರೆ ಸ್ವಾಮಿಜಿ ಉತ್ತಮಪುರುಷನಂತೆ ಸ್ತ್ರೀಯರಲ್ಲಿರುವ ಒಳ್ಳೆಯ ಗುಣ ಮತ್ತು ಶಕ್ತಿಕಡೆ ನೋಡುತ್ತಿದ್ದರೆ ಹೊರತು ಕೆಲಸಕ್ಕೆ ಬಾರದ ನಿಷ್ಪ್ರಯೋಜನ ವಸ್ತುಗಳ ಕಡೆ ನೋಡುತ್ತಿರಲಿಲ್ಲ. ಅಮೆರಿಕಾದಲ್ಲಿದ್ದಂತೆ ಹೆಂಗಸರು ದೋಣಿ ನಡೆಸುವುದು ಈಜುವುದು,

ಆಟದಲ್ಲಿ ಭಾಗವಹಿಸುವುದು ಇವನ್ನೆಲ್ಲಾ ನೋಡಿ ಸ್ವಾಮಿಜಿ ಸಂತೋಷ ಪಡುತ್ತಿದ್ದರು. ಒಂದು ಸಲಿಯಾದರೂ ಆ ಹುಡಿಗಿಯರು ತಾವು ಗಂಡು ಹುಡುಗರಲ್ಲ ಎಂಬುದನ್ನು ಚಿಂತಿಸುವಂತೆಯೇ ಕಾಣುತ್ತಿರಲಿಲ್ಲ. ಇಂತಹ ಸ್ತ್ರೀಯರಲ್ಲಿಯೂ ವ್ಯಕ್ತವಾಗುತ್ತಿದ್ದ ಪವಿತ್ರತೆಯ ಆದರ್ಶವನ್ನು ಅವರು ಪೂಜ್ಯ ದೃಷ್ಟಿಯಿಂದ ನೋಡುತ್ತಿದ್ದರು.

ಸನ್ಯಾಸ ಶಿಕ್ಷಣದಲ್ಲಿ ಒಬ್ಬ ತಾನು ಗಂಡಸು ಅಥವಾ ಹೆಂಗಸು ಎಂಬ ಭಾವದಿಂದ ಪಾರಾಗುವುದು ಅತ್ಯಾವಶ್ಯಕ ಎಂಬುದನ್ನು ಅವರು ಪದೇ ಪದೇ ಹೇಳುತ್ತಿದ್ದರು. ಏಕೆಂದರೆ ಆದರ್ಶ ಲಿಂಗಾತೀತವಾದುದು. ಯಾವುದಾದರೂ ಆಗಲಿ, ಮರ್ಯಾದೆಯಾದರೂ ಅದನ್ನು ಕೇವಲ ಲಿಂಗದದೃಷ್ಟಿಯಿಂದ ಮಾಡಿದರೆ ಸ್ವಾಮಿಜಿಗೆ ಹಿಡಿಸುತ್ತಿರಲಿಲ್ಲ. ಪಾಶ್ಚಾತ್ಯದೇಶದಲ್ಲಿ ಯಾವುದನ್ನು Chivalry ಎನ್ನುವರೊ ಅದು ಹೆಂಗಸಿಗೆ ಒಂದು ಅಪಮಾನ ಎಂದು ಭಾವಿಸಿದ್ದರು. ಕೆಲವು ಬರಹಗಾರರು ಸ್ತ್ರೀಯರ ಜ್ಞಾನ ಅಷ್ಟು ಸ್ಪಷ್ಟವಾಗಿರಬೇಕಾಗಿಲ್ಲ, ಅಥವಾ ಪುರುಷ ಅಷ್ಟೊಂದು ಸಹಾನುಭೂತಿಯನ್ನೂ ತೋರಬೇಕಾಗಿಲ್ಲ ಎಂಬುದು ಸ್ವಾಮಿಜಿ ದೃಷ್ಟಿಗೆ ಒಂದು ನೀಚ ವರ್ತನೆಯಾಗಿ ಕಂಡಿತು. ದೈಹಿಕ ರಚನೆಯಿಂದ ಯಾವ ಯಾವ ಅನಾನುಕೂಲಗಳನ್ನು ದುರ್ದಮ್ಯ ಮಾನವ ಶಕ್ತಿಯು ಮೇಲೆ ಹೊರಿಸಿದೆಯೊ ಅದರಿಂದ ಪಾರಾಗುವುದೇ ಎಲ್ಲರ ಕರ್ತವ್ಯ.

ನಿರ್ಜನಪ್ರಿಯತೆ ತಪಸ್ಯೆ ಮತ್ತು ಏಕಾಗ್ರತೆಯೇ ಬ್ರಹ್ಮಚರ್ಯ ಜೀವನದ ಆದರ್ಶ. ನಮ್ಮ ನಾಡಿಯೊಳಗೆ ಬ್ರಹ್ಮಚರ್ಯ ಬೆಂಕಿಯಂತೆ ಉರಿಯುತ್ತಿರಬೇಕು ಎಂದರು ಸ್ವಾಮಿಜಿ. ವಿದ್ಯಾರ್ಥಿದೆಸೆಯಲ್ಲಿದ್ದಾಗ ಓದಬೇಕಾದ ವಿಷಯಗಳ ಮೇಲೆ ಚಿತ್ತವನ್ನು ಏಕಾಗ್ರಗೊಳಿಸುವುದು ಕೂಡ ಸಮಷ್ಟಿಗಾಗಿ ವ್ಯಷ್ಟಿಯನ್ನು ಧಾರೆ ಎರೆದಂತೆ. ಇದನ್ನೇ ನಾವು ಎಲ್ಲಾ ಮಹಾಪುರುಷರಲ್ಲಿಯೂ ನೋಡುತ್ತೇವೆ. ಈ ದೃಷ್ಟಿಯಿಂದಲೇ ರಾಬಸ್ ಪಿಯರಿನಲ್ಲಿದ್ದ ರೌದ್ರಪ್ರಿಯತೆಯನ್ನು ಸ್ವಾಮಿಜಿ ಮೆಚ್ಚುತ್ತಿದ್ದರು. ಸರಸ್ವತಿಯ ಉಪಾಸನೆ ಎಂದರೆ ಏಕಾಂತಪ್ರಿಯತೆ ಮತ್ತು ಬ್ರಹ್ಮಚರ್ಯಾನುಷ್ಠಾನ. ಇದು ತನು ಮನ ಹೃದಯಕ್ಕೆ ಸಂಬಂಧಪಟ್ಟ ಯಾವ ಕೆಲಸವನ್ನು ಚೆನ್ನಾಗಿ ಮಾಡಬೇಕಾದರೂ ಅತ್ಯಾವಶ್ಯಕ ಎಂದು ಸ್ವಾಮಿಜಿ ಹೃತ್ಪೂರ್ವಕ ನಂಬಿದ್ದರು. ಭರತಖಂಡದಲ್ಲಿ ಇದನ್ನು ಹಿಂದಿನಿಂದಲೂ ಮನಗಂಡಿದ್ದರು. ಇದು ವೀರನ ತರಬೇತಿಗೆ ಒಂದು ಮುಖ್ಯ ಅಂಗವಾಗಿತ್ತು.

ಒಬ್ಬ ತನ್ನ ಸರ್ವಶಕ್ತಿಯನ್ನು ಈ ಆದರ್ಶಕ್ಕೆ ಉಪಯೋಗಿಸಬೇಕು. ಇದು ಬಹಳ ಮುಖ್ಯ. ಆಗ ಮಾತ್ರ ಇತರರು, ದರ್ಶನ ಪ್ರತಿಭೆ ಅತೀಂದ್ರಿಯ ಚಮತ್ಕಾರ ಎನ್ನುವ ಮನಸ್ಸಿಗೆ ಅತೀತವಾದ ಸತ್ಯ ಗೋಚರವಾಗುವುದು. ಇಂತಹ ಪ್ರತಿಭೆ, ಕಲೆ ವಿಜ್ಞಾನ ಧರ್ಮಕ್ಷೇತ್ರದ ಶ್ರೇಷ್ಠ ವಸ್ತುಗಳಿಗೆಲ್ಲ ಅತ್ಯವಶ್ಯಕ. ಸ್ವಾರ್ಥಕ್ಕಾಗಿ ಮತ್ತು ಅಧರ್ಮದ ರೀತಿಯಲ್ಲಿ ಯಾರು ತಮ್ಮ ಶಕ್ತಿಯನ್ನು ವ್ಯರ್ಥಗೊಳಿಸುತ್ತಿರುವರೋ ಅವರೆಂದಿಗೂ ಮಡೋನ ಚಿತ್ರವನ್ನು ಚಿತ್ರಿಸುವುದಕ್ಕೆ ಆಗುತ್ತಿರಲಿಲ್ಲ. ಧರ್ಮಜೀವನದಲ್ಲಿ ಯಾವ ಶ್ರದ್ಧಾಭಕ್ತಿಗಳು ಇರಬೇಕೋ ಅದೇ ಪೌರ ಜೀವನದಲ್ಲಿಯೂ ಇರಬೇಕು. ಬ್ರಹ್ಮಚರ್ಯವ್ರತಧಾರಣ ಎಂದರೆ ಬಹು ಜನರ ಹಿತಕ್ಕೆ ತನ್ನ ಸುಖವನ್ನು ತ್ಯಜಿಸುವುದು. ನಿಜವಾದ ಪೌರುಷ ಇಂದ್ರಿಯ ನಿಗ್ರಹಿಗೆ ಮಾತ್ರ ಸಾಧ್ಯ ಎಂಬುದನ್ನು ಅವರು ಮನಗಂಡರು. ಒಬ್ಬ ಯಾವ ಮಾರ್ಗದಲ್ಲಾದರೂ ಕೀರ್ತಿಯನ್ನು ಗಳಿಸಿದ್ದರೆ ಅದು ತನ್ನ ಕೀಳು ಪ್ರವೃತ್ತಿಯ ನಿಗ್ರಹದಿಂದ ಮಾತ್ರ ಸಾಧ್ಯ. ಕೊನೆಗೆ ಮಹಾಸನ್ಯಾಸಿಯಾದವನಲ್ಲಿ ಮಹಾಕರ್ಮ ಯೋಗಿಯ ಮತ್ತು ಉತ್ತಮ ಪೌರನ ಗುಣಗಳೂ ಸುಪ್ತಾವ್ಯಸ್ಥೆಯಲ್ಲಿವೆ. ಇದಕ್ಕೆ ವಿಪರ್ಯವಾದಂತಿರುವ ಮತ್ತೊಂದು ಆದರ್ಶವೇ ಸತೀತ್ವ ಮತ್ತು ಪೌರ. ಎಲ್ಲಿ ಒಳ್ಳೆಯ ಸನ್ಯಾಸಿನಿಗಳು ಇರಬಲ್ಲರೋ ಅಲ್ಲಿ ಮಾತ್ರ ಒಳ್ಳೆಯ ಗೃಹಿಣಿ ಸಾಧ್ಯ. ಎಲ್ಲಿ ಒಳ್ಳೆಯ ಸನ್ಯಾಸಿಗಳು ಇರಬಲ್ಲರೋ ಅಲ್ಲಿ ಮಾತ್ರ ಶ್ರೇಷ್ಠ ಪೌರನ ಆದರ್ಶ ಸಾಧ್ಯ ಎಂಬುದು ಕೂಡ ಅವರಿಗೆ ಸ್ಪಷ್ಟವಾಗಿ ವಿಹಿತವಾಗಿತ್ತೋ ಏನೋ ನನಗೆ ಗೊತ್ತಿಲ್ಲ. ಇವರು ತಾವೇ ಯತಿ ಗಳಾಗಿದ್ದುದರಿಂದ, ಯತಿ ಆದರ್ಶನದ ಅನುಷ್ಠಾನದಲ್ಲಿ ತನ್ಮಯರಾಗಿದ್ದು ದರಿಂದ, ಹಿಂದಿನ ಆದರ್ಶವನ್ನು ವ್ಯಕ್ತಗೊಳಿಸಲು ಸಾಧ್ಯವಾಗದೆ ಇದ್ದಿರ ಬಹುದು. ಎಲ್ಲೋ ಕೆಲವು ವೇಳೆ ಮಾತ್ರ ಒಮ್ಮೊಮ್ಮೆ ವ್ಯಕ್ತಗೊಳಿಸು ತ್ತಿದ್ದರು. ಆದರೆ ತಮ್ಮ ಜೀವನದ ಕೊನೆಯಲ್ಲಿ ಇದನ್ನು ಸ್ಪಷ್ಟವಾಗಿ ವಿವರಿಸಿರುವರು. ಒಮ್ಮೆ ಅವರು ಹೀಗೆ ಹೇಳಿದರು: "ನಿಜ, ಕೆಲವು ಬಗೆಯ ಸ್ತ್ರೀಯರು ಇರುವರು. ಅವರ ಸಾನ್ನಿಧ್ಯವೇ ಪುರುಷರನ್ನು ದೇವರ ಕಡೆಗೆ ಒಯ್ಯುವಂತೆ ಮಾಡುವುದು. ಆದರೆ ಮತ್ತೆ ಕೆಲವರು ಇರುವರು, ಅವರು ಪುರುಷರನ್ನು ಪ್ರಪಂಚದ ಕೂಪಕ್ಕೆ ಸೆಳೆದುಕೊಂಡು ಹೋಗುವರು."

ಸ್ವಾಮಿಜಿ ಸಮೀಪದಲ್ಲಿದ್ದಾಗ ಪ್ರೀತಿಸುವ ವ್ಯಕ್ತಿಯನ್ನು ತನ್ನ ಸ್ವಾರ್ಥ ಕ್ಕಾಗಲಿ, ತನ್ನ ಇಚ್ಛಾನುಸಾರ ನಡೆಯುವಂತೆ ಬಲಾತ್ಕರಿಸುವುದಕ್ಕಾಗಲೀ,

ಅಥವಾ ತನ್ನ ಹಿತಕ್ಕೆ ಆ ವ್ಯಕ್ತಿಯನ್ನು ಉಪಯೋಗಿಸಿಕೊಳ್ಳುವುದನ್ನಾಗಲೀ ಚಿಂತಿಸುವುದಕ್ಕೂ ಆಗುತ್ತಿರಲಿಲ್ಲ. ಇದರ ಬದಲು ಪ್ರೀತಿ ನಿಜವಾದ ಪ್ರೀತಿಯಾಗಬೇಕಾದರೆ ಹೃತ್ಪೂರ್ವಕ ಆ ವ್ಯಕ್ತಿಯನ್ನು ಆಶೀರ್ವದಿಸಬೇಕು, ಪ್ರತಿಫಲವನ್ನು ಯೋಚಿಸದೆ ಉಚಿತವಾಗಿ ಕೊಟ್ಟ ದಾನದಂತೆ ಇರಬೇಕು. ಆಸಕ್ತಿಯಿಲ್ಲದೆ ಪ್ರೀತಿಸಬೇಕು ಎಂದು ಇವರು ಅನೇಕ ವೇಳೆ ಹೇಳುತ್ತಿದ್ದುದರ ಅರ್ಥ ಇದು. ಒಂದು ಸಲ ಅವರು ತಮ್ಮ ಪ್ರಯಾಣವನ್ನು ಮುಗಿಸಿಕೊಂಡು ಬಂದವರು ನಮ್ಮಲ್ಲಿ ಕೆಲವರಿಗೆ ಹೀಗೆ ಹೇಳಿದರು: "ಅನಾಸಕ್ತರಾಗಿರುವುದು ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ಆಸಕ್ತರಾಗಿರುವುದು. ತಕ್ಷಣ, ಹೃತ್ಪೂರ್ವಕ, ಸಂಪೂರ್ಣ ಇದನ್ನು ನಾವು ಮಾಡಬಲ್ಲವರಾಗಬೇಕು. ಒಂದು ಮತ್ತೊಂದಕ್ಕೆ ಪೋಷಕ ಯಾವಾಗಲೂ." "ಪ್ರೇಮ ಯಾವಾಗಲೂ ಆನಂದದ ಒಂದು ಆವಿರ್ಭಾವ. ಅಲ್ಲಿ ಸ್ವಲ್ಪ ವ್ಯಥೆಯ ಛಾಯೆ ಕಂಡರೂ ಅದು ದೈಹಿಕವಾದುದು, ಅಲ್ಲಿ ಸ್ವಾರ್ಥತೆ ಇದೆ" ಎಂದರು ಸ್ವಾಮಿಜಿ ಒಮ್ಮೆ ಇಂಗ್ಲೆಂಡಿನಲ್ಲಿ.

ಅಶಲೀಲ ಸಾಹಿತ್ಯ ಮತ್ತು ಅಧೋಗತಿಗೆ ಇಳಿದ ಕಲೆಯನ್ನು ಅವರು ನಿಕೃಷ್ಟ ದೃಷ್ಟಿಯಿಂದ ನೋಡುತ್ತಿದ್ದರು. ಇಂತಹ ಜನ ಮಾನವರನ್ನು ತಮ್ಮ ಸ್ವಾಧೀನದಲ್ಲಿ ಇಟ್ಟುಕೊಳ್ಳುವ ಒಂದು ದೇಹ ಎಂದು ಮಾತ್ರ ಮುಖ್ಯವಾಗಿ ಚಿತ್ರಿಸುವರು. ನಿತ್ಯಸ್ವತಂತ್ರವಾಗಿರುವ ಆತ್ಮ ಮತ್ತು ಮನಸ್ಸು ಇವರಿಗೆ ಗೌಣ. ಪಾಶ್ಚಾತ್ಯ ಆದರ್ಶದ ಬಹುಪಾಲು ದೇಹ ಭಾವನೆಯಿಂದ ಕಲುಷಿತವಾಗಿದೆ. ಇದನ್ನೆ ಸ್ವಾಮಿಜಿ ನಾರುವ ಹೆಣವನ್ನು ಹೂವಿನಿಂದ ಮುಚ್ಚಿದಂತೆ ಎಂದು ಹೇಳುತ್ತಿದ್ದರು.

ಪೌರಾತ್ಯ ರೀತಿಯಲ್ಲಿ ಸತಿಯ ಆದರ್ಶ ಏಕಪತಿಯಲ್ಲಿ ಮಾತ್ರ ವ್ರತಳಾಗಿರುವುದು. ಪಾಶ್ಚಾತ್ಯ ದೇಶಗಳ ಆಚಾರವನ್ನು ಅವರು ಬಹು ಪತಿಯರನ್ನು ಪಡೆದ ಸತಿಯರೆಂದು ಭಾವಿಸಿದ್ದರೂ ಇರಬಹುದು. ಏಕೆಂದರೆ ಇಂತಹ ದೇಶದಲ್ಲಿ ಕೂಡ ತಮ್ಮ ದೇಶದ ಪತಿವ್ರತರಾಗಿದ್ದಂತಹ ಸ್ತ್ರೀಯರನ್ನು ನೋಡಿರುವೆ ಎಂದು ಸ್ವಾಮಿಜಿ ಹೇಳುವರು. ಸ್ವಾಮಿಜಿ ಮಲಬಾರಿನಲ್ಲಿ ಸಂಚರಿಸಿದ್ದರೇ ವಿನಃ ಟಿಬೆಟ್ಟಿನಲ್ಲಿ ಇಲ್ಲ. ಯಾವುದನ್ನು ಮಲಬಾರಿನಲ್ಲಿ ಬಹುಪತೀತ್ವ ಎಂದು ಹೇಳುತ್ತಾರೆಯೋ ಅದು ತಾಯಿ ಪ್ರಮುಖವಾಗಿರುವ ಮನೆಯಲ್ಲಿ ಆದ ಮದುವೆ. ಗಂಡ ಹೆಂಡತಿಯ ಮನೆಗೆ ಬರುತ್ತಾನೆ. ಮದುವೆ ಎಂದೆಂದಿಗೂ ಸಂಗರಹಿತವಾಗಿ ಇರಬಹುದು.

ಭರತಖಂಡದ ಇತರಕಡೆಗಳಲ್ಲಿ ಬಳಕೆಯಲ್ಲಿರುವಂತೆ ಅಲ್ಲ. ಇಬ್ಬರು ಪುರುಷರನ್ನೂ ಏಕಕಾಲದಲ್ಲಿ ಸರಿಸಮಾನತೆಯಿಂದ ಸ್ತ್ರೀ ಬರಮಾಡಿಕೊಳ್ಳುವುದಿಲ್ಲ. ಹೇಗಾದರೂ ಇರಲಿ ಸ್ವಾಮಿಜಿ ಬಾಹ್ಯ ಆಚಾರಗಳನ್ನು ಅಷ್ಟು ಲೆಕ್ಕಿಸುತ್ತಿರಲಿಲ್ಲ. ಇದನ್ನೆ ಮಾಡಬೇಕು, ಇದನ್ನು ಮಾಡಬಾರದು ಎಂಬುದು ಮಾನವಕೋಟಿಗೆ ಎಂದೆಂದಿಗೂ ಆತಂಕ ಬರಲಾರದು. ಯಾವ ಜನಾಂಗವಾಗಲಿ, ಯಾವ ದೇಶವಾದರೂ ಆಗಲಿ ಕೆಲವು ವ್ಯಕ್ತಿಗಳ ಮೂಲಕ ಆದರ್ಶ ದೇದೀಪ್ಯಮಾನವಾಗಿ ಬೆಳಗಬಲ್ಲದು ಎಂದು ಸ್ವಾಮಿಜಿಗೆ ಗೊತ್ತಿತ್ತು.

ಸ್ವಾಮಿಜಿ ಯಾವ ಸಮಾಜದ ಆದರ್ಶವನ್ನೂ ಧಿಃಕರಿಸುತ್ತಿರಲಿಲ್ಲ. ನಾನು ಇಂಗ್ಲೆಂಡಿಗೆ ೧೮೯೯ರಲ್ಲಿ ಪುನಃ ಹಿಂತಿರುಗಿದಾಗ ಸ್ವಾಮಿಜಿ ನನಗೆ ಪಾಶ್ಚಾತ್ಯದೇಶಗಳಲ್ಲಿ ಇರುವತನಕ ಪಾಶ್ಚಾತ್ಯ ಆದರ್ಶವನ್ನೇ ಅನುಸರಿಸಬೇಕು ಎಂದರು. ಅಮೆರಿಕಾ ಅಥವಾ ಯೂರೋಪಿನಲ್ಲಿ ಮದುವೆ ಆದವರು ಆಗದೆ ಇರುವವರಿಗಿಂತ ಏನುಕಡಿಮೆ ಪವಿತ್ರವಾಗಿರಲಿಲ್ಲ ಸ್ವಾಮಿಜಿ ದೃಷ್ಟಿಗೆ. ಆ ಸಮಯದಲ್ಲಿ ಅದೇ ಹಡಗಿನಲ್ಲಿದ್ದ ಕೆಲವು ಪಾದ್ರಿಗಳು ಇಂಡಿಯಾದೇಶದಲ್ಲಿ ತಮಿಳು ಹೆಂಗಸರು ಬರಗಾಲದ ನಿಮಿತ್ತ ಮಾರುತ್ತಿದ್ದ ಅವರ ಬೆಳ್ಳಿ ಕಡಗಗಳನ್ನು ಕೊಂಡುದನ್ನು ಎಲ್ಲರಿಗೂ ತೋರುತ್ತಿದ್ದರು. ಇಂಡಿಯಾದೇಶದಲ್ಲಿ ಹೆಂಗಸರು ತಮ್ಮ ಬಳೆಯನ್ನು ತೆಗೆಯಬಾರದೆಂಬ ಒಂದು ಮೂಢನಂಬಿಕೆ ಇದೆ ಎಂದು ಹಾಸ್ಯಮಾಡುತ್ತಿದ್ದುದನ್ನು ಕೇಳಿದರು. ಸ್ವಾಮಿಜಿ ವ್ಯಥೆಯಿಂದ ಆಶ್ಚರ್ಯಚಕಿತರಾಗಿ ಹೇಳಿದರು: "ಏನು, ನೀವು ಇದನ್ನು ಮೂಢನಂಬಿಕೆ ಎಂದು ಕರೆಯುತ್ತೀರೊ? ಇದರ ಹಿಂದೆ ಇರುವ ಮಹಾ ಪಾತಿವ್ರತ್ಯದ ಆದರ್ಶ ನಿಮಗೆ ಕಾಣುವುದಿಲ್ಲ."

ಸ್ವಾಮಿಜಿ ಮದುವೆಯನ್ನು ಆಧ್ಯಾತ್ಮಿಕ ಸ್ವಾತಂತ್ರ್ಯದ ದೃಷ್ಟಿಯಿಂದ ನೋಡುತ್ತಿದ್ದರು. ಪೌರಾತ್ಯದ ರೀತಿ ಸ್ವಾತಂತ್ರ್ಯ ಎಂದರೆ ಸ್ವಚ್ಛಂದವಲ್ಲ, ಹಾಗೆ ಮಾಡುವುದನ್ನು ನಿಗ್ರಹಿಸುವುದಕ್ಕೆ ಇರುವ ಸ್ವಾತಂತ್ರ್ಯ. ಎಲ್ಲಾ ಬಗೆಯ ಕರ್ಮಕ್ಕೆ ಅತೀತವಾದ ವಿಕರ್ಮ ಅದು. ಮದುವೆಗೆ ಅತೀತವಾಗಿ ಹೋಗುವುದಕ್ಕೆ ಮಾತ್ರ ಅದಕ್ಕೆ ವಿರೋಧವಾಗಿ ಹೋಗಬೇಕು ಎನ್ನುವ ವಿಷಯದಲ್ಲಿ ನಾನೂ ಏನೂ ಹೇಳಲಾರೆ ಎಂದರು ಒಮ್ಮೆ. ಅವರ ದೃಷ್ಟಿಯಲ್ಲಿ ನಿಜವಾದ ಮದುವೆ ಎಂದರೆ ಶ್ರೀರಾಮಕೃಷ್ಣರಿಗೆ ಆದ ಮದುವೆ, ತಮ್ಮ ಗುರುಭಾಯಿ ಯೋಗಾನಂದರಿಗೆ ಆದ ಮದುವೆ, ತಮ್ಮ

ಶಿಷ್ಯ ಸ್ವರೂಪಾನಂದರಿಗೆ ಆದ ಮದುವೆ. ಇತರ ದೇಶಗಳು ಇಂತಹ ಮದುವೆಯನ್ನು ಬರಿಯ ಹೆಸರಿಗೆ ಮಾತ್ರ ಮದುವೆ ಎಂದು ನೋಡುವುವು. ಈ ಪ್ರಶ್ನೆಯನ್ನು ವಿವರಿಸುತ್ತ ಒಂದು ಸಲ ಸ್ವಾಮಿಜಿ ಹೀಗೆಂದರು: "ಈ ವಿಷಯದ ಮೇಲೆ ಭಿನ್ನಾಭಿಪ್ರಾಯಗಳಿವೆ. ಪಾಶ್ಚಾತ್ಯರಲ್ಲಿ ಮದುವೆಗೂ ಸಮಾಜಕ್ಕೂ ಏನೂ ಸಂಬಂಧವಿಲ್ಲ. ಆದರೆ ಭರತಖಂಡದಲ್ಲಿ ಸಮಾಜ ಎರಡು ವ್ಯಕ್ತಿಗಳನ್ನು ಒಂದು ಗೂಡಿಸಿ ಮದುವೆ ಎಂಬ ಸಂಬಂಧ ವನ್ನು ಕಲ್ಪಿಸುವರು. ಅವರು ಎಂದೆಂದಿಗೂ ಅಗಲಲಾರರು. ಜನ್ಮ ಜನ್ಮವೂ ಅವರು ಅದೇ ವ್ಯಕ್ತಿಯನ್ನು ತಮಗೆ ಇಚ್ಛೆ ಇರಲಿ ಇಲ್ಲದಿರಲಿ, ಮದುವೆಯೊಗಬೇಕಾಗಿದೆ. ಪ್ರತಿಯೊಬ್ಬರಿಗೂ ಇನ್ನೊಬ್ಬರ ಧರ್ಮದಲ್ಲಿ ಅರ್ಧ ಪಾಲು ಬರುವುದು. ಈ ಪ್ರಯಾಣದಲ್ಲಿ ಯಾರಾದರೂ ಹಿಂದೆ ಬಿದ್ದರೆ ಮುಂದೆ ಇರುವವರು ಹಿಂದೆ ಇರುವವಳೊ ಇರುವವನೊ ಬರುವ ವರೆಗೆ ಕಾಯಬೇಕಾಗಿದೆ!"

ಶ್ರೀರಾಮಕೃಷ್ಣರು, ಮದುವೆಯನ್ನು ಪ್ರತ್ಯೇಕವಾಗಿ ಒಂದು ವ್ಯಕ್ತಿಗೆ ಮಾಡುವ ಸೇವೆಯೆಂದೂ, ಸನ್ಯಾಸವನ್ನು ಎಲ್ಲರಿಗೂ ಒಂದೇ ಸಮನಾಗಿ ಮಾಡುವ ಸೇವೆಯೆಂದೂ ಹೇಳುತ್ತಿದ್ದರು. ಇಲ್ಲಿ ಶ್ರೇಷ್ಠತಮ ಮದುವೆ ಯನ್ನು ಮಾತ್ರ ಶ್ರೀರಾಮಕೃಷ್ಣರು ವಿವರಿಸುತ್ತಿದ್ದರು ಎಂದು ನಾವು ಊಹಿಸಬೇಕಾಗುವುದು. ಇದನ್ನೇ ಸ್ವಾಮಿಜಿ ಸ್ಪಷ್ಟವಾಗಿ ಬ್ರಹ್ಮಚರ್ಯ ಎಂದು ಕರೆಯುತ್ತಿದ್ದರು. ಒಂದು ಮಹಾ ಯುದ್ಧಕೆ ಸಿದ್ಧರಾಗುತ್ತಿರುವ ಯೋಧರು ಶಪಥಮಾಡುವಂತೆ ಜೀವಿಗಳು ಇದನ್ನು ಸ್ವೀಕರಿಸಬೇಕು ಎಂದು ಹೇಳುತ್ತಿದ್ದರು. ಸನ್ಯಾಸಪಂಥವನ್ನು ಒಬ್ಬ ನಾಯಕನನ್ನು ಅನುಸರಿಸು ತ್ತಿರುವ ಸೇನೆಗೆ ಹೋಲಿಸುತ್ತಿದ್ದರು. ಒಬ್ಬ ಗುರುವನ್ನು ಅನುಸರಿಸುತ್ತಿದ ಗೃಹಸ್ಥರಾದರೋ ಒಂದು ಸೇನೆಯಂತೆ ಇರಲಿಲ್ಲ. ಈ ಎರಡು ಆದರ್ಶ ಗಳನ್ನು ಹೋಲಿಸುವುದಕ್ಕೆ ಆಗುವುದಿಲ್ಲ ಎನ್ನುತ್ತಿದ್ದರು ಸ್ವಾಮಿಜಿ.

ಮದುವೆಯೇ ಕೆಲವರಿಗೆ ಆದರ್ಶವಾಗಿದೆ ಎಂಬುದು ಅವರಿಗೆ ತಿಳಿಯದೆ ಇರಲಿಲ್ಲ. ಐವತ್ತು ವರುಷಗಳು ಸತಿಪತಿಯರಂತೆ ಇದ್ದು. ಕೊನೆಗೆ ಒಂದು work house ಬಳಿ ತನ್ನ ಸತಿಯನ್ನು ಅಗಲಬೇಕಾಗಿ ಬಂದಾಗ ಗಂಡ ಹೇಳಿದ ಮಾತನ್ನು ಸ್ವಾಮಿಜಿ ನನಗೆ ಹೇಳಿದಾಗ ಅದನ್ನು ಎಂದಿಗೂ ಮರೆಯುವಂತೆ ಇರಲಿಲ್ಲ. ಆ ವೃದ್ಧ ಆದಿನ ಸಂಜೆ "ನಾನು ನನ್ನ ಮೇರಿ ನಿದ್ರೆಮಾಡುವುದಕ್ಕೆ ಮುಂಚೆ ನೋಡಿ ಅವಳಿಗೆ ಮುತ್ತು

ಕೊಡುವುದಕ್ಕೆ ಆಗುವುದಿಲ್ಲವೆ. ಕಳೆದ ಐವತ್ತು ವರುಷಗಳಿಂದ ಒಂದು ದಿನವೂ ಹಾಗೆ ಮಾಡುವುದನ್ನು ನಾನು ಮರೆಯಲಿಲ್ಲ". ಸ್ವಾಮಿಜಿ ಆ ಮನುಷ್ಯನ ಪ್ರೀತಿಯಲ್ಲಿ ಎಂತಹ ನಿಷ್ಠೆಯಿತ್ತು ಎಂಬುದನ್ನು ಮನಗಂಡು "ಇದನ್ನು ಕುರಿತು ಯೋಚಿಸಿನೋಡು. ಎಂತಹ ನಿಗ್ರಹ ಮತ್ತು ನಿಷ್ಠೆ! ಇದೇ ಮುಕ್ತಿ. ಇವರಿಬ್ಬರಿಗೂ ಮದುವೆಯೇ ಗುರಿಯಾಗಿತ್ತು" ಎಂದರು.

ಹೆಂಗಸು ಇಚ್ಛೆಪಟ್ಟರೆ ಮದುವೆಯಾಗದೆ ಇರುವುದಕ್ಕೂ ಅವಳಿಗೆ ಅಧಿಕಾರವಿರಬೇಕೆಂದು ಸ್ವಾಮಿಜಿ ಹೇಳುತ್ತಿದ್ದರು. ಒಬ್ಬ ಹುಡುಗಿಗೆ ಹನ್ನೆರಡು ವರುಷಕ್ಕೆ ಮುಂಚೆಯೇ ಆಧ್ಯಾತ್ಮಿಕ ಜೀವನ ನಡೆಸಬೇಕೆಂದು ಬಲವಾದ ಇಚ್ಛೆ ಇತ್ತು. ಅವಳಿಗೆ ಮದುವೆ ಮಾಡಬೇಕೆಂದು ತಂದೆ ತಾಯಿಗಳು ವರನಿಗೆ ಹುಡುಕುತ್ತಿದ್ದರು. ಆ ಹುಡುಗಿ ಸ್ವಾಮಿಜಿ ಬಳಿಗೆ ಬಂದು ಹೇಗಾದರೂ ತನ್ನನ್ನು ಮದುವೆಯಿಂದ ಪಾರುಮಾಡಿಸಿ ಎಂದು ಬೇಡಿಕೊಂಡಳು. ಸ್ವಾಮಿಜಿಗೆ ಆ ಹುಡುಗಿಯ ತಂದೆ ಪರಿಚಯವಿದ್ದುದರಿಂದ ಇತರ ಸಹೋದರಿಯರಿಗೆ ಮದುವೆ ಮಾಡಿಸಿ ಈ ಹುಡುಗಿಯನ್ನು ಅದರಿಂದ ಬಿಡಿಸಿದರು. ಹಲವು ವರುಷಗಳಾದರೂ ಈ ಹುಡುಗಿ ಮಾತ್ರ ಮದುವೆಯ ಆಲೋಚನೆಯನ್ನೆ ಮಾಡಲಿಲ್ಲ. ಧ್ಯಾನ ಮತ್ತು ಪೂಜಾದಿಗಳಲ್ಲಿ ಈಕೆ ತನ್ಮಯಗಳಾಗಿದ್ದಳು. ಈಗ ಆ ಹುಡುಗಿಯ ತಂಗಿಯರಿಗೆಲ್ಲ ಮದುವೆಯಾಗಿದೆ. ಇಂತಹ ಹುಡುಗಿಯನ್ನು ಮದುವೆಯಾಗೆಂದು ಬಲಾತ್ಕರಿಸುವುದು ಒಂದು ಮಹಾ ಪಾಪ ಎಂದು ಸ್ವಾಮಿಜಿ ಭಾವಿಸಿದ್ದರು. ಹಾಗೂ ಸಮಾಜದಲ್ಲಿ ಮದುವೆಯಾಗದವರ ತಂಡದಲ್ಲಿ ಇರುವವರು, ಬಾಲವಿತಂತುಗಳು, ಕುಲೀನಬ್ರಾಹ್ಮಣರ ಸತಿಯರು, ಅಪರೂಪವಾಗಿ ಮದುವೆಯಾಗದೆ ಇರುವ ಕೆಲವು ಸ್ತ್ರೀಯರು ಇವರಲ್ಲೆಲ್ಲ ಸ್ವಾಮಿಜಿ ಹಲವು ಆದರ್ಶ ನಾರಿಯರನ್ನು ಕಂಡರು.

ಸಮಾಜದ ಭದ್ರತೆ ಇರುವುದೇ ವಿಧವೆಯರ ಜೀವನದ ಪವಿತ್ರತೆಯ ಮೇಲೆ. ಈ ದೃಷ್ಟಿಯಲ್ಲಿ ಪುರುಷನಿಗೂ ಕೂಡ ಇಂತಹ ಉಜ್ವಲ ಆದರ್ಶ ವಿರಬೇಕೆಂದು ಅವರು ಆಶಿಸಿದ್ದರು. ಆರ್ಯರ ಕಾಲದಲ್ಲಿ ಆದ ಮದುವೆಯಲ್ಲಿ ಬೆಂಕಿಯನ್ನು ಹಚ್ಚಿ ಪ್ರತಿದಿನವೂ ಬೆಳಗ್ಗೆ ಸತಿಪತಿಯರಿಬ್ಬರೂ ಒಟ್ಟಿಗೆ ಅದನ್ನು ಪೂಜಿಸುತ್ತಿದ್ದರು. ಇದು ಇಬ್ಬರೂ ಸಮಾನ ಎಂಬುದನ್ನು ತೋರುವುದು. ವಾಲ್ಮೀಕಿಯ ರಾಮಾಯಣದಲ್ಲಿ ಸೀತೆ ರಾಮನ ಮೇಲೆ

ಎಷ್ಟು ಮಟ್ಟಿಗೆ ನಿಷ್ಠಾವಂತಳಾಗಿದ್ದಳೋ ಅದರಷ್ಟೇ ರಾಮನೂ ಕೂಡ ಸೀತೆಯ ಮೇಲೆ ನಿಷ್ಠಾವಂತನಾಗಿದ್ದನು.

ಪ್ರಪಂಚದಲ್ಲೆಲ್ಲ ಮದುವೆಗೆ ಸಂಬಂಧಪಟ್ಟ ಎಷ್ಟೋ ಸಮಸ್ಯೆಗಳು ಸ್ವಾಮಿಜಿಗೆ ವೇದ್ಯವಾಗದೆ ಇರಲಿಲ್ಲ. ಒಮ್ಮೆ ಸ್ವಾಮಿಜಿ ಉಪನ್ಯಾಸ ಮಾಡುವಾಗ "ಮನಸ್ಸಿಗೆ ಬಂದ ರೀತಿಯಲ್ಲಿ ವ್ಯವಹರಿಸುವ ಹೆಂಗಸರಲ್ಲಿ ಸಹಿಷ್ಣುತೆ ಎಂಬುದೆಲ್ಲ ಮಾಯವಾಗಿದೆ!" ಎಂದು ಹೇಳಿದರು. ಇನ್ನು ಮುಂದೆ ಸುಮ್ಮನೇ ಮದುವೆಯ ಸಂಬಂಧದಲ್ಲಿ ಇದ್ದರೆ ಮಾನವಕೋಟಿಯ ಹಿತಕ್ಕೆ ಧಕ್ಕೆ ಬರುವುದು. ಅಂತಹ ಸಮಯದಲ್ಲಿ ಸತಿಯಾಗಲೀ, ಪತಿಯಾಗಲೀ ದಾಂಪತ್ಯ ವಿಚ್ಛೇದನವನ್ನು ಪಡೆಯುವುದು ಇರುವ ಏಕಮಾತ್ರ ಧೈರ್ಯದಹಾದಿ. ಭರತಖಂಡದಲ್ಲಿದ್ದಾಗ ಪೌರ ಮತ್ತು ಪಾಶ್ಚಾತ್ಯ ಆದರ್ಶಗಳು ಕೊಟ್ಟು ತೆಗೆದುಕೊಳ್ಳಬೇಕು ಎನ್ನುತ್ತಿದ್ದರು. ಸಮಾಜದಲ್ಲಿರುವ ಯಾವ ಸಂಸ್ಥೆಯನ್ನೂ ಅವರು ಕಟುವಾಗಿ ಟೀಕಿಸುತ್ತಿರಲಿಲ್ಲ. ಅದನ್ನು ಟೀಕಿಸುವವರಿಗೆ ಹಿಂದೆ ಒಂದು ಕಾಲದಲ್ಲಿ ಆ ಸಂಸ್ಥೆ ಸಮಾಜದ ಕೆಲವು ನ್ಯೂನತೆಯನ್ನು ಇದಿರಿಸುವುದಕ್ಕಾಗಿ ಜನ್ಮತಾಳಿತು ಎಂಬುದನ್ನು ಅವರು ಮರೆಯುವರು ಎಂದು ಹೇಳುತ್ತಿದ್ದರು. ಆದರೆ ಅದು ಈಗ ಯಾವ ಸ್ಥಿತಿಗೆ ಬಂದಿದೆ ಎಂಬುದು ಅವರಿಗೆ ಗೊತ್ತಿರದೆ ಇರಲಿಲ್ಲ.

ಒಂದು ದಿನ ಸ್ವಾಮಿಜಿ, ಭರತಖಂಡದಲ್ಲಿದ್ದಾಗ, ತಂದೆ ತಾಯಿಗಳಿಗೇ ತಮ್ಮ ಮಕ್ಕಳಿಗೆ ಹುಡುಗ ಹುಡುಗಿಯರನ್ನು ನೋಡಿ ಮದುವೆ ಮಾಡುವ ಸ್ವಾತಂತ್ರ್ಯವಿದೆ, ಮುಂದೆ ಮದುವೆ ಯಾಗುವವರಿಗೆ ಸ್ವಲ್ಪವೂ ಆ ವಿಷಯದ ಮೇಲೆ ಸ್ವಾತಂತ್ರ್ಯವಿಲ್ಲದಿರುವುದನ್ನು ನೋಡಿದಾಗ ಹೀಗೆಂದರು: "ಈ ದೇಶದಲ್ಲಿ ಎಷ್ಟೊಂದು ವ್ಯಥೆಯಿದೆ. ಇದರಲ್ಲಿ ಕೆಲವು ಬಹುಶಃ ಹಿಂದಿನಿಂದಲೂ ಇದ್ದಿರಬಹುದು. ಆದರೆ ಬೇರೆ ಆದರ್ಶವನ್ನುಳ್ಳ ಐರೋಪ್ಯರನ್ನು ನೋಡಿದಾಗ ಇವರ ದುಃಖ ದ್ವಿಗುಣವಾಗುತ್ತಿದೆ. ಏಕೆಂದರೆ ಬೇರೊಂದು ದಾರಿ ಇದೆ ಎಂದು ಸಮಾಜಕ್ಕೆ ಗೊತ್ತಾಗುತ್ತಿದೆ."

ಒಬ್ಬ ಐರೋಪ್ಯನಿಗೆ ಸ್ವಾಮಿಜಿ ಒಂದುದಿನ "ನಾವು ತಾಯಿತನವನ್ನು ಪರಮಾದರ್ಶ ಮಾಡಿರುವೆವು. ನೀವು ಸತೀತ್ವವನ್ನು ಪರಮಾದರ್ಶ ಮಾಡಿರುವಿರಿ. ಒಬ್ಬರು ಮತ್ತೊಬ್ಬರ ಆದರ್ಶದಿಂದ ಸ್ವಲ್ಪ ತೆಗೆದುಕೊಂಡರೆ ಮೇಲೆನಿಸುವುದು" ಎಂದರು.

ಮತ್ತೊಂದು ಸಲ ಸ್ವಾಮಿಜಿ ಹಡಗಿನಲ್ಲಿ ಹೋಗುತ್ತಿದ್ದಾಗ ತಮಗೆ ಆದ ಒಂದು ಕನಸನ್ನು ವಿವರಿಸಿದರು. "ಪೌರ ಮತ್ತು ಪಾಶ್ಚಾತ್ಯದೇಶಗಳ ಮದುವೆ ಆದರ್ಶವನ್ನು ಚರ್ಚಿಸುತ್ತಿದ್ದಂತೆ ಆಯಿತು. ಕೊನೆಗೆ ಎರಡರಲ್ಲೂ ಕೆಲವು ಉತ್ತಮ ಆದರ್ಶಗಳಿವೆ. ಅದನ್ನು ಬಿಡುವುದು ಪ್ರಪಂಚಕ್ಕೆ ತರವಲ್ಲ ಎಂಬ ನಿರ್ಧಾರಕ್ಕೆ ಬಂದಂತೆ ಆಯಿತು." ಆದಕಾರಣವೇ ಸ್ವಾಮಿಜಿ ಪ್ರತಿಯೊಂದು ದೇಶದ ಸಾಮಾಜಿಕ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ಅಷ್ಟೊಂದು ಕಾಲವನ್ನು ತೆಗೆದುಕೊಳ್ಳುತ್ತಿದ್ದರು.

ಮತ್ತೊಮ್ಮೆ ಹೀಗೆಂದರು: "ಇಂಡಿಯಾದೇಶದಲ್ಲಿ ಸತಿಯಾದವಳು ಮಗನನ್ನು ಕೂಡ ಗಂಡನನ್ನು ಪ್ರೀತಿಸುವಷ್ಟು ಪ್ರೀತಿಸಬಾರದು. ಅವಳು ಸತಿಯಾಗಿರಬೇಕು. ಆದರೆ ಗಂಡ, ತನ್ನ ತಾಯಿಯಷ್ಟು ಹೆಂಡತಿಯನ್ನೂ ಪ್ರೀತಿಸಬಾರದು. ಇಲ್ಲಿ ಯಾರು ತನ್ನನ್ನು ಎಷ್ಟು ಪ್ರೀತಿಸುತ್ತಾರೋ ಅಷ್ಟರಮಟ್ಟಿಗೆ ಆತನನ್ನು ಪ್ರೀತಿಸುವುದು ಒಂದು ಘನ ಆದರ್ಶವಲ್ಲ. ಇದು ಕೇವಲ ಒಂದು ವ್ಯಾಪಾರ! ಸತಿಪತಿಯ ಸಮಾನವಾದ ಸಂತೋಷವನ್ನೇ ಭರತಖಂಡ ಒಪ್ಪಿಕೊಳ್ಳುವುದಿಲ್ಲ. ಇದನ್ನು ನಾವು ಪಾಶ್ಚಾತ್ಯರಿಂದ ತೆಗೆದುಕೊಳ್ಳಬೇಕಾಗಿದೆ. ನಮ್ಮ ಆದರ್ಶ ನಿಮ್ಮ ಆದರ್ಶದ ಸಹಾಯವನ್ನು ಇಲ್ಲಿ ಪಡೆಯಬೇಕಾಗಿದೆ. ನೀವು ನಮ್ಮಲ್ಲಿರುವ ಮಾತೃಭಕ್ತಿಯ ಆದರ್ಶವನ್ನು ಸ್ವಲ್ಪ ತೆಗೆದುಕೊಳ್ಳಬೇಕು."

ಆದರೆ ಸ್ವಾಮಿಜಿ ಸಾನ್ನಿಧ್ಯದಲ್ಲಿರುವಾಗ ಬೇರೊಂದು ಆದರ್ಶ ನಮ್ಮ ಮನಸ್ಸಿನ ಮೇಲೆ ತನ್ನ ಪ್ರಭಾವವನ್ನು ಬೀರುವುದು. ಅದೇ ಮನೆಯ ಸುಖಸಂತೋಷವನ್ನು ತ್ಯಜಿಸಿ ಆತ್ಮನ ಮೋಕ್ಷ ಮತ್ತು ಜಗತ್ತಿನ ಹಿತಕ್ಕಾಗಿ ತನ್ನ ಬಾಳನ್ನು ಅರ್ಪಿಸಿದವನ ಧ್ಯೇಯ ಉಚ್ಚತಮವಾಗಿ ಕಾಣುವುದು. ಮಹಾವ್ಯಕ್ತಿಗಳು ಕೆಲವು ವೇಳೆ ತಮ್ಮ ಸುತ್ತಲೂ ತಮಗೆ ಅಧೀನರಾದವರು ಇರಬೇಕಾದ ಆವಶ್ಯಕವನ್ನು ಮನಗಾಣಬಹುದು. ಇದರ ವಿಷಯವಾಗಿ ಒಮ್ಮೆ ಸ್ವಾಮಿಜಿ, "ಮದುವೆ ಮತ್ತು ಮನೆಗೆ ಸಂಬಂಧಪಟ್ಟ ಯೋಚನೆಗಳು ಮನಸ್ಸಿನಲ್ಲಿ ಯಾವಾಗಲಾದರೂ ಬಂದರೆ ನೀನು ಅದಕ್ಕಾಗಿ ಅಷ್ಟು ಚಿಂತಿಸಬೇಕಾಗಿಲ್ಲ. ಅವು ನನಗೂ ಕೆಲವು ವೇಳೆ ಬರುತ್ತವೆ" ಎಂದು ಅನುಕಂಪ ಹೃದಯದಿಂದ ಮೃದುವಾಗಿ ಒಬ್ಬ ಶಿಷ್ಯನಿಗೆ ಹೇಳಿದರು. ಮತ್ತೊಮ್ಮೆ ಯಾರೋ ಒಬ್ಬ ಸ್ನೇಹಿತರು 'ಅಯ್ಯೋ ನಾನು ಏಕಾಕಿಯಾಗಿ

ರುವೆನು ಎಂದು ಹೇಳಿದಾಗ ಸ್ವಾಮಿಜಿ' ಕೆಲವು ವೇಳೆ ಪ್ರತಿಯೊಬ್ಬರಿಗೂ ಹಾಗೆ ಅನ್ನಿಸುವುದು ಎಂದರು.

ಆದರೆ ಸಮಾಜಕ್ಕೆ ಅತೀತವಾದ ಆ ಒಂದು ನಿತ್ಯ ಆಧ್ಯಾತ್ಮಿಕ ಆದರ್ಶವನ್ನು ಕೆಳಗಿಳಿದು ಯಾವುದೊ ಸಾಮಾಜಿಕ ಆದರ್ಶವನ್ನು ಆ ಪಟ್ಟಕ್ಕೆ ಏರಿಸುವುದು ಬಹಳ ಅಪಾಯಕರ ಎಂದು ಸ್ವಾಮಿಜಿ ಎಚ್ಚರಿಕೆ ಕೊಡುತ್ತಿದ್ದರು. "ನೀವು ಬೋಧಿಸುವವರೆಲ್ಲರಿಗೂ ಇದನ್ನು ಜ್ಞಾಪಿಸುವುದನ್ನು ಮರೆಯಬೇಡಿ. ಸೂರ್ಯನೆದುರಿಗೆ ಒಂದು ಮಿಚು ಹುಳು ಹೇಗೋ, ಮೇರುವಿನೆದುರಿಗೆ ಒಂದು ಮರಳ ಕಣ ಹೇಗೋ ಹಾಗೆ ಸನ್ಯಾಸಿಗೂ ಗೃಹಸ್ಥನಿಗೂ ಇರುವ ವ್ಯತ್ಯಾಸ." ಇದನ್ನು ತಮ್ಮ ಶಿಷ್ಯರೊಬ್ಬರಿಗೆ ಗಂಭೀರವಾಣಿಯಲ್ಲಿ ಹೇಳಿದರು.

ಆಧ್ಯಾತ್ಮಿಕ ಜೀವನದಲ್ಲಿ ಇಲ್ಲಿ ಅಹಂಕಾರ ಬರುವ ಒಂದು ಅಪಾಯವಿದೆ. ಇಲ್ಲಿ ಅದರಿಂದ ಪಾರಾಗುವುದಕ್ಕಾಗಿ, ಅವರು ಶ್ರೀರಾಮಕೃಷ್ಣರ ಶಿಷ್ಯರು ಗೃಹಸ್ಥರಾಗಲಿ ಸನ್ಯಾಸಿಗಳಾಗಲಿ ಎಲ್ಲರಿಗೂ ನಮಸ್ಕರಿಸುವುದಕ್ಕೆ ಸಿದ್ಧರಾಗಿದ್ದರು. ಆದರೆ ಆದರ್ಶವನ್ನೇ ಅವರು ಕೆಳಗೆ ಎಳೆಯಲು ಒಪ್ಪುತ್ತಿರಲಿಲ್ಲ. ಅದಕ್ಕೆ ಬದಲು ಧಾರ್ಮಿಕ ಸಂಸ್ಥೆಗಳು ಈಗ ಎಂದಿಗಿಂತ ಹೆಚ್ಚಾಗಿ ಗೃಹಸ್ಥರಿಗೂ ಸನ್ಯಾಸ ಜೀವನದ ಆದರ್ಶವನ್ನು ಕೊಡಬೇಕಾಗಿರುವುದು ಅವರ ಕರ್ತವ್ಯ. ಯಾರಿಗೆ ಸನ್ಯಾಸದ ಆದರ್ಶ ಸಾಧ್ಯವಿಲ್ಲವೋ ಅವರು ಅದಕ್ಕಿಂತ ಸುಲಭವಾದ ಗೃಹಸ್ಥ ಆದರ್ಶವನ್ನು ತೆಗೆದುಕೊಂಡರೂ ಅವರ ಮನಸ್ಸಿನ ಮೇಲೆ ಇದು ತನ್ನ ಪ್ರಭಾವನ್ನು ಬೀರುತ್ತಿರುವುದು. ಇದು ಈ ದಾಂಪತ್ಯವ್ಯಾಮೋಹ ಆತ್ಮಸ್ವಾತಂತ್ರ್ಯವನ್ನು ಪಡಯಬೇಕೆಂಬ ಗುರಿಯನ್ನು ಮರೆಸದಿರುವಂತೆ ಮಾಡುವುದಕ್ಕಾಗಿ.

ಶ್ರೀರಾಮಕೃಷ್ಣರ ಶಿಷ್ಯರೆಲ್ಲ ಮದುವೆಯ ಆದರ್ಶ ಪೂರ್ಣವಾಗುವುದು ಹೆಂಡತಿಯನ್ನು ತಾಯಿಯಂತೆ ನೋಡಿದಾಗ ಮಾತ್ರ ಎಂದು ಹೇಳುತ್ತಿದ್ದರು. ಎಂದರೆ ಇಬ್ಬರೂ ಒಪ್ಪಿ ಸನ್ಯಾಸ ಜೀವನಾದರ್ಶವನ್ನು ಕೈಕೊಳ್ಳಬೇಕಾಗಿತ್ತು. ಮಾನವನಂತೆ ಇಲ್ಲಿ ದೇವತ್ವದಲ್ಲಿ ಸಂಲಗ್ನವಾಗುವುದು. ಅಂದಿನಿಂದ ಇಡೀ ಜೀವನ ಬೇರೊಂದು ದೃಷ್ಟಿಯಿಂದ ಕಾಣುವುದು. ಇಲ್ಲಿಯವರೆಗೆ ಅವರ ಆದರ್ಶದಲ್ಲಿ ತೀವ್ರತೆ ಹೆಚ್ಚುಕಡಿಮೆಯಾಗುತ್ತಿರುವುದು. ಬಾಹ್ಯವನ್ನು ತ್ಯಜಿಸಿದಮೇಲೆ, ಭೋಗೇಚ್ಛೆಗೆ ಅತೀತನಾಗಿ ಹೋಗುವವನು

ಆಗ ಅವನ ಪ್ರೇಮದಲ್ಲಿ ಏಳುಬೀಳುಗಳು ಇರುವುದಿಲ್ಲ. ಅನಂತರ ಪ್ರಿಯ ತಮಳನ್ನು ಸ್ಥಿರಬುದ್ಧಿಯಿಂದ ಆರಾಧಿಸುವನು.

ಮೇಲಿನ ಪ್ರಶ್ನೆಯ ಮೇಲೆ ಹಿಂದೂಧರ್ಮಕ್ಕೂ ಬೌದ್ಧ ಧರ್ಮಕ್ಕೂ ಇರುವ ವ್ಯತ್ಯಾಸವನ್ನು ಸ್ವಾಮಿಜಿ ಹೇಳಿದರು. ಇದನ್ನು ಎಂದಿಗೂ ಮರೆಯುವಂತೆ ಇಲ್ಲ. ಒಂದು ದಿನ ಕಾಶ್ಮೀರದಲ್ಲಿದ್ದಾಗ ಭಾನುವಾರ ಬೆಳಿಗ್ಗೆ ದೇವದಾರು ಮರಗಳ ಸಾಲಿನ ಕೆಳಗೆ ಹೋಗುತ್ತಿದ್ದಾಗ ಸ್ತ್ರೀಯರು ಮತ್ತು ಜಾತಿ ವಿಷಯವಾಗಿ ಮಾತನಾಡುತ್ತಿದ್ದರು: "ಹಿಂದೂಧರ್ಮದ ಮಹತ್ವವೇ ಇದು. ಇದು ಹಲವು ಆದರ್ಶಗಳನ್ನು ಮಾನವನ ಮುಂದೆ ಇಟ್ಟರೂ ಯಾವುದೊ ಒಂದು ಮಾತ್ರ ಸರಿ ಮಿಕ್ಕದ್ದು ಸುಳ್ಳು ಎಂದು ಹೇಳಲಿಲ್ಲ. ಇಲ್ಲೆ ಬೌದ್ಧರಿಗೂ ಹಿಂದೂಗಳಿಗೂ ಇರುವ ವ್ಯತ್ಯಾಸ. ಬೌದ್ಧರು ಒಬ್ಬ ನಿರ್ವಾಣ ಪಡೆಯಬೇಕಾದರೆ ಸನ್ಯಾಸಿಯೇ ಆಗಿರಬೇಕು. ಎನ್ನುತ್ತಾರೆ. ಮಹಾಭಾರತದಲ್ಲಿ ಒಬ್ಬ ಸನ್ಯಾಸಿ ಮೊದಲು ಒಬ್ಬ ಗೃಹಿಣಿ ಯಿಂದ ಅನಂತರ ಒಬ್ಬ ವ್ಯಾಧನಿಂದ ಧರ್ಮೋಪದೇಶವನ್ನು ಕೇಳುವಂತೆ ಮಾಡುವರು. ಇವರು ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಮಾಡಿದ್ದ ರಿಂದಲೇ ತಮಗೆ ಜ್ಞಾನಬಂದಿತೆಂದು ಹೇಳುವರು. ಯಾವ ಹಾದಿ ಬೇಕಾದರೂ ಭಗವಂತನೆಡೆಗೆ ಕೊಂಡೊಯ್ಯಬಹುದು. ಗುರಿಯನ್ನು ಮುಟ್ಟು ವುದು ಜೀವಿಯ ಉತ್ಕಟ ಆಕಾಂಕ್ಷೆಯ ಮೇಲಿದೆ.

ಪವಿತ್ರತೆಯನ್ನು ಎಷ್ಟು ಹೆಚ್ಚಾಗಿ ವ್ಯಕ್ತಗೊಳಿಸಿದರೆ ಅಷ್ಟೂ ಒಳ್ಳೆಯದು. ಅದು ಯಾವ ಆದರ್ಶವಾದರೂ ಆಗಬಹುದು. ಸ್ವಾಮಿಜಿ ಇದನ್ನು ಒಪ್ಪುತ್ತಿದ್ದರು. ಆದರೆ ಕೆಲವು ವೇಳೆ ಕೇವಲ ಆಧ್ಯಾತ್ಮಿಕ ಕ್ಕಾಗಿಯೇ ತಾವು ಮದುವೆಯಾಗಿರುವೆವು ಎಂದು ಜನ ಎಲ್ಲಿ ತಪ್ಪಾಗಿ ಭಾವಿಸುವರೊ ಎಂದು ಇವರು ಶಂಕಿಸಿದ್ದರು. ಅನೇಕ ವೇಳೆ ನಮ್ಮ ಸ್ವಾರ್ಥ ಬುದ್ಧಿ ನಾವು ಮಾಡುವ ಕೆಲಸ ಮತ್ತು ನಮ್ಮ ಉದ್ದೇಶಗಳೇ ಪರಮಶ್ರೇಷ್ಠ ವೆಂದು ಕಾಣುವಂತೆ ಮಾಡುವುದು. ಸ್ವಾಮಿಜಿ ಪಾಶ್ಚಾತ್ಯದೇಶಗಳಲ್ಲಿ ಹೀಗೆ ಹೇಳುತ್ತಿದ್ದ ಹಲವರನ್ನು ಕಂಡಿದ್ದರು. ನಿತ್ಯಭೋಗದಲ್ಲಿ ಶುದ್ಧ ಸೋಮಾರಿಯಾಗಿ ಕಾಲಕಳೆದರೂ ತಾವು ನಿಸ್ವಾರ್ಥರು ಎಂದು ಭಾವಿಸು ತ್ತಿದ್ದರು. ಕೇವಲ ಕರ್ತವ್ಯದ ದೃಷ್ಟಿಯಿಂದ ಮಾತ್ರ ತಾವು ಪ್ರಪಂಚ ದಲ್ಲಿರಬೇಕಾಗಿದೆ; ಹೋರಾಟವಿಲ್ಲದೆ ತಾವು ಬಹುಬೇಗ ಎಲ್ಲವನ್ನೂ ತ್ಯಜಿಸಲು ಸಿದ್ಧರಾಗಿರುವೆವು ಎಂದು ಹೇಳಿಕೊಳ್ಳುವರು. ಸ್ವಾಮಿಜಿ

ಇಂತಹ ಮಾತನ್ನು ಪೊಳ್ಳು ಹರಟೆ ಎನ್ನುತ್ತಿದ್ದರು. ಇಂತಹ ಆದರ್ಶವ್ಯಕ್ತಿ ಜನಕ. ಅವನು ಜಗದ ಇತಿಹಾಸದಲ್ಲಿ ಎಲ್ಲೊ ಒಮ್ಮೆ ಮಾತ್ರ ಬಂದಿರುವನು. ಸ್ವಾಮಿಜಿ ಪಾಶ್ಚಾತ್ಯರ ತಪ್ಪನ್ನು ವಿವರಿಸುತ್ತಾ ಹೀಗೆ ಹೇಳುವರು: 'ಮೊದಲನೆಯವರು ಆದರ್ಶವನ್ನು ಪರಮಪವಿತ್ರ ಎಂದು ಆರಾಧಿಸುವುದು, ಎರಡನೆಯವರು ನಾನು ಈಗ ಇರುವ ಸ್ಥಿತಿಯೆ ಪರಮ ಆದರ್ಶವೆಂದು ಭಾವಿಸುವರು. ಎರಡನೆಯದರಲ್ಲಿ ಆದರ್ಶ ನಮ್ಮ ಸ್ವಾರ್ಥಕ್ಕೆ ಅಡಿಯಾಳಾಗಿದೆ.

ಸ್ವಾಮಿಜಿ ಟೀಕೆಯಲ್ಲಿ ಯಾವ ವಿಷವೂ ಇರಲಿಲ್ಲ. ಯಾರು ಸ್ವಾಮಿಜಿಯವರ ಭಕ್ತಿಯೋಗವನ್ನು ಓದಿರುವರೊ ಅವರಿಗೆ ಗೊತ್ತಾಗುವುದು. ಪ್ರಿಯ ತನ್ನ ಪ್ರಿಯೆಯಲ್ಲಿ ಯಾವಾಗಲೂ ತನ್ನ ಆದರ್ಶವನ್ನು ನೋಡುವನು ಎಂಬುದು. ಯಾರೋ ಒಬ್ಬ ಹುಡುಗಿ ತಾನು ಇನ್ನೊಬ್ಬನನ್ನು ಪ್ರೀತಿಸುವೆನು ಎಂದು ಸ್ವಾಮಿಜಿಗೆ ಹೇಳಿದಾಗ, "ಈ ಆದರ್ಶವನ್ನು ಬಿಡಬೇಡ. ಎಲ್ಲಿಯವರೆಗೆ ನೀವಿಬ್ಬರೂ ಒಬ್ಬರು ಮತ್ತೊಬ್ಬರಲ್ಲಿ ತಮ್ಮ ಆದರ್ಶವನ್ನು ನೋಡುವಿರೊ ಅಲ್ಲಿಯವರೆಗೆ ನಿಮ್ಮ ಪೂಜೆ ಮತ್ತು ಸೌಖ್ಯ ಹೆಚ್ಚಾಗುವುದೇ ಹೊರತು ಕಡಿಮೆಯಾಗುವುದಿಲ್ಲ" ಎಂದರು.

ನನ್ನ ಗುರುದೇವನ ಸ್ನೇಹಿತರ ಪೈಕಿ ಮಧ್ಯವಯಸ್ಸಿನ ಒಬ್ಬ ಮಹಿಳೆ ಇದ್ದಳು. ಸ್ವಾಮಿಜಿಗೆ ಸನ್ಯಾಸಧರ್ಮದ ಮೇಲೆ ಅಷ್ಟೊಂದು ಉಜ್ವಲ ವಿಶ್ವಾಸವಿರುವುದರಿಂದ ಮದುವೆಯ ಆದರ್ಶದ ಸಹಾಯಕತೆ ಮತ್ತು ಅದರ ಪವಿತ್ರತೆಯ ವಿಷಯವಾಗಿ ಅವರು ಸಾಕಷ್ಟು ಗೌರವವನ್ನು ತೋರುವರೆ ಎಂದು ಶಂಕೆಪಟ್ಟಿದ್ದಳು. ಆಕೆ ಅತಿ ಸಂತೋಷವಾಗಿ ಅಸಾಧಾರಣ ದಾಂಪತ್ಯಜೀವನವನ್ನು ಅನುಭವಿಸಿದ ಮೇಲೆ ಹಲವು ವರುಷಗಳಿಂದ ವಿಧವೆಯಾಗಿದ್ದಳು. ಆದಕಾರಣವೆ ಸ್ವಾಮಿಜಿ ತಾವು ಕಾಲವಾಗುವುದಕ್ಕೆ ಕೆಲವು ವಾರಗಳು ಮುಂಚೆ ಒಂದು ಕಾಗದವನ್ನು ಈಕೆಗೆ ಬರೆದರು. ಅದರಲ್ಲಿ ತಮ್ಮ ಮಾಗಿದ ಅನುಭವವನ್ನು ಹೇಳುವರು. ದೂರದಲ್ಲಿದ್ದ ಈಕೆಗೆ ಸ್ವಾಮಿಜಿ ಇಂಡಿಯಾದೇಶದಿಂದ ಬರೆದ ಕಾಗದ ಬಂದಿತು. ಆ ಕಾಗದವನ್ನು ತಂದ ಅಂಚೆಯವನೇ ಸ್ವಾಮಿಜಿ ನಿಧನರಾದ ತಂತಿಯನ್ನೂ ಏಕಕಾಲದಲ್ಲಿ ಕೊಟ್ಟನು. ಅವರು ಗಂಭೀರವಾಣಿಯಿಂದ ಬರೆದ ಪತ್ರದಲ್ಲಿ ಹೀಗಿದೆ: "ನನ್ನ ದೃಷ್ಟಿಯಲ್ಲಿ ಒಂದು ಜನಾಂಗ ಪವಿತ್ರ ಬ್ರಹ್ಮಚರ್ಯ ಆದರ್ಶವನ್ನು ಅನುಸರಿಸುವುದಕ್ಕೆ ಮುಂಚೆ, ಮದುವೆ ಪವಿತ್ರವಾದ ಒಂದು

ವ್ರತ; ಅದನ್ನೂ ಯಾರೂ ಅಲ್ಲಗಳೆಯಲಾರರು ಎಂಬುದರ ಮೂಲಕ ತಾಯ್ತನಕ್ಕೆ ಗೌರವವನ್ನು ತೋರುವುದನ್ನು ಕಲಿಯಬೇಕು. ಹಿಂದೂಗಳು ಮತ್ತು ರೋಮನ್ ಕ್ಯಾಥೋಲಿಕ್ ಜನರು ಮದುವೆಯನ್ನು ಪವಿತ್ರ ಮತ್ತು ಅದನ್ನು ಯಾರೂ ಅಲ್ಲಗಳೆಯಲಾರರು ಎಂದು ಗೌರವಿಸಿದುದರಿಂದ ಮಹಾ ಶಕ್ತಿಶಾಲಿಗಳಾದ ಪವಿತ್ರ ಸ್ತ್ರೀಪುರುಷರಿಗೆ ಜನ್ಮ ನೀಡಿದೆ. ಅರಬ್ಬಿಯವರಿಗೆ ಮದುವೆ ಒಂದು ಒಪ್ಪಂದ ಅಥವಾ ಬಲಾತ್ಕಾರವಾಗಿ ಒಬ್ಬ ಸ್ತ್ರೀಯನ್ನು ವಿಶದಲ್ಲಿಟ್ಟುಕೊಂಡಿರುವುದಾಗಿದೆ. ಮನಸ್ಸು ಬಂದಾಗ ಅವರನ್ನು ಬಿಡ ಬಹುದು. ಅಲ್ಲಿ ಬ್ರಹ್ಮಚಾರಿಣಿ ಅಥವಾ ಬ್ರಹ್ಮಚಾರಿಗಳ ಆದರ್ಶವನ್ನು ನಾವು ನೋಡಲಾರೆವು. ಆಧುನಿಕ ಬೌದ್ಧಧರ್ಮ ಇನ್ನೂ ಮದುವೆಯ ಆದರ್ಶದ ಸಮೀಪಕ್ಕೆ ಬರದ ಜನಾಂಗದ ಧರ್ಮವಾಗಿರುವುದರಿಂದ ಅಲ್ಲಿಯ ಸನ್ಯಾಸಧರ್ಮವೂ ನಗೆಗೀಡಾಗಿದೆ. ಆದಕಾರಣ ಜಪಾನಿನಲ್ಲಿ ಮೊದಲು ಪವಿತ್ರವಾದ ಮಹದಾದರ್ಶವಾದ ಮದುವೆ ಬರುವವರೆಗೆ ಪ್ರಖ್ಯಾತ ಭಿಕ್ಷು ಅಥವಾ ಭಿಕ್ಷುಣಿಗಳು ಹೇಗೆ ಬರುವರೋ ನನಗೆ ಗೊತ್ತಿಲ್ಲ. ಜೀವನದ ಆದರ್ಶವೆ ಜಿತೇಂದ್ರಿಯರಾಗುವುದು ಎಂಬುದನ್ನು ನೀನರಿತಿರುವೆ. ಇಂತಹ ಕೆಲವು ವ್ಯಕ್ತಿಗಳನ್ನು ನಾವು ಸೃಷ್ಟಿಸಬೇಕಾದರೆ ಜನಾಂಗದ ಬಹುಪಾಲು ಜನ ಮದುವೆ ಎಂಬ ಪವಿತ್ರ ಆದರ್ಶದ ಮೂಲಕ ಸಾಗಿಹೋಗಬೇಕಾಗಿದೆ ಎಂದು ನನಗೆ ತೋರುವುದು.''

ನಮ್ಮಲ್ಲಿ ಕೆಲವರು ಈ ಪತ್ರ ಸ್ವಾಮಿಜಿಯವರೇ ಭಾವಿಸಿದುದಕ್ಕಿಂತ ಹೆಚ್ಚು ಪರಿಣಾಮಕಾರಿಯಾದುದು ಎಂದು ಭಾವಿಸುತ್ತೇವೆ. ಮಹಾ ತತ್ತ್ವದ ಕೊನೆಯ ಮಾತೆ ಇದು: ''ಏಕ ಮತ್ತು ಅನೇಕದಲ್ಲಿ ಒಂದೇ ಸತ್ಯವನ್ನು ನೋಡುವುದು. ಜಿತೇಂದ್ರಿಯತೆ ಮತ್ತು ಏಕಾಗ್ರತೆಯ ಆದರ್ಶ ವೆಂಬ ಗುರಿಯೆಡೆಗೆ ಹೋಗಬೇಕಾದರೆ ಪವಿತ್ರ ಗೃಹಸ್ಥಾಶ್ರಮದ ತರಬೇತೇ ದಾರಿ. ಇದು ಸತ್ಯವಾದರೆ ಜೀವನದಲ್ಲಿ ಯಾವ ಕರ್ತವ್ಯ ನಮ್ಮ ಪಾಲಿಗೆ ಬರುವುದೋ ಅದನ್ನು ಮಾಡುವುದು ಕೂಡ ಪ್ರಾರ್ಥನೆ ಮತ್ತು ಧ್ಯಾನ ನೀಡುವ ಆತ್ಮಸಾಕ್ಷಾತ್ಕಾರವನ್ನೇ ನೀಡುವುದು ಎಂಬುದು ನಿರ್ವಿವಾದ ವಾಯಿತು. ಆದಕಾರಣವೆ ಶ್ರೀರಾಮಕೃಷ್ಣರು ತಮ್ಮ ಶಿಷ್ಯರಲ್ಲಿ ಭಾವೋ ನ್ಮಾದದ ಬದಲು ಚಾರಿತ್ರಶುದ್ಧಿಯನ್ನು ಒತ್ತಿ ಹೇಳುತ್ತಿದ್ದುದಕ್ಕೆ ಕಾರಣ ಗೊತ್ತಾಗುವುದು. ವಿವೇಕಾನಂದರು ಪದೇಪದೇ 'ಶಕ್ತಿ' 'ಶಕ್ತಿ' ಎಂದು ಹೇಳುತ್ತಿದ್ದುದರ ಅರ್ಥವೂ ಕೂಡ ಇದೇ ಎಂದು ಕಾಣುವುದು.

ಇದಕ್ಕೆ ಕಾರಣ ಸುಲಭವಾಗಿದೆ. ಏಕ ಮತ್ತು ಅನೇಕಗಳೆರಡು ಒಂದೇ ಮನಸ್ಸು ಬೇರೆಬೇರೆ ಕಾಲದಲ್ಲಿ ಬೇರೆಬೇರೆ ಸ್ಥಿತಿಯಲ್ಲಿ ನೋಡಿದ ಏಕಮಾತ್ರ ಸತ್ಯವಾದರೆ, ಚಾರಿತ್ರಶುದ್ಧಿಯೇ ಆಧ್ಯಾತ್ಮಿಕತೆ ಎಂದು ಹೇಳಬೇಕಾಗುವುದು. ಒಬ್ಬ ಮಹಾಜ್ಞಾನಿ ಹೇಳಿದಂತೆ "ಮಹತ್ವ ಎಂಬುದು ಜೀವನದ ಸಾಧಾರಣ ವಸ್ತುಗಳನ್ನು ಸ್ವೀಕರಿಸಿ ನಿಜವಾಗಿ ಅದರೊಡನೆ ಇರುವುದು. ಪವಿತ್ರತೆ ಎಂದರೆ ಪರಮಪ್ರೇಮ ಮತ್ತು ಸೇವಾಪರಾಯಣತೆ." ಅಂತೂ ಈ ಸರಳ ಸತ್ಯಗಳು ಹೊಸ ಸಂದೇಶದ ಸಾರವಾಗಿ ಕಾಣುವುದು. ಇದು ಸರಿ ಎಂದು ಒಪ್ಪಿಕೊಳ್ಳುವುದಕ್ಕೆ ಸ್ವಾಮಿಜಿಯ ವಾಕ್ಯವೇ ಇದು: "ಶ್ರೇಷ್ಠತಮ ಸತ್ಯ ಯಾವಾಗಲೂ ಅತ್ಯಂತ ಸರಳವಾಗಿರುವುದು."



೨೩

## ಅತೀಂದ್ರಿಯ ಘಟನೆಗಳು ಮತ್ತು ಸ್ವಾಮಿಜಿ

ನಿಸ್ಸಂಶಯವಾಗಿ ಭರತಖಂಡ ಮಾನಸಿಕ ಶಾಸ್ತ್ರದ ತೌರೂರು. ಎಲ್ಲಾ ಜನಾಂಗಕ್ಕಿಂತ ಹೆಚ್ಚಾಗಿ ಹಿಂದೂಗಳಿಗೆ ಮಾನವರು ಮನಸ್ಸಿನಂತೆ ತೋರುವರು. ಮನಸ್ಸಿನ ಏಕಾಗ್ರತೆಯೆ ಅವರ ಜೀವನದ ಉದ್ದೇಶ. ಜಾಣತನ ಮತ್ತು ಪ್ರತಿಭೆ, ಸಾಧಾರಣವಾಗಿ ಒಳ್ಳೆಯದಾಗಿರುವುದು ಮತ್ತು ಮಹಾತ್ಮನಾಗಿರುವುದು, ನೈತಿಕ ದೌರ್ಬಲ್ಯ ಮತ್ತು ಶಕ್ತಿ ಇವುಗಳಿಗೆ ಇರುವ ವ್ಯತ್ಯಾಸವೆ ಏಕಾಗ್ರತೆಯ ತರತಮದಲ್ಲಿದೆ. ಅನಾದಿ ಕಾಲದಿಂದಲೂ ಮಾನಸಿಕ ಶಾಸ್ತ್ರವನ್ನು ಒಂದು ವಿಜ್ಞಾನದಂತೆ ರೂಢಿಸಿರುವರು. ಅದರ ಪರಿಣಾಮವಾಗಿಯೇ ಇದು ಹೀಗಿರುವುದು. ಜನರಿಗೆ ಬರವಣಿಗೆ ತಿಳಿಯುವುದಕ್ಕಿಂತ ಮುಂಚೆಯೇ ಅವರ ಭಾವನೆ ಮತ್ತು ಯೋಚನೆಗಳನ್ನು ಇತರರಿಗೆ ಮಾತಿನ ಮೂಲಕ ವ್ಯಕ್ತಗೊಳಿಸುತ್ತಿದ್ದರು. ವೈಜ್ಞಾನಿಕ ಅನ್ವೇಷಣೆಗೆ ಪ್ರಯೋಗಶಾಲೆ ಮತ್ತು ಯಂತ್ರಗಳನ್ನು ಕಂಡುಹಿಡಿಯುವುದಕ್ಕೆ ಶತಶತಮಾನಗಳು ಮುಂಚೆಯೇ ಮಾನಸಿಕ ಶಾಸ್ತ್ರದ ಮೇಲೆ ಪ್ರಯೋಗ ನಡೆಸುವುದನ್ನು ಕಲಿತಿದ್ದರು.

ಹಲವು ಕಾಲದಿಂದ ಸಂಗ್ರಹವಾದ ಮಾನಸಿಕ ಜ್ಞಾನಭಂಡಾರದೊಳಗೆ ಪಾಶ್ಚಾತ್ಯರಿಗೆ ಕೆಲವು ಅಸಾಧಾರಣವಾಗಿಯೂ ಮತ್ತೆ ಕೆಲವು ಪವಾಡದಂತೆಯೂ ಕಂಡಿರುವುದರಲ್ಲಿ ಆಶ್ಚರ್ಯವಿಲ್ಲ. ವಶೀಕರಣ ಮತ್ತು ಇನ್ನೂ ಕೆಲವು ಘಟನೆಗಳಿಂದ ರೋಗವನ್ನು ಗುಣಮಾಡುವುದು, ಮತ್ತೊಬ್ಬನಲ್ಲಿರುವ ಆಲೋಚನೆಗಳನ್ನು ಓದುವುದು, ದೂರದಲ್ಲಿರುವುದನ್ನು ಕೇಳುವುದು ನೋಡುವುದು ಇತ್ಯಾದಿ ಶಾಸ್ತ್ರಗಳು ರಾಜಯೋಗ ಶಾಸ್ತ್ರವನ್ನು ಬಲ್ಲ ಭಾರತೀಯರಿಗೆ ಕಷ್ಟವಾಗಿಕಾಣುವುದಿಲ್ಲ.

ವೈಜ್ಞಾನಿಕ ಭಾವನೆಗಳಿಂದ ಘಟನೆಗಳು ಹೇಗೆ ಆಗುತ್ತವೆ ಎಂದು ಅರಿತು, ಅವುಗಳನ್ನು ಕ್ರೋಢೀಕರಿಸುವುದು ಎಷ್ಟು ಪ್ರಯೋಜನ ಎನ್ನುವುದು ನಮಗೆಲ್ಲ ಗೊತ್ತು. ಒಂದು ರೋಗ ಎಷ್ಟೇ ಅಪರೂಪವಾದರೂ ಚಿಂತೆಯಿಲ್ಲ. ಅದು ವೈದ್ಯನ ಗಮನಕ್ಕೆ ಬರಬೇಕು. ಅನಂತರ ಅದಕ್ಕೆ ಮನುಷ್ಯನ ಮನಸ್ಸಿನಲ್ಲಿ ಒಂದು ಸ್ಥಾನವಿದೆ. ಅದೊಂದು ಅದ್ಭುತವಲ್ಲ,

ಏಕೆಂದರೆ ಇಂದೊ ನಾಳೆಯೊ ಅದನ್ನು ವರ್ಗೀಕರಿಸುತ್ತಾರೆ. ಅದಕ್ಕೆ ಒಂದು ಹೆಸರು ಬರುವುದು. ಆ ರೋಗ ಹೇಗೆ ಆಗುವುದು, ಅದಕ್ಕೆ ಚಿಕಿತ್ಸೆ ಏನು ಎಂಬುದು ಕಾಲಕ್ರಮೇಣ ಗೊತ್ತಾಗುವುದು.

ಯಾವುದನ್ನು ಮಾನಸಿಕ ಘಟನೆಗಳು ಎನ್ನುತ್ತಾರೊ ಅವುಗಳಲ್ಲಿ ನಿರ್ದಿಷ್ಟವಾದ ಸ್ವಲ್ಪ ಭಾಗ ಈ ಗುಂಪಿಗೆ ಸೇರಿರುವುದು. ಈ ಗುಂಪಿಗೆ ಸೇರಿದ ಘಟನೆಗಳು ನಿಜವಾಗಿದ್ದರೆ ಇದನ್ನು ಅಸಾಧಾರಣ ಎಂದು ಹೇಳ ಲಾಗುವುದಿಲ್ಲ. ಗಾಳಿಯನ್ನು ದ್ರವರೂಪಕ್ಕೆ ತರುವುದು, ರೇಡಿಯಮ್ ಲೋಹವನ್ನು ತಯಾರು ಮಾಡಿದಂತೆಯೇ ಸಾಧಾರಣವಾದ ವಿಷಯ ವಾಗುವುದು. ಅಸಾಧಾರಣ ಎಂಬ ಪದ ಯಾವಾಗಲೂ ಸಂದೇಹಕ್ಕೆ ಆಸ್ಪದಕೊಡುವುದು. ಒಮ್ಮೆ ಇದಾಗುವುದು ಸಾಧ್ಯ ಎಂದು ನಿಶ್ಚಿತವಾದರೆ ಇದು ಯಾವುದೋ ಪ್ರಕೃತಿನಿಯಮಾನುಸಾರ ನಡೆಯುವುದು. ಆದಕಾರಣ ಅದನ್ನು ಅಸಾಧಾರಣ ಎಂದು ಹೇಳಲಾಗುವುದಿಲ್ಲ. ಇಂಡಿಯಾ ದೇಶದಲ್ಲಿ ಇದನ್ನು ಮಾನವ ತನ್ನ ಸ್ವಭಾವವನ್ನು ವಿಕಾಸಗೊಳಿಸಿದ್ದುದರಿಂದ ಆಯಿತು ಎನ್ನುವನು. ಹಾಗೆ ಆದುದನ್ನು ತಿಳಿದುಕೊಳ್ಳುವುದಕ್ಕೆ ಕಾರಣ ಬಾಹ್ಯವಸ್ತುವಲ್ಲ, ಅದನ್ನು ಅರಿಯುವ ಚೈತನ್ಯ ಜಾಗೃತವಾದುದು. ಎಂದು ಮಾನವನ ಆಂತರಿಕ ಶಕ್ತಿ ವಿಕಾಸವಾಗಿ ಆ ಮಟ್ಟವನ್ನು ಮುಟ್ಟು ವುದೋ ಆಗ ಆ ಮನಸ್ಸಿಗೆ ಅದು ವೇದ್ಯವಾಗುವುದು.

ದಕ್ಷಿಣೇಶ್ವರದಲ್ಲಿ ವಾಸಿಸುತ್ತಿದ್ದ ಶ್ರೀರಾಮಕೃಷ್ಣ ಪರಮಹಂಸರ ವಿಷಯವಾಗಿ ಹಲವು ವರುಷಗಳು ಅವರ ಶಿಷ್ಯರಿಗೆ ಶ್ರೀರಾಮಕೃಷ್ಣರಲ್ಲಿ ಏಕಾಗ್ರತೆಯ ಪರಿಣಾಮದ ಫಲವಾಗಿ ಹಲವು ಘಟನೆಗಳನ್ನು ಕಂಡರು. ಶಿಷ್ಯರು ಬರುವುದನ್ನೇ ಕಾಯುತ್ತಿದ್ದು ಅವರು ತಮ್ಮ ಜೇಬಿನ ಒಳಗೆ ಬರೆದಿಟ್ಟ ಪ್ರಶ್ನೆಗಳಿಗೆ ಶ್ರೀರಾಮಕೃಷ್ಣರು ಶಿಷ್ಯರು ಕೇಳದೆಯೆ ಉತ್ತರ ಹೇಳು ತ್ತಿದ್ದರು. ಯಾರಾದರೊಬ್ಬರು ಆಹಾರ ಬಟ್ಟೆ ಚಾಪೆ ಮುಂತಾದುವನ್ನು ಮುಟ್ಟಿದರೆ ಆ ಮುಟ್ಟಿದ ವಸ್ತುವನ್ನು ನೋಡಿಯೇ ಮುಟ್ಟಿದವನ ಶೀಲ ವನ್ನು ಹೇಳಬಲ್ಲವರಾಗಿದ್ದರು. ಇವರ ಇಂದ್ರಿಯ ಶಕ್ತಿ ಅಷ್ಟು ಸೂಕ್ಷ್ಮ ವಾಗಿತ್ತು. "ನೋಡಿ, ಇದನ್ನು ನಾನು ಊಟಮಾಡಬಲ್ಲೆ, ಇದನ್ನು ಕಳುಹಿಸಿರುವವರು ಒಳ್ಳೆಯವರಾಗಿಬೇಕು" ಎನ್ನುತ್ತಿದ್ದರು. ಇವರು ಬಿಟ್ಟುದನ್ನು ಇವರ ಅಂಗೋಪಾಂಗಗಳು ನರಗಳು ಎಲ್ಲವೂ ಬಿಟ್ಟತ್ತು. ಇವರು ನಿದ್ರಿಸುತ್ತಿರುವಾಗಲೂ ಯಾರಾದರೂ ನಾಣ್ಯವನ್ನು ದೇಹಕ್ಕೆ

ಸೋಕಿಸಿದರೆ ಸಾಕು ದೇಹವೆಲ್ಲಾ ಕಂಪಿಸುತ್ತಿತ್ತು. ಒಡೆಯನ ಅಪ್ಪಣೆ ಯಿಲ್ಲದೆ ಮರೆತು ತಂದ ಪುಸ್ತಕವನ್ನೋ ಹಣ್ಣನ್ನೋ ಅವರ ಕೈಗಳು ತಾವಾಗಿಯೇ ಅದರೊಡೆಯನಿಗೆ ಕೊಡಲು ಹೋಗುತ್ತಿದ್ದವು.

ಯಾವ ಭಾರತೀಯ ಮನೋಶಾಸ್ತ್ರಜ್ಞನೂ, ಪ್ರಪಂಚದ ಮಹಾ ತಪಸ್ವಿಗಳು ದೇವರೊಡನೆ ಮಾತನಾಡಿದರು ಎಂಬುದನ್ನು ಒಪ್ಪಿಕೊಳ್ಳುವು ದಿಲ್ಲ. ಆದರೆ ಹಾಗೆ ಮಾತನಾಡಬೇಕಾದರೆ ಮನಸ್ಸು ಯಾವ ಸ್ಥಿತಿಯಲ್ಲಿರ ಬೇಕೋ ಆ ಸ್ಥಿತಿ ಅವರಿಗೆ ಸಿದ್ಧಿಸಿತ್ತು ಎನ್ನುವರು. ಶ್ರೀರಾಮಕೃಷ್ಣರ ಶಿಷ್ಯರು ಈ ವಿಷಯವಾಗಿ ಅವರ ಜೀವನದಲ್ಲಿ ಬೇಕಾದಷ್ಟು ಉದಾಹರಣೆ ಗಳನ್ನು ಕಂಡರು. ಶ್ರೀರಾಮಕೃಷ್ಣರು ಇತರರಿಗೆ ಕಾಣದ ದೇವರೊಡನೆ ಗಂಟೆಗಟ್ಟಲೆ ಮಾತನಾಡುತ್ತಿದ್ದದನ್ನು ಅವರ ಶಿಷ್ಯರು ನೋಡುತ್ತಿದ್ದರು. ಪರಮಹಂಸರು ಮಾತನಾಡುತ್ತಿದ್ದುದು ಮಾತ್ರ ಅವರಿಗೆ ಕೇಳಿಸುತ್ತಿತ್ತು.

ಶ್ರೀರಾಮಕೃಷ್ಣರ ಅನುಭವಗಳ ಹಿಂದೆಲ್ಲಾ ಮಾನವಕೋಟಿಯನ್ನು ಉದ್ಧಾರಮಾಡಬೇಕು ಎಂಬ ಒಂದು ಮಹೋದ್ದೇಶವಿತ್ತು. ಅನಂತರ ಸ್ವಾಮಿಜಿ ಈ ವಿಷಯವಾಗಿ ಹೀಗೆ ಹೇಳುತ್ತಿದ್ದರು: ಸಂಜೆಹೊತ್ತು ಪ್ರಾರ್ಥ ನಾಸಮಯದಲ್ಲಿ ಶ್ರೀರಾಮಕೃಷ್ಣರು ಕೆಲವು ವೇಳೆ ನೆಲದ ಮೇಲೆ ಯಾತನೆ ಯಿಂದ ಹೊರಳಾಡುತ್ತಾ ಮತ್ತೊಮ್ಮೆ ನಾಯಿಯ ಜನ್ಮವನ್ನಾದರೂ ಪಡೆದು ಧರೆಗೆ ಬರಲು ಇಚ್ಛಿಸುತ್ತಿದ್ದರು. ಇದರಿಂದ ಮತ್ತೊಂದು ಜೀವಿಯ ಉದ್ಧಾರವಾಗುವಂತೆ ಇದ್ದರೆ ಸಾಕು ಎನ್ನುತ್ತಿದ್ದರು. ಕೆಲವು ವೇಳೆ ಅವರ ಮನಸ್ಸನ್ನು ಸೇವೆಯಿಂದ ತಿರುಗಿಸಿ ಆನಂದದ ಕಡೆಗೆ ಒಯ್ಯಲು ಬರುತ್ತಿದ್ದ ಪ್ರಲೋಭನೆಗಳ ವಿಷಯವಾಗಿ ಮಾತನಾಡುತ್ತಿದ್ದರು. ಭಾವಸಮಾಧಿ ಯಲ್ಲಿದ್ದಾಗ ಶ್ರೀರಾಮಕೃಷ್ಣರು ತಾಯಿಯೊಡನೆ ಮಾತನಾಡುತ್ತಿದ್ದುದನ್ನು ಅವರ ಕೆಲವು ಶಿಷ್ಯರು ಕೇಳುತ್ತಿದ್ದರು. ಆ ಸಮಯದಲ್ಲಿ ಯಾರಿಗೊ ಸ್ವಲ್ಪ ಸಹಾಯಮಾಡಲು, ಆಟದಲ್ಲಿ ಭಾಗವಹಿಸಲು ಸ್ವಲ್ಪ ಪ್ರಪಂಚಕ್ಕೆ ಹೋಗಿ ಬರುತ್ತೇನೆ ಎಂದು ಶ್ರೀರಾಮಕೃಷ್ಣರು ಮಾತನಾಡುತ್ತಿದ್ದರು. ಹಾಗೆ ಅವರು ಹಿಂತಿರುಗಿ ಬರುತ್ತಿದ್ದಾಗ ಅನಂತಾನಂದ ಮತ್ತು ಜ್ಞಾನ ವನ್ನು ಮಾನವಕೋಟಿಯ ಹಿತಕ್ಕಾಗಿ ತರುತ್ತಿದ್ದರು. ಸ್ವಾಮಿ ವಿವೇಕಾ ನಂದರು ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಮಾಡಿದ ಉಪನ್ಯಾಸದಲ್ಲಿ ಸಮಾಧಿಯಲ್ಲಿರುವ ಅಪ್ರಜ್ಞೆಗೂ, ಮೂರ್ಛೆಯ ಸಮಯದಲ್ಲಿರುವ ಅಪ್ರಜ್ಞೆಗೂ ಇದೇ ವ್ಯತ್ಯಾಸ ಎನ್ನುತ್ತಿದ್ದರು. ಸ್ವಾಮಿಜಿ ಹೀಗೆ ನಿರ್ಧರಿ

ಸುವುದಕ್ಕೆ ಕಾರಣ ಅವರು ನಿತ್ಯವೂ ತಮ್ಮ ಗುರುದೇವನ ಜೀವನದಲ್ಲಿ ಇದನ್ನು ನೋಡುತ್ತಿದ್ದುದೇ ಆಗಿತ್ತು.

ಶ್ರೀರಾಮಕೃಷ್ಣರ ಜೀವನದಲ್ಲಿ ಇನ್ನೂ ಹಲವು ವಿಶೇಷಸ್ವಭಾವಗಳಿದ್ದವು. ಇವರ ದೇಹದ ನರಗಳೆಲ್ಲ ಸಂಪೂರ್ಣವಾಗಿ ಇವರ ಸ್ವಾಧೀನದಲ್ಲಿದ್ದವು. ಜೀವನದ ಕೊನೆಗಾಲದ ಸಮಯದಲ್ಲಿ ತಮ್ಮ ಮನಸ್ಸನ್ನು ಗಂಟಲಿನಿಂದ ಸಂಪೂರ್ಣ ತೆಗೆದು ವೈದ್ಯರಿಗೆ ಶಸ್ತ್ರಚಿಕಿತ್ಸೆಮಾಡಲು ಅವಕಾಶಕೊಟ್ಟರು. ಆ ಭಾಗಕ್ಕೆ ನೋವು ಆಗದಂತೆ ಒಂದು ಇಂಜೆಕ್ಷನ್ ಕೊಟ್ಟಂತೆ ಇತ್ತು. ಅವರು ಮತ್ತೊಬ್ಬನನ್ನು ಪರೀಕ್ಷಿಸುತ್ತಿದ್ದ ರೀತಿಕೂಡ ಅಸಾಧಾರಣವಾಗಿತ್ತು. ದೇಹಕ್ಕೆ ಸಂಬಂದಪಟ್ಟ ಅಂಗ ವಿಶೇಷಗಳೆಲ್ಲ ಅವರಿಗೆ ಆ ವ್ಯಕ್ತಿಯ ಶೀಲವನ್ನು ವ್ಯಕ್ತಗೊಳಿಸುವಂತೆ ಇತ್ತು. ತಮ್ಮ ಬಳಿಗೆ ಬಂದ ಶಿಷ್ಯನನ್ನು ನಿದ್ರಾಸ್ಥಿತಿಗೆ ಒಯ್ದು, ಅಲ್ಲಿ ಕೆಲವು ಪ್ರಶ್ನೆಗಳನ್ನು ಹಾಕಿ ಆ ಜೀವಿಯ ಮನಸ್ಸಿನ ಅಂತರಾಳದಿಂದ ಅದಕ್ಕೆ ಉತ್ತರ ಪಡೆಯುತ್ತಿದ್ದರು. ಇತರರು ಮಾಡುವ ಯಾವ ಸಣ್ಣ ಕೆಲಸವಾಗಲಿ ಮಾತಾಗಲಿ ಆ ವ್ಯಕ್ತಿಯ ಶೀಲವನ್ನು ಸಾರುತ್ತಿದ್ದುವು. ಗಾಳಿಯಲ್ಲಿ ಹಾರುವ ಹುಲ್ಲಿನೆಸಳೊಂದು ಗಾಳಿ ಎತ್ತ ಬೀಸುತ್ತಿದೆ ಎಂಬುದನ್ನು ಸಾರುವಂತೆ ಇತ್ತು ಅವರಿಗೆ. ಕೆಲವು ವೇಳೆ ಸ್ತ್ರೀಪುರುಷರು ಅವರಿಗೆ ಒಂದು ಕನ್ನಡಿಯ ಬೀರುವಿನಂತೆ ತೋರುತ್ತಿದ್ದರು. ಅದರ ಒಳಗಡೆ ಇರುವುದೆಲ್ಲ ಇವರಿಗೆ ಕಾಣುತ್ತಿತ್ತು.

ಎಲ್ಲಕ್ಕಿಂತ ಹೆಚ್ಚಾಗಿ ಕೇವಲ ತಮ್ಮ ಸ್ಪರ್ಶಮಾತ್ರದಿಂದ ಶ್ರೇಷ್ಠ ಆಧ್ಯಾತ್ಮಿಕ ಅನುಭವಗಳನ್ನು ಇತರರಿಗೆ ಕೊಡಬಲ್ಲವರಾಗಿದ್ದರು. ಅವರ ಜೀವನದಲ್ಲೆಲ್ಲ ಇದು ಅತ್ಯಂತ ಪ್ರಭಾವಕಾರಿಯಾಗಿರುತ್ತಿತ್ತು. ಇವರ ಬಳಿಗೆ ಬರುತ್ತಿದ್ದ ಸ್ತ್ರೀಯರಿಗೆ ಸಮಾಧಿ ದೊರಕಿದ ಪ್ರಸಂಗ ಎಲ್ಲರಿಗೂ ಗೊತ್ತಿದೆ. ಇದಕ್ಕಿಂತ ಹೆಚ್ಚಾಗಿ ಶ್ರೀರಾಮಕೃಷ್ಣರು ಪ್ರಪಂಚವನ್ನು ತೊರೆಯುವುದಕ್ಕೆ ಕೆಲವು ವಾರಗಳ ಮುಂಚೆ ನಡೆದ ಒಂದು ಘಟನೆಯನ್ನು ಸರಳಸ್ವಭಾವದ ಭಕ್ತರೊಬ್ಬರು ನನಗೆ ಹೇಳಿದರು. ಕಾಸೀಪುರದ ತೋಟದಲ್ಲಿ ಹಲವು ಜನ ಒಂದುದಿನ ನಿಂತಿದ್ದರು. ಪರಮಹಂಸರು ಒಬ್ಬರನ್ನು ಮುಟ್ಟಿ "ಆಜ್‌ಥಾಕ್" "ಸಾಕು ಇಷ್ಟೆ ಇಂದಿಗೆ" ಎಂದು ಹೇಳಿದರು. ಮತ್ತೊಬ್ಬನನ್ನು ಮುಟ್ಟಿ "ಚೈತನ್ಯ ಹೋಕ್" ಚೈತನ್ಯ ಬೆಳಗಲಿ ಎಂದರು. ಹೀಗೆಯೆ ಹಲವರನ್ನು ಮುಟ್ಟಿ ಆಶೀರ್ವದಿಸಿದರು. ಒಬ್ಬೊಬ್ಬರಿಗೆ ಒಂದೊಂದು ಅನುಭವಗಳಾದುವು. ಕೆಲವರ ಆ ಅನಂತ ದುಃಖಭಾವನೆ

ಎದ್ದಿತು; ಮತ್ತೊಬ್ಬರಿಗೆ ತಮಗೆ ಕಾಣುವುದೆಲ್ಲ ಭಾವನೆಯ ಚಿಹ್ನೆಯಂತೆ ತೋರತೊಡಗಿತು. ಮೂರನೆಯವರಿಗೆ ಮಹದಾನಂದದ ಅನುಭವ ಲಭಿಸಿತು. ಮತ್ತೊಬ್ಬನಿಗೆ ದಿವ್ಯಜ್ಯೋತಿ ದರ್ಶನವಾಯಿತು. ಅಂದಿನಿಂದ ಅವನು ಎಲ್ಲಿ ಹೋದರೂ ಅದು ಬಿಡುತ್ತಿರಲಿಲ್ಲ. ಅಂದಿನಿಂದ ದಾರಿಯ ಪಕ್ಕದಲ್ಲಿರುವ ಯಾವ ದೇವಾಲಯವಾದರೂ ಆಗಲಿ ಅಲ್ಲೆಲ್ಲಾ ಆ ಜ್ಯೋತಿ ಆವರಣದೊಳಗೆ ವಿಗ್ರಹದಲ್ಲಿರುವ ಚಿನ್ಮಯಮೂರ್ತಿ ಕಂಗೊಳಿಸುತ್ತಿತ್ತು. ಅದು ಕೆಲವು ವೇಳೆ ದುಃಖದ ಭಾವವನ್ನು ಧರಿಸುತ್ತಿತ್ತು, ಮತ್ತೆ ಕೆಲವು ವೇಳೆ ಆನಂದ ಸ್ವರೂಪದಂತೆ ಕಾಣುತ್ತಿತ್ತು.

ಶ್ರೀರಾಮಕೃಷ್ಣರು ಕೆಲವು ವೇಳೆ ಪ್ರತಿಯೊಬ್ಬರಲ್ಲಿ ಸುಪ್ತವಾಗಿರುವ ಚೈತನ್ಯವನ್ನು ಪೂರ್ಣವಾಗಿ ವಿಕಾಸವಾಗುವಂತೆ ಮಾಡುತ್ತಿದ್ದರು. ಮತ್ತೆ ಕೆಲವುವೇಳೆ ಆ ವ್ಯಕ್ತಿಗೆ ಅನುಭವವನ್ನು ನೀಡುತ್ತಿದ್ದರು. ಹೀಗೆ ಅವರ ಶಿಷ್ಯರಲ್ಲೆಲ್ಲ ನಮಗಿಂದು ಕಾಣುವ ನಿರ್ಭಯ ಸತ್ಯಾನ್ವೇಷಣೆ ಮತ್ತು ವಿಮರ್ಶಾತ್ಮಕ ಬುದ್ಧಿಯನ್ನು ರೂಢಿಸಿದರು. "ನಾವು ಪರೀಕ್ಷೆ ಮಾಡದೆ ಯಾವುದನ್ನೂ ನಂಬುವುದಿಲ್ಲ. ನಮಗೆ ಹೀಗೆ ಶಿಕ್ಷಣ ಕೊಟ್ಟರುವರು ಶ್ರೀರಾಮಕೃಷ್ಣರು" ಎಂದರು ರಾಮಕೃಷ್ಣಾನಂದ ಸ್ವಾಮಿಗಳೊಬ್ಬರು. ನಾನು ಮತ್ತೊಬ್ಬ ಶಿಷ್ಯರನ್ನು ಶ್ರೀರಾಮಕೃಷ್ಣರು ಹೇಗೆ ಶಿಷ್ಯರನ್ನು ತರಬೇತು ಮಾಡುತ್ತಿದ್ದರು ಎಂದು ಕೇಳಿದೆ. ಅವರು ಸ್ವಲ್ಪ ಹೊತ್ತು ಆಲೋಚನೆಮಾಡಿ ಅನಂತರ ಗಂಭೀರವಾಗಿ ಹೇಳಿದರು; "ಶ್ರೀರಾಮಕೃಷ್ಣರು ಸತ್ಯದ ಅನುಭವವನ್ನು ಕೊಡುತ್ತಿದ್ದರು. ಇದರಿಂದ ಜ್ಞಾನ ಬರುತ್ತಿತ್ತು. ಯಾರಿಗೂ ಇದನ್ನು ಅಲ್ಲಗಳೆಯಲಾಗುತ್ತಿರಲಿಲ್ಲ." ಸ್ವಾಮಿ ವಿವೇಕಾನಂದರೇ ಒಂದು ಹಿಂದಿನ ಉಪನ್ಯಾಸದಲ್ಲಿ "ಅಥವಾ ಸಿದ್ಧನಾದ ಒಬ್ಬ ಮಹಾ ಪುರುಷನ ದಯೆಯಿಂದ ನಾವು ಮುಕ್ತರಾಗಬಹುದು" ಎಂದು ಹೇಳುವರು.

ಗುರುವಿನ ಜೀವನವೇ ಶಿಷ್ಯನ ಅಂಗೈಮೇಲಿನ ನಿಧಿ. ಮಾನವನ ಮನಸ್ಸಿಗೆ ಯಾವ ಯಾವ ಅನುಭವವನ್ನು ಪಡೆಯಲು ಸಾಧ್ಯವೋ ಅದನ್ನೆಲ್ಲಾ ಅನುಭವಿಸಿದುದರಿಂದಲೇ ಪಾಶ್ಚಾತ್ಯದೇಶಗಳಿಗೆ ಬಂದಾಗ ಅವರು ಮಾನವನ ಜ್ಞಾನವನ್ನೆಲ್ಲಾ ಅಪ್ರಜ್ಞೆ [Sub-Conscious] ಪ್ರಜ್ಞೆ [Coscious] ಅತಿಪ್ರಜ್ಞೆ [Super Conscious] ಎಂದು ಮೂರು ಭಾಗ ಮಾಡಿದರು. ಮೊದಲು ಎರಡು ಶಬ್ದಗಳು ಯೂರೋಪ್ ಮತ್ತು

ಅಮೆರಿಕಾ ದೇಶಗಳಲ್ಲಿ ಬಳಕೆಯಲ್ಲಿದ್ದವು. ಮೂರನೆಯದನ್ನು ಸ್ವಾಮಿಜಿ ತಾವೆ ತಮ್ಮ ಸ್ವಂತ ಅನುಭವದಿಂದ ಮಾನಸಿಕ ಶಾಸ್ತ್ರದ ಭಂಡಾರಕ್ಕೆ ಸೇರಿಸಿದರು. ಯಾವುದನ್ನು ನಾವು ಪ್ರಜ್ಞೆ ಎನ್ನುವೆವೋ ಅದು ಅಪ್ರಜ್ಞೆಗೂ ಅತಿಪ್ರಜ್ಞೆಗೂ ಮಧ್ಯೆ ಇರುವ ಸಣ್ಣ ಒಂದು ತೆರೆಯಂತೆ ಎಂದರು ಸ್ವಾಮಿಜಿ. ಪಾಶ್ಚಾತ್ಯರು ಪ್ರಜ್ಞೆಯ ವಿಷಯವಾಗಿ ಅಷ್ಟೊಂದು ಕೊಚ್ಚಿಕೊಳ್ಳುತ್ತಿದ್ದುದನ್ನು ಕೇಳಿದಾಗ ಅದನ್ನು ನಂಬಲು ಸಾಧ್ಯವೇ ಆಗಲಿಲ್ಲ. ಪ್ರಜ್ಞೆ! ಇದರಿಂದ ಏನು ಅಷ್ಟುಪ್ರಯೋಜನ? ಅಗಮ್ಯವಾದ ಅಪ್ರಜ್ಞೆಯ ಆಳದೊಂದಿಗೆ ಅಥವಾ ಅತಿಪ್ರಜ್ಞೆಯ ಹೈಮಾಚಲದೆತ್ತರಕ್ಕೆ ಹೋಲಿಸಿ ನೋಡಿದರೆ ಪ್ರಜ್ಞೆ ಬಹಳ ಅಲ್ಪ ಎಂಬುದು ಗೊತ್ತಾಗುವುದು. ಶ್ರೀರಾಮ ಕೃಷ್ಣರು ಹತ್ತು ನಿಮಿಷಗಳಲ್ಲಿ ಒಬ್ಬನ ಅಪ್ರಜ್ಞೆಯ ಆಳದಿಂದ ಅವನ ಹಿಂದಿನದನ್ನೆಲ್ಲಾ ತಿಳಿದು ಇದರ ಆಧಾರದಿಂದ ಅವನು ಭವಿಷ್ಯದಲ್ಲಿ ಏನು ಸಾಧಿಸಬಲ್ಲನೆಂಬುದನ್ನು ನಿಷ್ಕರ್ಷಿಸಿಬಿಡುತ್ತಿದ್ದರು. ಇದನ್ನು ನೋಡದೆ ಇದ್ದರೆ ನಾನು ಇದರಲ್ಲಿ ನಂಬುವುದಕ್ಕೆ ಆಗುತ್ತಲೇ ಇರಲಿಲ್ಲ ಎನ್ನುತ್ತಿದ್ದರು ಸ್ವಾಮಿಜಿ.

ರಾಜಯೋಗದಲ್ಲಿ ಬರುವ ಅಂತರ್‌ದೃಷ್ಟಿ (Intution) ಸತ್ಯವಾಗಿದ್ದರೆ ಅದೆಂದಿಗೂ ಯುಕ್ತಿಗೆ ವಿರೋಧವಾಗಲಾರದು ಎಂಬುದು ಕೂಡ ಅನುಭವ ವೇದ್ಯ. ದಕ್ಷಿಣೇಶ್ವರದ ಮಹಾಪುರುಷರಿಗೆ ಎಷ್ಟೋ ಬಗೆಯ ಅಂತರ್‌ದೃಷ್ಟಿ ಸಾಧ್ಯವಾಗಿತ್ತು. ಆದರೆ ಇತರ ಸಾಧಾರಣ ಮಾರ್ಗವಾಗಿ ಯಾವುದನ್ನು ಪರೀಕ್ಷಿಸಲು ಸಾಧ್ಯವೋ ಅದಕ್ಕೆಲ್ಲಾ ಇವರು ಅತೀಂದ್ರಿಯ ಶಕ್ತಿಯನ್ನು ಉಪಯೋಗಿಸುತ್ತಿರಲಿಲ್ಲ. ಯಾರೋ ಒಬ್ಬ ವಿಚಿತ್ರ ಬೈರಾಗಿ ತಾನು ಊಟವನ್ನೇ ಮಾಡುವುದಿಲ್ಲ ಎಂದು ಹೇಳಿಕೊಳ್ಳುವವನು ದಕ್ಷಿಣೇಶ್ವರಕ್ಕೆ ಬಂದನು. ಶ್ರೀರಾಮಕೃಷ್ಣರು ಅವನನ್ನು ಪರೀಕ್ಷಿಸಲು ಅತೀಂದ್ರಿಯ ಶಕ್ತಿಯನ್ನು ಉಪಯೋಗಿಸಲಿಲ್ಲ. ಅವನನ್ನು ಜಾಗರೂಕತೆಯಿಂದ ಪರೀಕ್ಷೆಮಾಡಲು ಕೆಲವರನ್ನು ಬಿಟ್ಟು ಆತ ಯಾವಾಗ ಏನನ್ನು ತೆಗೆದುಕೊಳ್ಳುತ್ತಾನೆ ಎಂಬುದನ್ನು ಬಂದು ಹೇಳಿ ಎಂದರು.

ಯಾವುದನ್ನೂ ಪರೀಕ್ಷೆಮಾಡದೆ ಒಪ್ಪಿಕೊಳ್ಳುತ್ತಿರಲಿಲ್ಲ. ಸಾಧಾರಣ ಜನರು ಬಲೆಗೆ ಬೀಳುವಂತಹ ಕನಸಾಗಲಿ ಭವಿಷ್ಯವಾಗಲಿ ವಾಣಿಯಾಗಲಿ ಸ್ವಾಮಿಜಿ ಒಪ್ಪಿಕೊಳ್ಳುತ್ತಲೇ ಇರಲಿಲ್ಲ. ಬೇಕಾದಷ್ಟು ಸ್ವಾಭಾವಿಕವಾಗಿ ಇವರಿಗೆ ಇವುಗಳೆಲ್ಲ ಬಂದವು. ಆದರೆ ಇವರು ಮಾತ್ರ ಇವುಗಳನ್ನೆಲ್ಲಾ

ಅಲ್ಲಗಳೆಯುತ್ತಿದ್ದರು. ಇವುಗಳಲ್ಲಿ ಸತ್ಯವಿದ್ದರೆ ನಾನು ಅವಕ್ಕೆ ವಿರೋಧ ವಾಗಿದ್ದರೂ ಬೇಕಾದರೆ ನನ್ನ ಮೇಲೆ ಪ್ರಭಾವವನ್ನು ಬೀರಲಿ ಎಂದು ಸುಮ್ಮನೆ ಇರುತ್ತಿದ್ದರು. ಯಾವುದಾದರು ಒಂದು ಭವಿಷ್ಯ ನಿಜವಾಗಿ ಕಂಡುಬರುವುದೆ ಎಂಬುದನ್ನು ಇವರಿಗೆ ಹೇಳಲು ಆಗುತ್ತಿರಲಿಲ್ಲ. ಒಮ್ಮೆ ಇಂತಹ ಭವಿಷ್ಯಗಳನ್ನು ನಂಬುವುದಕ್ಕೆ ಪ್ರಾರಂಭಿಸಿತೆಂದರೆ ಕೊನೆಯತನಕ ಗುಲಾಮನಾಗಬೇಕಾಗುವುದೆಂಬುದನ್ನು ಮರೆತಿರಲಿಲ್ಲ.

ಶ್ರೀರಾಮಕೃಷ್ಣರಿಗೆ ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಪಟ್ಟಂತಹ ದರ್ಶನಗಳು ಅಂತರ್‌ದೃಷ್ಟಿಗಳೂ ಪ್ರಾಪ್ತವಾಗುತ್ತಿದ್ದವೇ ಹೊರತು ಈ ಪ್ರಪಂಚಕ್ಕೆ ಸಂಬಂಧಪಟ್ಟ ಭವಿಷ್ಯವನ್ನು ಹೇಳುವುದು ಮುಂತಾದುವನ್ನೆಲ್ಲಾ ಅವರು ದೂರೀಕರಿಸುತ್ತಿದ್ದರು. ಅವರ ಶಿಷ್ಯರ ದೃಷ್ಟಿಯಿಂದ ಯಾರು ಹೀಗೆ ಹೇಳುವರೊ ಅವರು ತಮ್ಮ ಶಕ್ತಿಯನ್ನು ವೃಥಾ ಪೋಲುಗಳೆಯುತ್ತಿರು ವರು ಎಂದು ಭಾವಿಸಿದ್ದರು. ಒಮ್ಮೆ ಉದ್ವೇಗದಿಂದ ಹೀಗೆ ಹೇಳಿದರು: "ಇವುಗಳೆಲ್ಲ ಗೌಣ. ಇವು ನಿಜವಾದ ಯೋಗವಲ್ಲ. ಕೆಲವು ವೇಳೆ ನಾವು ಹೇಳುವುದು ಸತ್ಯ ಎಂಬುದನ್ನು ಪರೋಕ್ಷವಾಗಿ ಇವುಗಳ ಮೂಲಕ ದೃಢಪಡಿಸಬಹುದು; ಅಷ್ಟೆ. ಇಂತಹ ಕೆಲವು ಘಟನೆಗಳಾದಾಗ ಸ್ಥೂಲವಸ್ತುವಿಗಿಂತ ಬೇರೆಯಾಗಿರುವುದು ಯಾವುದೊ ಮತ್ತೊಂದು ಇರ ಬಹುದು ಎಂಬ ದೃಢತೆಯನ್ನು ನೀಡಬಹುದು. ಆದರೆ ಯಾರು ಇವು ಗಳನ್ನೇ ಅರಸುತ್ತಿರುವರೋ ಅವರು ಅಪಾಯಕ್ಕೆ ಒಳಗಾಗುವರು. ಇವು ಗಳೆಲ್ಲ ಮನಸ್ಸಿನ ಗಡಿಗೆ [Frontier] ಸಂಬಂಧಪಟ್ಟ ಪ್ರಶ್ನೆಗಳು. ಇವು ಗಳ ಮೂಲಕ ದೊರಕುವ ಜ್ಞಾನ ನಿಶ್ಚಯಾತ್ಮಕವಾಗಿಯಾಗಲಿ ದೃಢವಾಗಿ ಯಾಗಲಿ ಇರಲಾರದು. ಇವುಗಳೆಲ್ಲ ಗಡಿ ಪ್ರಶ್ನೆಗಳೆಂದು ನಾನು ಹೇಳ ಲಿಲ್ಲವೆ? ಗಡಿಯ ಮೇರೆ ಯಾವಾಗಲೂ ವ್ಯತ್ಯಾಸವಾಗುತ್ತಿರುವುದು."

ನಮಗೆ ಯಾವ ಅನುಭವವಾದರೂ ಅದನ್ನು ವಿಮರ್ಶಿಸುವುದನ್ನು ಮರೆಯಕೂಡದು. ಯಾವುದು ಅಸಾಧಾರಣವಾಗಿರುವುದೊ ಅದು ನನಗೆ ಅನುಭವವಾದಮೇಲೆ ನಾನು ಅದನ್ನು ನಂಬುತ್ತೇನೆ ಎಂಬುದು ನಮ್ಮ ದೃಷ್ಟಿಯಾಗಬೇಕು. ನಮ್ಮ ಅನುಭವವನ್ನೇ ಚೆನ್ನಾಗಿ ವಿಮರ್ಶೆ ಮಾಡ ಬೇಕು. ನಮಗೆ ಆದ ಮೊದಲನೆ ಅನುಭವಕ್ಕೇ ಮಾರು ಓಗಕೂಡದು. ಸ್ವಾಮಿಜಿಯವರು ಬಡಪೆಟ್ಟಿಗೆ ಒಪ್ಪಿಕೊಳ್ಳದ ಸ್ವಭಾವದವರಲ್ಲವಾದರೂ ಕಾಲವಾದವರು ಕೆಲವು ವೇಳೆ ಕಾಣಿಸಿಕೊಳ್ಳುತ್ತಾರೆ ಎಂಬುದನ್ನು ದೃಢ

ವಾಗಿ ನಂಬತೊಡಗಿದರು. ಒಂದು ಸಲ ಬೇಕೆಂತಲೇ ಸ್ವಾಮಿಜಿ ಹೀಗೆ ಹೇಳಿದರು: "ನಾನು ಜೀವನದಲ್ಲಿ ಎಷ್ಟೋ ವೇಳೆ ಪ್ರೇತಗಳನ್ನು ನೋಡಿರುವೆನು. ಒಂದು ಸಲ ಶ್ರೀರಾಮಕೃಷ್ಣರು ಕಾಲವಾದಾಗ ಒಂದು ಜ್ಯೋತಿ ಪುಂಜವಾದ ಅಶರೀರ ವ್ಯಕ್ತಿಯನ್ನು ಕಂಡೆ." ಆದರೆ ಇದರಿಂದ ಸ್ವಾಮಿಜಿ Seances ಅನುಭವವೆಲ್ಲ (ಪ್ರೇತ ಆವಾಹಕರ ಅನುಭವವೆಲ್ಲ) ಸರಿ ಎಂದು ಒಪ್ಪಿಕೊಳ್ಳುತ್ತಿರಲಿಲ್ಲ. ಇಂತಹ ಒಂದು ಸಮಯದಲ್ಲಿ ಪ್ರಖ್ಯಾತ ವ್ಯಕ್ತಿಯನ್ನೊಮ್ಮೆ ಸ್ವಾಮಿಜಿ ಸಂದರ್ಶಿಸಿದರು. ಅವರು ಆವನ ವಿಷಯವಾಗಿ ಇಂತಹ ಪ್ರಚಂಡ ವಿದ್ವಾಂಸ ತನ್ನ ವಿಮರ್ಶಾತ್ಮಕ ಬುದ್ಧಿಯನ್ನೆಲ್ಲಾ (ಪ್ರೇತ ಆವಾಹಕಳ) medium ಸಾನ್ನಿಧ್ಯದಲ್ಲಿ ಮರೆಯುವುದು ತುಂಬಾ ವಿಷಾದಕರ ಎಂದು ಹೇಳಿದರು. ಅಮೆರಿಕಾ ದೇಶದಲ್ಲಿ ಹಲವು ಕಡೆ ಇಂತಹ ಘಟನೆಗಳನ್ನು ನೋಡುವುದಕ್ಕೆ ಹೋಗಿದ್ದರು. ಬಹುಪಾಲು ಅಲ್ಲಿ ಇವರು ಕಂಡುದೆಲ್ಲ ಮೋಸ ಎಂದು ಇವರು ಹೇಳುತ್ತಿದ್ದರು. "ಬಹಳ ಸುಲಭೋಪಾಯದಲ್ಲಿ ಬಹು ದೊಡ್ಡ ಮೋಸಗಾರನಾಗುವನು" ಎನ್ನುತ್ತಿದ್ದರು. ಮತ್ತೆ ಆ ಸಮಯದಲ್ಲಿ ಪ್ರೇತ ಮೈಮೇಲೆ ಬಂದು ಅದು ವ್ಯಕ್ತಿಯ ಮೂಲಕ ಮಾತನಾಡುತ್ತಿದೆ ಎಂಬುದಕ್ಕಿಂತ ಕೇವಲ ಆ ವ್ಯಕ್ತಿಯೇ ಆ ರೀತಿ ಮಾತನಾಡುತ್ತಿರುವುದು ಎಂದು ನಂಬುವುದು ಹೆಚ್ಚು ಯುಕ್ತಿಯುಕ್ತವಾಗುವುದು ಎಂದು ಹೇಳುತ್ತಿದ್ದರು. ಹೀಗೆ ಎಲ್ಲವನ್ನೂ ಕಳೆದ ಮೇಲೆ ಇನ್ನು ಯಾವುದಾದರೂ ಸ್ವಲ್ಪ ಭಾಗ ಕಳೆಯದಂತಹುದು ಉಳಿದುಕೊಂಡರೆ ಬೇಕಾದರೆ ಅದನ್ನು ಸತ್ಯದ ಘಟ್ಟ ಎನ್ನಬಹುದು.

ಒಂದು ವೇಳೆ ಇದು ಸಾಧ್ಯವಾದರೂ ಬಾಹ್ಯ ವಿಷಯವನ್ನು ಅರಿಯುವುದಲ್ಲ ನಮ್ಮ ಜೀವನದ ಗುರಿ. ಸಂಚಾರಮಾಡುತ್ತಿರುವ ಜೀವಿಗಳ ವಿಷಯವನ್ನು ನಾವು ಅರಿತರೆ ಅದರಿಂದ ಮುಕ್ತಿಯ ಪ್ರಶ್ನೆ ಬಗೆಹರಿಯುವುದಿಲ್ಲ. ತ್ಯಾಗದಿಂದ ಮಾತ್ರ ಇದನ್ನು ಪಡೆಯಬಹುದು. ಯಾವಾಗ ಮನಸ್ಸು ಪವಾಡಗಳ ಮೇಲೆ ನೆಲೆಸುವುದೊ ಆಗ ಸ್ವಾಭಾವಿಕವಾಗಿ ಆಸೆ ಕೆರಳುವುದು, ಅಹಂಕಾರ ಹೆಚ್ಚುವುದು, ಅಸತ್ಯಕ್ಕೆ ಬಲಿಯಾಗುವನು. ಆತ್ಮನ ಮೋಕ್ಷಕ್ಕಾಗಿ ನಾವು ಸಾಧಾರಣ ಪ್ರಾಪಂಚಿಕ ಬಯಕೆಗಳನ್ನೇ ತೆರಬೇಕಾಗಿರುವಾಗ, ಈ ಅತೀಂದ್ರಿಯ ಶಕ್ತಿಯ ವ್ಯಾಮೋಹವನ್ನು ತೆರುವುದು ಎಷ್ಟು ಮುಖ್ಯವಾಗಿರುವುದು! ಪವಾಡಗಳಿಲ್ಲದೇ ಇದ್ದರೆ ಕ್ರೈಸ್ತ ಧರ್ಮ ಕೂಡ ಇನ್ನೂ ಉತ್ತಮವಾಗುತ್ತಿತ್ತು ಎಂಬುದು ಸ್ವಾಮಿಜಿ

ಅಭಿಮತ. ಬೌದ್ಧಧರ್ಮದ ಮಹಿಮೆಯೇ ಇಂತಹ ಪವಾಡಗಳನ್ನು ಬುದ್ಧ ನಿರಾಕರಿಸಿದ್ದು. ಹೆಚ್ಚು ಎಂದರೆ ಇಂತಹ ಘಟನೆಗಳಿಂದ ಸ್ವಲ್ಪ ನಂಬಿಕೆ ಹುಟ್ಟುವುದು. ಆದರೆ ಇದು ಕೂಡ ಪ್ರಾರಂಭದಲ್ಲಿ. ಸಿದ್ಧಿ ಗಳಿದ್ದರೆ ಅವು ಮಾಯವಾಗುವುವು. ಕೊನೆಗೆ ಉಳಿಯುವುದು ದಯೆ ಯೊಂದೇ. ಯಾರು ಇದನ್ನೆಲ್ಲಾ ನಿಕೃಷ್ಟದೃಷ್ಟಿಯಿಂದ ನೋಡಬಲ್ಲ ಧೀರರೋ ಅಂತಹವರು ಮಾತ್ರ ಮೋಕ್ಷವನ್ನು ಪಡೆಯಬಲ್ಲರು. "ಯಾರು ಸಿದ್ಧಿಗಳನ್ನೆಲ್ಲಾ ನಿರಾಕರಿಸಬಲ್ಲರೊ ಅವರಿಗೆ ಧರ್ಮಮೇಘ ಬರುವುದು" ಎಂದು ಪತಂಜಲಿ ಸಾರುವನು. ಅವನು ಮಾತ್ರ ಪರಮ ಸಾಕ್ಷಾತ್ಕಾರವನ್ನು ಪಡೆಯುವನು.

---

೨೪

## ಮೃತ್ಯುಚಿಂತನೆ

ನನ್ನ ಗುರುದೇವ ಬೋಧಿಸುತ್ತಿದ್ದರೀತಿಯಲ್ಲಿ ಒಂದು ವಿಶೇಷವಿತ್ತು. ಅವರ ಸಾಮಿಪ್ಯದಿಂದಲೇ ಶಿಷ್ಯನಲ್ಲಿ ಮೌನವಾಗಿ ಒಂದು ಬದಲಾವಣೆ ಆಗುತ್ತಿತ್ತು. ಒಂದು ವಸ್ತುವನ್ನು ನೋಡುವ ಧೃಷ್ಟಿಯೇ ಸಂಪೂರ್ಣ ಬದಲಾಯಿಸುತ್ತಿತ್ತು. ಅವರಿಂದ ಒಂದು ಮಾತು ಬಾಯಿನಿಂದ ಬರದೇ ಇದ್ದರೂ ಯಾವುದೋ ಒಂದು ಭಾವನೆ ನಮ್ಮನ್ನು ಮೆಟ್ಟಿಕೊಳ್ಳುತ್ತಿತ್ತು. ಇಲ್ಲವೆ, ಯಾವುದೋ ಹಿಂದಿನ ಅಭ್ಯಾಸ ಇದ್ದಕ್ಕೆ ಇದ್ದಂತೆ ಬಿಟ್ಟು ಹೋಗಿ ಬಿಡುತ್ತಿತ್ತು. ಅದರ ಬದಲು ಬೇರಾವುದೋ ಒಂದು ಭಾವನೆ ಆ ಸ್ಥಳ ವನ್ನು ಆಕ್ರಮಿಸಿಕೊಳ್ಳುತ್ತಿತ್ತು. ತರ್ಕವನ್ನು ಮೀರಿ ಹೋಗಿ ಅವರ ಸಾಮೀಪ್ಯದಿಂದಲೇ ಜ್ಞಾನಜ್ಯೋತಿ ಲಭಿಸಿದಂತೆ ಇತ್ತು. ಪ್ರಾಪಂಚಿಕ ವಸ್ತುಗಳ ಮೇಲಿನ ವ್ಯಾಮೋಹ ನಮ್ಮನ್ನು ಹೀಗೆ ಬಿಟ್ಟುಹೋಗುತ್ತಿತ್ತು. ಅವರ ಸುತ್ತಲಿದ್ದವರ ಹೃದಯದಲ್ಲಿ ತ್ಯಾಗದ ಕಾಡ್ಗಿಚ್ಚು ಉರಿಯಲು ಆರಂಭಿಸುತ್ತಿತ್ತು. ಅವರಿಂದ ಮೃತ್ಯುವಿನ ವಿಷಯವಾಗಿ ತಿಳಿದು ಅದರ ವಿಷಯದಲ್ಲಿ ಅಂಜಿಕೆಯೆಲ್ಲ ಪಲಾಯನವಾಗುತ್ತಿತ್ತು. ಇದು ಎಲ್ಲಕ್ಕಿಂತ ಒಂದು ದೊಡ್ಡ ವಿಷಯ ಅವರಿಂದ ಕಲಿತದ್ದು.

ಮೃತ್ಯುವಿನ ವಿಷಯದ ಮೇಲೆ ಅವರು ಯಾವುದನ್ನೂ ಹೀಗೇ ಸರಿ ಎಂದು ಹೇಳುವುದಕ್ಕೆ ಹೋಗುತ್ತಿರಲಿಲ್ಲ. "ಅದು ಹೀಗಿರಬಹುದು, ನನಗೆ ಗೊತ್ತಿಲ್ಲ" ಎಂದು ಮಾತ್ರ ಹೇಳುತ್ತಿದ್ದರು. ಯಾರಾದರೂ ಮೇಲಿನ ವಿಷಯದಲ್ಲಿ ಇವರ ನಿರ್ದಿಷ್ಟವಾದ ಅಭಿಪ್ರಾಯವನ್ನು ಕೇಳಿದರೆ, ಮಾನವ ನಲ್ಲಿರುವ ಒಂದು ಸೂಕ್ಷ್ಮತರವಾದ ಆಸೆಯೆ ಭವಿಷ್ಯದ ಹೊಂಗನಸುಗಳನ್ನು ಮೆಲ್ಲುವುದು ಎನ್ನುತ್ತಿದ್ದರು. ಆದಕಾರಣವೆ ಅನಂತರದ ವಿಷಯವನ್ನು ಕೇಳಿ ದರೆ ಜನರ ಭ್ರಾಂತಿ ಮತ್ತು ಆಸೆ ಇನ್ನೂ ವೃದ್ಧಿಯಾಗುವುದೆಂದು ಭಾವಿಸಿದ್ದರು. ಆದಕಾರಣವೆ ಮರಣಾನಂತರ ವಿಷಯವಾಗಿ ಏನನ್ನೂ ಹೇಳುತ್ತಿರಲಿಲ್ಲ. ಅವರಿಗೆ ಬದುಕಿರುವಾಗ ಹೇಗೋ ಹಾಗೆಯೇ ಕಾಲವಾದಮೇಲೂ ದೇವ ರೊಬ್ಬನೇ ಸರ್ವಸ್ವ. ನಿರ್ವಾಣ ಒಂದೇ ಅವರ ಗುರಿಯಾಗಿತ್ತು. "ನಿರ್ವಿಕಲ್ಪ ಸಮಾಧಿಯೊಂದೇ ಸರ್ವಶ್ರೇಷ್ಠ; ಉಳಿದವುಗಳೆಲ್ಲಾ ಬಯಲ ಭ್ರಾಂತಿ." ಆದರೂ ಈ ಭಾವನೆಯೊಂದೇ ಸಾಕು ಮೃತ್ಯುಭಾವನೆಯನ್ನು ಬದಲಾಯಿ

ಸುವುದಕ್ಕೆ. ಅವರ ಸ್ವಾನುಭವ ಮತ್ತು ಸಹೃದಯತೆಯ ಮೂಲಕ ಅವರ ಅಭಿಪ್ರಾಯವನ್ನು ಗ್ರಹಿಸಬಹುದು.

ನಮ್ಮ ಇಚ್ಛೆ ಏನಾದರೂ ಇರಲಿ, ಸಾವು ಕಾಲವಾದ ಮೇಲೆ ಒಂದು ವ್ಯಕ್ತಿತ್ವವನ್ನು ಪಡೆದಿರುತ್ತೇವೆ ಎಂದು ನಂಬುವ ಸ್ಥಿತಿಯಲ್ಲಿ ಇರಲಿಲ್ಲ ಮೊದಲು ಸ್ವಾಮಿಗಳನ್ನು ನೋಡಿದಾಗ. ಅದು ಅಸಾಧ್ಯ, ಇಲ್ಲವೆ ನಮ್ಮ ಊಹೆಗೆ ಅತೀತ ಎಂದು ಭಾವಿಸಿದ್ದೆ. ಮನಸ್ಸು ಎಂಬ ಮಧ್ಯವರ್ತಿ ಇಲ್ಲದೆ ದೇಹಭಾವನೆ ಹೇಗೆ ಅಸಾಧ್ಯವೋ ಹಾಗೆಯೇ ದೇಹವಿಲ್ಲದೇ ಇದ್ದರೆ ಮನಸ್ಸು ಕೂಡ ಇಲ್ಲ ಎಂಬುದು ಅಷ್ಟೇ ಸತ್ಯ. ಮನಸ್ಸೆಂಬುದು ದೇಹ ದಿಂದ ಜನಿಸದೆ ಇದ್ದರೆ (ಮಿಡಿದ ತಂತಿಯಿಂದ ಏಳುವ ಒಂದು ಧ್ವನಿ ಯಂತೆ) ಇವೆರಡೂ ಒಂದೇ ವಸ್ತುವಿನ ಎರಡು ಕೊನೆ. ದೇಹ ಮತ್ತು ಮನಸ್ಸು ಎರಡೂ ಒಂದೇ. ಒಂದು ವ್ಯಕ್ತಿತ್ವ ಮರಣಾನಂತರ ಇರಬಲ್ಲ ದೆಂದು ಊಹಿಸುವುದು ಪ್ರಾಣಿಸಹಜವಾದ ಒಂದು ಅಭ್ಯಾಸವಷ್ಟೆ. ಪರಮ ತ್ಯಾಗಕ್ಕೆ ಪ್ರೇರೇಪಿಸುವಂತಹ ನೀತಿಯ ಆದರ್ಶದ ಹಿಂದೆಯೂ ಸಮಾ ಜಕ್ಕೆ ಒಳ್ಳೆಯದಾಗುವುದೆಂಬ ಭಾವನೆ ಮಾತ್ರ ಅಂತರಾಳದಲ್ಲಿದೆ.

ಹಿಂದೂ ಧಾರ್ಶನಿಕರು ಮನಸ್ಸನ್ನು ಪ್ರಮುಖಮಾಡುವರು. ಹಿಂದೂ ಗಳು ಸ್ವಾಭಾವಿಕವಾಗಿ ತರುವ ವಾದ ಮತ್ತು ವಿಚಾರಸರಣಿ ನನ್ನ ನಿಲು ವನ್ನು ಸಂಪೂರ್ಣ ಸೋಲಿಸಿತು. ಆಧುನಿಕರು ಮನುಷ್ಯ ಎಂದರೆ ಅವನು ಒಂದು ದೇಹವೆಂದು ನಿಜವಾಗಿ ನಂಬುವರು. ಆದರೆ ಪೌರಾತ್ಯನಿಗೂ, ಪಾಶ್ಚಾತ್ಯನಿಗೂ ಇರುವ ವ್ಯತ್ಯಾಸವೇ ಇದು. ಸ್ವಾಮಿಜಿ ಹೀಗೆ ಹೇಳುತ್ತಿ ದ್ದರು: "ಪಾಶ್ಚಾತ್ಯರು ಮಾನವ ದೇಹ, ಅವನಿಗೊಂದು ಆತ್ಮವಿದೆ ಎನ್ನು ವರು. ಆದರೆ ಪೌರಾತ್ಯ, ಮಾನವ ಒಂದು ಆತ್ಮ, ಅವನಿಗೊಂದು ದೇಹ ವಿದೆ ಎನ್ನುವರು."

ಈ ಹೊಸ ಸಿದ್ಧಾಂತದ ಆಧಾರದಮೇಲೆ ನಿಂತುಕೊಂಡು ನಾನು ಪ್ರಾಯೋಗಿಕವಾಗಿ ಮಾತನಾಡುವಾಗ, ಎದುರಿಗೆ ಇರುವ ಮನಸ್ಸಿನೊಂದಿಗೆ ಮಾತನಾಡುತ್ತಿರುವೆ ಅವರ ಕಿವಿಗಳಿಗೆ ಅಲ್ಲ ಎಂದು ಆಲೋಚಿಸತೊಡ ಗಿದೆ. ಇದರಿಂದ ಹೆಚ್ಚು ಜನರಲ್ಲಿ ಉತ್ಸಾಹವನ್ನು ಹುಟ್ಟಿಸಲು ಸಾಧ್ಯ ವಾಯಿತು. ಅನಂತರ ಮನಸ್ಸೆ ಪ್ರಮುಖ ಎಂದು ಆಲೋಚಿಸತೊಡಗಲು ಅಭ್ಯಾಸವಾಗಿ ಹೋಯಿತು. ದೇಹ ಹೋದರೆ ಮನಸ್ಸು ನಾಶವಾಗಲಾರ ದೆಂದು ಭಾವಿಸತೊಡಗಿದೆ. ಈ ಭಾವನೆ ಅಭ್ಯಾಸದ ಬಲದಿಂದ ಆಳಕ್ಕೆ

ಹೋಗತೊಡಗಿತು. ಸುತ್ತಲಿರುವ ಪ್ರಪಂಚ 'ಮನಸಿಜ' ಎಂದು ಯೋಚಿಸತೊಡಗಿದೆ. ನಮ್ಮ ಆಲೋಚನಾ ಜಗತ್ತಿನಲ್ಲಿ ಹೊರಗಿನ ಯಾವುದೋ ದೇಶಕಾಲದಲ್ಲಿ ಅಕಸ್ಮಾತ್ತಾಗಿ ಆಗುವ ಯಾವುದಾದರೂ ಮಹಾಬದಲಾವಣೆ ಅಷ್ಟೊಂದು ಪ್ರಮುಖವಾಗಿ ಕಾಣಿಸಲಿಲ್ಲ.

ಸ್ವಾಮಿಜಿ ಭಾವನೆ ಇದಕ್ಕಿಂತಲೂ ಆಳವಾಗಿ ಹೋಯಿತು. ಅವರು ಯಾವಾಗಲೂ ದೇಹವೇ ತಾನು ಎಂಬ ಭಾವನೆಯಿಂದ ಪಾರಾಗಲು ಯತ್ನಿಸುತ್ತಿದ್ದರು. ಅವರು ನಾನು ಎಂದು ಕೂಡ ಉಚ್ಚರಿಸುತ್ತಿರಲಿಲ್ಲ. ಇದೆಲ್ಲ ದೇಹವಲ್ಲ ಎಂದು ಹೇಳುತ್ತಿದ್ದರು. ಆದರೆ ಜೀವನ ಎಂದರೆ ಎಲ್ಲಿ ಜನ ಇಂದ್ರಿಯಜನ್ಯ ಅನುಭವದಿಂದ ಕೂಡಿದುದುಮಾತ್ರ ಎಂದು ತಿಳಿದುಕೊಳ್ಳುವ ತಪ್ಪುಮಾಡುವರೋ ಎಂದು ಭಾವಿಸಿದ್ದರು. ಜಯ ಅಪಜಯ, ಪ್ರೀತಿ ದ್ವೇಷ, ಸಾಮರ್ಥ್ಯ ಅಸಾಮರ್ಥ್ಯ ಇವು ಜೀವನದ ಒಂದು ಅಂಶವಷ್ಟೆ. ಈದೇ ಪೂರ್ಣ ಜೀವನವಾಗಲಾರದು. ಕಾಲದಲ್ಲಿ ಹುಟ್ಟಿ ಅಳಿಯುವ ಇಂತಹ ನೂರಾರು ಜನ್ಮಗಳಿದ್ದರೂ ನಾವು ಅಮೃತಾತ್ಮರಾಗಬೇಕು ಎಂಬ ಆಸೆಯನ್ನು ತೃಪ್ತಿಪಡಿಸಬಾರದು. ಅದಕ್ಕೆ ನಾವು ಜನನಮರಣಾತೀತರಾಗಬೇಕು. ಸುಮ್ಮನೆ ಇಂದ್ರಿಯ ಪಂಜರದಲ್ಲಿರುವ ಜೀವನಕ್ಕೆ ಹೆಚ್ಚು ಆಯಸ್ಸು ಕೊಟ್ಟರೆ ಸಾಲದು. ಇದು ಏನಾದರೂ ಸ್ಥಿರ ಎಂಬ ಭಾವನೆ ಬರಬೇಕಾದರೆ ನಾವು ಬದುಕಿರುವಾಗಲೇ ನಮಗೆ ಆ ಅನುಭವ ಬರಬೇಕು. ಇದಲ್ಲದೇ ಇದ್ದರೆ ದೇಹಾತೀತವಾದ ಒಂದು ಅನುಭವ ಸಾಧ್ಯ ಎಂದು ನಂಬುವುದು ಹೇಗೆ? ಪಾಶ್ಚಾತ್ಯರು ಆತ್ಮ ಬರುತ್ತದೆ ಹೋಗುತ್ತದೆ ಎಂದು ಸಾಧಾರಣವಾಗಿ ಹೇಳುವರು. ಇದರಿಂದ ದೇಹವೇ ತಾವೆಂಬ ಅಜ್ಞಾನವನ್ನು ವ್ಯಕ್ತಪಡಿಸುವರು. ದೇಹ ಒಂದು ಇದೆ, ಅದಕ್ಕೆ ಹೊರಗಿನಿಂದ ಆತ್ಮ ಬಂದು ಕೆಲವುಕಾಲವಿದ್ದು ಹೋಗುವುದು, ಎಂದು ಭಾವಿಸುವರು. ಅಗಸ್ಟೈನನ್ನು ಸ್ವಾಗತಿಸಿದ ಕೆಂಟನವನು ಹೀಗೆ ಹೇಳುವರು: "ಈ ಪ್ರಪಂಚ ಬೆಚ್ಚಗಿರುವ ಕಾಂತಿಯಿಂದ ಕೂಡಿರುವ ಪ್ರಾಂಗಣದಂತೆ ಇದೆ. ಆತ್ಮವೆಂಬ ಗುಬ್ಬಚ್ಚಿ ಹೊರಗಿರುವ ಚಳಿಯಿಂದ ಪಾರಾಗಲು ಕೆಲವುಕಾಲ ಇಲ್ಲಿ ಬಂದು ಹೋಗುವುದು." ಇದಕ್ಕೂ ಆತ್ಮಭಾವನೆಗೂ ಎಷ್ಟೋ ವ್ಯತ್ಯಾಸವಿದೆ. ನಾವು ಕೇವಲ ದೇಹದ ಸಂಘಟನೆಯಿಂದ ಆದ ಪ್ರತಿಕ್ರಿಯೆಯಲ್ಲ, ಆದರೆ ದೇಹವನ್ನು

ಆಳುತ್ತಿರುವ ದೇಹಾತೀತವಾದ ಒಂದು ಆತ್ಮ ಎಂದು ಭಾವಿಸುವವರಿಗೆ ದೇಹ ಬರುತ್ತದೆ ಹೋಗುತ್ತದೆ ಎಂಬುದೇ ಸ್ಪಷ್ಟವಾಗಿ ತೋರುವುದು.

ಸ್ವಾಮಿಜಿ ಪದೇ ಪದೇ ಮಾನವ ಒಂದು ಮನಸ್ಸು ದೇಹವಲ್ಲ ಎಂದು ಹೇಳುತ್ತಿದ್ದರು. ಯಾರು ಸ್ವಾಮಿಜಿ ಬಳಿ ಇದ್ದರೊ ಅವರಿಗೆ ಇದನ್ನು ಕೇಳಿ, ಸಾವೆಂಬುದು ಎಂದೆಂದಿಗೂ ನಾಶವಾಗುವುದೆಂದಲ್ಲ, ಜೀವನದ ಅನುಭವದಲ್ಲಿ ಇದೊಂದು ಪುಟಮಾತ್ರ ಎಂದು ಅರಿಯತೊಡಗಿವರು. ನಮ್ಮ ದೃಷ್ಟಿ ಸಂಪೂರ್ಣವಾಗಿ ಬದಲಾವಣೆಯಾಯಿತು. ಇಲ್ಲಿಯ ಬಾಳು ಕಾಂತಿಯಿಂದ ಕೋರೈಸುವ ಒಂದು ಪ್ರಾಂಗಣವಾಗಲಿಲ್ಲ. ಜೀವನ ಒಂದು ಸೆರೆಮನೆಯಾಯಿತು, ಸುಪ್ತಾವಸ್ಥೆಯಲ್ಲಿ ಕನಸು ಕಾಣುತ್ತಿರುವಂತೆ ಆಯಿತು. ಏನು! ನಾವು ವ್ಯಕ್ತಗೊಳಿಸುವುದು ಯಾವಾಗಲೂ ಭಾಷೆಗೆ ಅಧೀನವಾಗಿರಬೇಕೆ? ಇದಕ್ಕೆ ಅತೀತವಾದ ಕೆಲವು ಅನುಭವಗಳಿಲ್ಲವೆ? ಮಾತಿನ ಸಾಧನವಿಲ್ಲದೆ ಅದು ತನ್ನ ಸತ್ಯವನ್ನು ನಮಗೆ ಸಾರದೆ? ಬೋಧನೆ ಯಿಲ್ಲದೆ ಪ್ರತ್ಯಕ್ಷವಾದ ಆಳವಾದ ಅನುಭವವನ್ನು ನಮಗೆ ಕೊಡಲಾರದೆ? ಜ್ಞಾನ ಯಾವಾಗಲೂ ಸಾಪೇಕ್ಷವಾಗಿರಬೇಕೆ? ಇಂದ್ರಿಯಗಳ ಅಸ್ಪಷ್ಟ ವೇದನೆಯ ಮೇಲೆಯೇ ನಿಂತಿರಬೇಕೆ? ಯಾವಾಗಲೂ ನಮ್ಮ ಕ್ಷುದ್ರವಾದ, ನೀರಸವಾದ ನಡೆವಳಿಕೆ ಮೂಲಕ ವ್ಯಕ್ತಗೊಳಿಸಬೇಕೆ? ಸ್ವಾಮಿಜಿ ಒಮ್ಮೆ ನ್ಯೂಯಾರ್ಕಿನ ಉಪನ್ಯಾಸದಲ್ಲಿ ಹೇಳಿದಂತೆ "ಅನಂತ ಕನಸುಣಿಯಾದ ಮಾನವ ಸಾಂತವಾದ ಕನಸುಗಳನ್ನು ಕಾಣುತ್ತಿರುವನು!" ಎಂದು ವ್ಯಸನದಿಂದ ಹೇಳಬಹುದು.

ಸ್ವಾಮಿಜಿ ಇಂತಹ ಕನಸುಗಳನ್ನು ನಿರಾಕರಿಸುತ್ತಿದ್ದರು. ಮೌನ ವಾಗಿ ದಿಗಂಬರನಂತೆ ಗಂಗಾನದಿತೀರದಲ್ಲಿ ಅಲೆಯಲು ಆಶಿಸುತ್ತಿದ್ದರು. ಯಾವಾಗಲೂ ಸಮಾಧಿಯೊಂದೇ ಪಡೆಯಲು ಯೋಗ್ಯವಾದ ವಸ್ತುವೆಂದು ಸದಾ ಅದರ ಕಡೆ ಮನಸ್ಸು ವಾಲುತ್ತಿತ್ತು. ಜೀವನದ ಹಲವು ಸಂಬಂಧ ಗಳೆಲ್ಲಾ . ಆತ್ಮನ ಸ್ವಾತಂತ್ರ್ಯತೆಗೆ ಇರುವ ಆತಂಕಗಳು, ಎಂದು ಭಾವಿ ಸುತ್ತಿದ್ದರು. ಇಂತಹ ಗುಣಗಳಿಂದ ಸ್ವಾಮಿಜಿ ತಮ್ಮ ಸುತ್ತಮುತ್ತಲಿರುವ ಜನರಿಗೆ ಯಾವುದು ಸತ್ಯ ಎಂದು ಅರಿಯುವ ಶಕ್ತಿಯನ್ನು ನೀಡಿದ್ದರು. ನಮ್ಮ ಜೀವನಕ್ಕೆ ಸಂಬಂಧಪಟ್ಟ ಹಲವು ವಸ್ತುಗಳೆಲ್ಲಾ ಕ್ಷಣಿಕ ಸ್ವಪ್ನ ದಂತೆ ಇರುವ ಬಾಹ್ಯ ವಸ್ತುಗಳು. ನಾವು ಸತ್ತಮೇಲೆಯೂ ಈಗಿನಂತೆಯೇ ಮುಂದುವರಿಯಲು ಸಾಧ್ಯ. ನಾವು ಆಗ ಸೂಕ್ಷ್ಮಾವಸ್ಥೆಯಲ್ಲಿ ಇರುವುದ

ರಿಂದ ನಾವು ಇನ್ನೂ ವೇಗವಾಗಿ ಮುಂದುವರಿಯಲು ಸಾಧ್ಯವಾಗುವುದು. ಈ ಜೀವನದಲ್ಲಿ ಮಾಡಿದ ಕೆಲವು ಕೆಲಸಗಳಿಗಾಗಿ ನಿತ್ಯಸ್ವರ್ಗವಾಗಲಿ, ನರಕವಾಗಲೀ, ಲಭಿಸುತ್ತದೆ ಎನ್ನುವುದು ಮೌಢ್ಯ; ಏಕೆಂದರೆ ಮಿತವಾದ ಕಾರಣ ಅಮಿತವಾದ ಕಾರ್ಯವನ್ನು ಎಂದಿಗೂ ಕೊಡಲಾರದು. ಆದರೂ ಸ್ವಾಮಿಜಿ ಇತರರು ಒಪ್ಪಿಕೊಳ್ಳುವಂತೆ ಈ ವಿಷಯದ ಮೇಲೂ ನಿರ್ದಿಷ್ಟ ವಾದ ಅಭಿಪ್ರಾಯಗಳನ್ನು ಹೇಳುತ್ತಿರಲಿಲ್ಲ. ತಮ್ಮ ಸುತ್ತಲೂ ಇರುವ ಜನರನ್ನು ತಮ್ಮ ಅನುಭವ ಮತ್ತು ಯುಕ್ತಿಯ ಸಹಾಯದಿಂದ ಎಷ್ಟು ದೂರ ಸಾಧ್ಯವೋ ಅಷ್ಟು ದೂರ ಒಯ್ಯುತ್ತಿದ್ದರು. ಸ್ವಾಮಿಜಿಗೆ ಯಾವ ವಿಧವಾದ ಮೂಢನಂಬಿಕೆಯೂ ಹಿಡಿಸುತ್ತಿರಲಿಲ್ಲ. ಭವಿಷ್ಯದ ವಿಷಯ ವಾಗಿ ಭರವಸೆಯನ್ನು ಕೊಡುವುದಕ್ಕೆ ಅವರಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಸತ್ತಮೇಲೆ ಜೀವನದ ಗತಿ ಏನಾಗುವುದು ಎಂದು ಯಾರಾದರೂ ಕೇಳಿದರೆ ನನಗೆ ಗೊತ್ತಿಲ್ಲ ಎಂದು ಮಾತ್ರ ಹೇಳುತ್ತಿದ್ದರೂ ಪ್ರತಿಯೊಬ್ಬರೂ ತಮ್ಮ ಅನುಭವದ ಆಧಾರದ ಮೇಲೆ ಇದನ್ನು ನಿರ್ಣಯಿಸ ಬೇಕಾಗಿದೆ. ಜೀವಿಯ ನೈಜವಿಕಾಸಕ್ಕೆ ಆತಂಕವಾಗಬಾರದೆಂಬುದೇ ಅವರ ಇಚ್ಛೆ.

ಆದರೂ ಕೆಲವು ವಿಷಯಗಳು ಅವರಲ್ಲಿ ವ್ಯಕ್ತನಾಗುತ್ತಿದ್ದವು. ಕಾಲ ವಾದ ಮೇಲೆ ನಮಗಿಂತ ಮುಂಚೆ ಹೋಗಿರುವವರನ್ನು ಪುನಃ ಸಂಧಿಸಿ ಮಾತ ನಾಡುವೆವು ಎಂದು ಅವರು ನಂಬಿದ್ದರು. ಒಂದು ಸಲ ತಮಾಷೆಯಾಗಿ (ಕಾಲವಾದ ಮೇಲೆ) ನಾನು ಆ ಮುದಿ ಮನುಷ್ಯನ ಹತ್ತಿರ ನಿಂತಾಗ ನಾನು ಇಂತಹವನು ಎಂದು ಹೇಳಬೇಕಾಗಿಲ್ಲ ಎಂದರು. ಇದನ್ನು ಒಪ್ಪ ಬೇಕಲ್ಲ ಎಂದು ಅವರು ವ್ಯಥೆಪಡುತ್ತಲೂ ಇರಲಿಲ್ಲ. ಇದನ್ನು ಕೂಡ ಜೀವನದ ಒಂದು ಘಟನೆಯನ್ನಾಗಿ ಸ್ವೀಕರಿಸಿದರು.

ಯಾರಿಗೆ ಒಮ್ಮೆ ನಿರ್ವಿಕಲ್ಪ ಸಮಾಧಿಯಾಗಿದೆಯೋ ಅವರು ದೇಹಾ ತೀತ ಅವಸ್ಥೆಯನ್ನು ಅನುಭವಿಸಿರಬೇಕು. ಸಾಧಾರಣ ಮಾನವರಿಗೆ ಸಾಧ್ಯವಲ್ಲದ ಅನುಭವ ಅವರಿಗೆ ಸಾಧ್ಯವಾಗಿರಬೇಕು. ಕೆಲವು ವೇಳೆ ಸ್ವಾಮಿಜಿ ಸತ್ತವರೊಡನೆ ಮಾತನಾಡಿದೆ ಎಂದು ಹೇಳುತ್ತಿದ್ದರು. ಈ ಸ್ಥಿತಿ ಯನ್ನು ಕುರಿತು ಭಯಪಟ್ಟವನೊಬ್ಬನಿಗೆ "ಈ ಅಂಜಿಕೆಯೆಲ್ಲಾ ನಿಮ್ಮ ಭ್ರಾಂತಿ. ಎಂದು ನೀವು ಪ್ರೇತವನ್ನು ನೋಡುವಿರೋ ಅಂದು ಯಾವ ಅಂಜಿಕೆಯೂ ಆಗುವುದಿಲ್ಲ" ಎಂದರು. ಸ್ವಾಮಿಜಿ ಗುರು

ಭಾಯಿಗಳೊಬ್ಬರು ಸ್ವಾಮಿಜಿಗೆ ಸಂಬಂಧಪಟ್ಟ ಒಂದು ಘಟನೆಯನ್ನು ಹೇಳುವರು. ಅವರು ಮದ್ರಾಸಿನಲ್ಲಿದ್ದಾಗ ಯಾರೋ ಆತ್ಮಹತ್ಯ ಮಾಡಿಕೊಂಡ ಇವರ ನೆಂಟರೊಬ್ಬರ ಪ್ರೇತ ಬಂದು ಸ್ವಾಮಿಜಿಯವ ರನ್ನು ಕೂಡ ಆತ್ಮಹತ್ಯ ಮಾಡಿಕೊಳ್ಳಬೇಕೆಂದು ಪ್ರೇರಿಸುತ್ತಿತ್ತು. ಅವರ ತಾಯಿ ಸತ್ತುಹೋದರೆಂಬ ಸುದ್ದಿಯನ್ನು ಇದು ಕೊಟ್ಟಿತು. ಸ್ವಾಮಿಜಿ ವಿಚಾರಿಸಲಾಗಿ ಅವರ ತಾಯಿ ಆರೋಗ್ಯದಿಂದ ಇದ್ದ ಸಮಾಚಾರ ಬಂದಿತು. ಆಗ ಇವರು ಪ್ರೇತಕ್ಕೆ ಏಕೆ ಸುಳ್ಳು ಸುದ್ದಿ ಯನ್ನು ಕೊಟ್ಟೆ ಎಂದು ಗದರಿಸಿಕೊಂಡರು. ಆಗ ಅದು "ನಾನೀಗ ಇರುವ ಸ್ಥಿತಿ ತುಂಬಾ ದಾರುಣವಾದುದು. ಹೇಳುವುದು ಸುಳ್ಳೇ ನಿಜವೇ ಎಂಬ ಇದಾವುದನ್ನೂ ಗಮನಿಸುವ ಸ್ಥಿತಿಯಲ್ಲಿ ಇಲ್ಲ. ನನ್ನನ್ನು ಹೇಗಾದರೂ ಮಾಡಿ ಈ ಅವಸ್ಥೆಯಿಂದ ಪಾರುಮಾಡಬೇಕು" ಎಂದು ಕೇಳಿಕೊಂಡಿತು. ಸ್ವಾಮಿಜಿ ರಾತ್ರಿ ಸಮುದ್ರ ತೀರಕ್ಕೆ ಅದಕ್ಕೆ ಶ್ರಾದ್ಧ ಮಾಡುವುದಕ್ಕಾಗಿ ಹೊರಟರು. ಆಗ ಪ್ರೇತಕ್ಕೆ ಕೊಡಲು ಏನೂ ಇರಲಿಲ್ಲ ಸ್ವಾಮಿಜಿ ಹತ್ತಿರ. ಆಗ ಏನೂ ಇಲ್ಲದೆ ಇದ್ದರೆ ಮರಳನ್ನಾದರೂ ಕೊಡಬಹುದೆಂಬ ಒಂದು ಶಾಸ್ತ್ರದ ನುಡಿ ಜ್ಞಾಪಕಕ್ಕೆ ಬಂದಿತು. ಆಗ ಬೊಗಸೆಯ ತುಂಬ ಮರಳನ್ನು ಹಿಡಿದುಕೊಂಡು ಪ್ರೇತಕ್ಕೆ ಒಳ್ಳೆಯದಾಗಲೆಂದು ಆಶಿಸುತ್ತ ಅದನ್ನು ಸಮುದ್ರಕ್ಕೆ ಹಾಕಿದರು. ಅನಂತರ ಆ ಜೀವಿಗೆ ಶಾಂತಿಯಾಗಿ ಇವರಿಗೆ ತೊಂದರೆ ಕೊಡುವುದನ್ನು ಬಿಟ್ಟಿತು.

ಇವರು ಎಂದೆಂದಿಗೂ ಮರೆಯಲಾಗದ ಮತ್ತೊಂದು ಅನುಭವವೇ ಪರಮಹಂಸರ ಕಾಲವಾದ ಒಂದು ವಾರದ ಮೇಲೆ ಇವರಿಗೆ ಅವರು ಕಾಣಿಸಿಕೊಂಡ ದೃಶ್ಯ. ಒಂದು ದಿನ ರಾತ್ರೆ ಕಾಸೀಪುರದ ತೋಟದ ಮನೆಯಲ್ಲಿ ಇವರು ಮತ್ತು ಇನ್ನೊಬ್ಬರು ಕುಳಿತುಕೊಂಡು ಅವರನ್ನು ಅಗಲಿ ಹೋದ ಗುರುದೇವನ ವಿಷಯವಾಗಿ ಮಾತನಾಡುತ್ತಿದ್ದರು. ಆ ಸಮಯ ದಲ್ಲಿ ಜ್ಯೋತಿಪುಂಜ ಮೂರ್ತಿಯೊಂದು ತೋಟದೊಳಗಿನಿಂದ ಇವರ ಬಳಿಗೆ ಪ್ರವೇಶಿಸಿದಂತೆ ಆಯಿತು. ಕೆಲವು ಕ್ಷಣಗಳಾದ ಮೇಲೆ ಇದೇನು ಎಂದು ಪಿಸುಮಾತಿನಲ್ಲೇ ಸ್ವಲ್ಪ ಜೋರಾಗಿ ಕೇಳಿದರು. ಏಕಕಾಲದಲ್ಲೇ ಇಬ್ಬರೂ ಒಂದೇ ಸೂಕ್ಷ್ಮ ಶರೀರವನ್ನು ನೋಡಿದ ಅಪೂರ್ವ ಘಟನೆ ಇದು.

ಇಂತಹ ಅನುಭಗಳಿಂದ ನಂಬಿಕೆ ಹುಟ್ಟದೇ ಸಾಧ್ಯವೇ ಇಲ್ಲ.

ಸ್ವಾಮಿಜಿ ಸಹಸ್ರದ್ವೀಪೋದ್ಯಾನದಿಂದ ೧೮೯೫ರಲ್ಲಿ ಬರೆದ ಒಂದು ಕಾಗದದಲ್ಲಿ ಹೀಗೆ ಹೇಳುತ್ತಾರೆ: "ವಯಸ್ಸಾದಂತೆಲ್ಲಾ, ಮಾನವನೇ ಸೃಷ್ಟಿಯಲ್ಲಿ ಸರ್ವಶ್ರೇಷ್ಠ ಎಂದು ಬೋಧಿಸುವ ಹಿಂದೂ ಭಾವನೆ ಚೆನ್ನಾಗಿ ಅರ್ಥವಾಗತೊಡಗಿದೆ. ಯಾರನ್ನು ನಾವು ದೇವತೆಗಳು ಎನ್ನುವೆವೋ ಅವರು ಕಾಲವಾದ ಮನುಷ್ಯರು. ಬೇರೊಂದು ದೇಹವನ್ನು ಈಗ ಧರಿಸಿ ಕೊಂಡಿರುವರು. ಇದು ಸೂಕ್ಷ್ಮ ದೇಹವಾದರೂ ಒಂದು ಮಾನವ ದೇಹ. ಅವರಿಗೆ ಕೈಕಾಲುಗಳಿವೆ. ಅವರು ಈ ಪ್ರಪಂಚದಲ್ಲೇ ಬೇರೊಂದು ಆಕಾಶದಲ್ಲಿರುವರು. ಅವರೇನು ಸಂಪೂರ್ಣವಾಗಿ ಕಾಣಿಸಿಕೊಳ್ಳದೇ ಇಲ್ಲ. ಅವರಿಗೂ ಕೂಡ ನಮ್ಮಂತೆ ಪ್ರಜ್ಞೆ ಇದೆ. ನಮ್ಮಂತೆ ಆಲೋಚಿಸುವರು. ಆದಕಾರಣ ಅವರೂ ಕೂಡ ಮನುಷ್ಯರೆ. ಅದರಂತೆಯೇ ಬೇರೆ ಬೇರೆ ಲೋಕದಲ್ಲಿ ಜೀವಿಸುವ ಅಪ್ಸರ ಯಕ್ಷರು ಮುಂತಾದವರೆಲ್ಲ. ಆದರೆ ಮಾನವನೊಬ್ಬನೆ ದೇವರಾಗಬಲ್ಲ. ದೇವತೆಗಳೆಲ್ಲ ದೇವರಾಗಬೇಕಾದರೆ ಮಾನವರಾಗಬೇಕು."

ಯಾರು ನಮ್ಮ ಗುರುದೇವನ ವಾಣಿಯನ್ನು ಆಪ್ತವಾಕ್ಯದಂತೆ ಪರಿಗಣಿಸುವರೊ ಅವರಿಗೆ ಮೇಲಿನ ಮಾತಿಗೆ ಬೆಲೆ ಇದೆ. ಸ್ವಾಮಿಜಿ, ಕೇವಲ ಊಹೆ ಅಭಿಪ್ರಾಯ ಎಂದು ಹೇಳಿದರೂ ಅವರು ಇದನ್ನು ನಂಬುವರು. ಏಕೆಂದರೆ ಇದು ಅಪೂರ್ವ ಅನುಭವ ಆಧಾರದ ಮೇಲೆ ನಿಂತ ಊಹೆ ಮತ್ತು ಅಭಿಪ್ರಾಯಗಳಾಗಿವೆ.

ಸ್ವಾಮಿಜಿ ೧೮೯೬ರಲ್ಲಿ ಇಂಗ್ಲೆಂಡಿಗೆ ಬರುವ ಹೊತ್ತಿಗೆ ಅವರು ಅಮೆರಿಕದಲ್ಲಿ ಮಾಡಬೇಕಾದ ಪ್ರಥಮ ಭಾಗ ಪೂರೈಸಿತ್ತು. ಆಗ ಅವರು ತಮ್ಮ ಧಾರ್ಮಿಕ ಬೋಧನೆಯನ್ನು ಒಂದು ಸಿದ್ಧಾಂತ ರೂಪದಲ್ಲಿ ಅಣಿ ಮಾಡಬೇಕೆಂದು ಯೋಚಿಸಿದ್ದರು. ಮೊದಮೊದಲು ಅನರ್ಘ್ಯವಾದ ತಮ್ಮ ಭಾವನೆಯನ್ನು ಧಾರಾಳವಾಗಿ ಪ್ರಚಾರಪಡಿಸಿದರು. ಅನಂತರ ಅದೆಂತಹ ರಾಶಿಯಾಗಿದೆ ಎಂಬ ಅರಿವುಂಟಾಯಿತು. ಅದರಲ್ಲಿ ಒಂದು ವೈಶಿಷ್ಟ್ಯತೆ ಇರುವುದನ್ನು ಮನಗಂಡು ಅವನ್ನೆಲ್ಲ ಕೆಲವು ಮೂಲಭಾವನೆಗಳಿಗೆ ಸರಿಯಾಗಿ ಜೋಡಿಸಬೇಕೆಂದು ಬಯಸಿದರು. ಇದಕ್ಕೆ ಕೈ ಹಾಕಿದ ಮೇಲೆ ಜನ ವೇದಾಂತದ ಬೋಧನೆಯನ್ನು ಸ್ವೀಕರಿಸಬೇಕಾದರೆ ಆತ್ಮನ ಮರಣಾ ನಂತರ ಸ್ಥಿತಿಯನ್ನು ಹೇಳುವುದು ಆವಶ್ಯಕವೆಂದು ಅರಿತರು. ೧೮೯೫ರಲ್ಲಿ ಇವರು ಪ್ರಥಮಬಾರಿ ಇಂಗ್ಲೆಂಡಿಗೆ ಬಂದಾಗ ಒಬ್ಬ ಆಂಗ್ಲೇಯ ಸ್ನೇಹಿತನಿಗೆ

ಬರೆದ ಪತ್ರದಲ್ಲಿ ಧಾರ್ಮಿಕ ವಿಷಯಗಳಿಗೆ ತಮ್ಮ ಸಿದ್ಧಾಂತದಲ್ಲಿ ಸ್ವಲ್ಪ ಅವಕಾಶ ಆವಶ್ಯಕ ಎಂಬುದನ್ನು ವ್ಯಕ್ತಪಡಿಸಿರುವರು. ಇದೇ ಸಮಯದಲ್ಲಿ ಸ್ವಲ್ಪವೂ ರಹಸ್ಯಕ್ಕೆ ಎಡೆಗೊಡದೆ ತಾತ್ತ್ವಿಕವಾಗಿ ಧಾರ್ಮಿಕರಾದವರ ಸಂಗಡವೊಂದು ಬಂದಿತು. ಅದರಲ್ಲಿದ್ದವರು ಬಾಹ್ಯಾಚಾರದ ಆವಶ್ಯಕತೆಯನ್ನು ಕುರಿತು ಮಾತನಾಡಿದರು. "ಇದು ನನ್ನ ಕಣ್ಣನ್ನು ತೆರೆಯಿತು. ಪ್ರಪಂಚದಲ್ಲಿ ಬಹುಪಾಲು ಜನರಿಗೆ ಯಾವುದಾದರೂ ಆಚಾರ ಬೇಕಾಗಿದೆ. ಧರ್ಮ ಎಂದರೆ ಸಾಧಾರಣವಾಗಿ ಚಿಹ್ನೆ ಮತ್ತು ಆಚಾರಗಳ ಮೂಲಕ ಸ್ಥೂಲ ರೂಪವಾದ ಸಿದ್ಧಾಂತವಾಗಿದೆ. ಬರೀ ಶುಷ್ಕ ತತ್ತ್ವ ಜನರ ಮೇಲೆ ಯಾವ ಪ್ರಭಾವವನ್ನು ಬೀರಲಾರದು" ಎಂದು ಒಂದು ಪತ್ರದಲ್ಲಿ ಹೇಳಿರುವರು.

ಇದೇ ಭಾವನೆಯನ್ನು ಸಮರ್ಥಿಸುವುದನ್ನು ಸ್ವಾಮಿಜಿ ಅನಂತರ ಅದೇ ಸ್ನೇಹಿತನಿಗೆ ಬರೆದ ಎರಡು ಮೂರು ಪತ್ರಗಳಲ್ಲಿ ನೋಡುತ್ತೇವೆ. ಒಂದು ಸಲ ಹೀಗೆ ಕಾಗದ ಬರೆಯುವಾಗ ಅವರು ಆಗತಾನೆ ಪ್ರಖ್ಯಾತ ಎಲಕ್ಟ್ರೀಶಿಯನ್ ಒಂದಿಗೆ ಮಾತನಾಡಿದ ಪ್ರಭಾವವನ್ನು ನೋಡಬಹುದು. ದ್ರವ್ಯ ಮತ್ತು ಶಕ್ತಿಗೆ ಇರುವ ಸಂಬಂಧವನ್ನು ಅವರು ಚೆನ್ನಾಗಿ ವಿವರಿಸುವರು. ಆ ಸಮಯದಲ್ಲಿ ಹಿಂದುಗಳಲ್ಲಿ ಮರಣವೆಂದರೆ ಏನೆಂಬುದನ್ನು ಸ್ಪಷ್ಟವಾಗಿ ಸಂಕ್ಷೇಪವಾಗಿ ವಿವರಿಸುವರು. ಆಧುನಿಕ ವಿಜ್ಞಾನಕ್ಕೂ ಹಿಂದಿನ ಭಾರತೀಯ ತಾತ್ತ್ವಿಕ ಭಾವನೆಗಳಿಗೂ ಇರುವ ಸಾಮ್ಯವನ್ನು ನೋಡಿ ಅವರು ಅಚ್ಚರಿಗೊಂಡಿದ್ದರೆಂಬುದು ಅವರು ಬರೆದ ಪತ್ರವನ್ನು ಓದಿದರೆ ಗೊತ್ತಾಗುವುದು. ಅವರು ಹೀಗೆ ಬರೆಯುವರು: "ನನ್ನ ಸ್ನೇಹಿತನಿಗೆ ವೇದಾಂತದ, ಪ್ರಾಣ ಆಕಾಶ ಮತ್ತು ಕಲ್ಪಗಳ ವಿಷಯವನ್ನು ಕೇಳಿ ಅಚ್ಚರಿಯಾಯಿತು. ಆಧುನಿಕ ವಿಜ್ಞಾನ ಅವರ ದೃಷ್ಟಿಯಲ್ಲಿ ಪುರಸ್ಕರಿಸಬಲ್ಲ ಏಕಮಾತ್ರ ವಿವರಣೆಯೇ ಇದು ಎನ್ನುವನು. ಆಕಾಶ ಮತ್ತು ಪ್ರಾಣಗಳೆರಡೂ ಕೂಡ ಮಹತ್ತಿನಿಂದ ಜನಿಸಿತು. ಇದನ್ನೇ ಈಶ್ವರ ಅಥವಾ ವಿಶ್ವಮನಸ್ಸು ಎಂಬುದು. ಆತ ಗಣಿತಶಾಸ್ತ್ರದ ಪ್ರಕಾರ ದ್ರವ್ಯ ಮತ್ತು ಶಕ್ತಿಯನ್ನು ಇವೆರಡರ ಮೂಲರೂಪವಾದ ಸುಪ್ತಶಕ್ತಿಗೆ ತರುವುದನ್ನು ತೋರಬಲ್ಲೆ ಎನ್ನುವನು. ನಾನು ಈ ಹೊಸ ಗಣಿತ ಶಾಸ್ತ್ರದ ಪ್ರಯೋಗವನ್ನು ನೋಡುವುದಕ್ಕಾಗಿ ಬರುವ ವಾರ ಹೋಗುತ್ತೇನೆ."

"ಇಲ್ಲಿ ವೇದಾಂತದ ವಿಶ್ವಶಾಸ್ತ್ರ (Cosmology) ಭದ್ರವಾದ

ತಳಹದಿಯ ಮೇಲೆ ನಿಲ್ಲುವುದು. ಈಗ ನಾನು ವೇದಾಂತಕ್ಕೆ ಸಂಬಂಧಪಟ್ಟ ವಿಶ್ವಶಾಸ್ತ್ರ (Cosmology) ಮತ್ತು ಅಂತಿಮಶಾಸ್ತ್ರ (eschotology) ವನ್ನು ಕೂಲಂಕಶವಾಗಿ ವಿಚಾರಿಸುತ್ತಿರುವೆನು. ಆಧುನಿಕ ವೈಜ್ಞಾನಿಕ ನಿರ್ಣಯಗಳಿಗೂ ಇದಕ್ಕೂ ಸಾಮ್ಯವಿದೆ. ಒಂದನ್ನು ನಾವು ವಿವರಿಸಿದರೆ ಮತ್ತೊಂದನ್ನೂ ನಾವು ವಿವರಿಸಬಹುದು. ನಾನು ಅನಂತರ ಪ್ರಶ್ನೋತ್ತರ ರೂಪದಲ್ಲಿ ಒಂದು ಪುಸ್ತಕ ಬರೆಯಬೇಕೆಂದು ಇರುವೆನು. ಅದರಲ್ಲಿ ಪ್ರಥಮ ಅಧ್ಯಾಯವೆ ವಿಶ್ವಶಾಸ್ತ್ರ. ಅಲ್ಲಿ ವೇದಾಂತಕ್ಕೂ ವಿಜ್ಞಾನಕ್ಕೂ ಸಾಮ್ಯವಿರುವುದನ್ನು ತೋರುತ್ತೇನೆ.''




"ಅಂತಿಮಗತಿಯನ್ನು ಅದ್ವೈತದ ದೃಷ್ಟಿಯಿಂದ ಮಾತ್ರ ವಿವರಿಸುವೆನು. ದ್ವೈತಿಗಳು ಮಾನವ ಕಾಲವಾದ ಮೇಲೆ ಮೊದಲು ಸೂರ್ಯಲೋಕಕ್ಕೆ ಹೋಗುವನು, ಅನಂತರ ಚಂದ್ರಲೋಕಕ್ಕೆ ಹೋಗುವನು, ಅನಂತರ ವಿದ್ಯುತ್ ಲೋಕಕ್ಕೆ ಹೋಗುವನು ಎನ್ನುವರು. ಅಲ್ಲಿಂದ ಅವನನ್ನು ಬ್ರಹ್ಮಲೋಕಕ್ಕೆ ಒಬ್ಬ ಪುರುಷ ಒಯ್ಯುವನು. (ಅದ್ವೈತಿಗಳು ಇಲ್ಲಿ ಜೀವಿ ನಿರ್ವಾಣವನ್ನು ಪಡೆಯುವನು ಎನ್ನುವರು.)

"ಅದ್ವೈತದ ದೃಷ್ಟಿಯಿಂದ ಆತ್ಮ ಬರುವುದೂ ಇಲ್ಲ ಹೋಗುವುದೂ ಇಲ್ಲ. ಹಲವು ಲೋಕಗಳೆಲ್ಲ ಆಕಾಶ ಮತ್ತು ಪ್ರಾಣದಿಂದ ಆದವು. ಅವುಗಳಲ್ಲಿ ತರತಮದ ವ್ಯತ್ಯಾಸವಿದೆ ಅಷ್ಟೆ. ಎಲ್ಲಕ್ಕಿಂತ ಕೆಳಗೆ ಇರುವುದೇ ಅತಿ ಘನವಾಗಿರುವುದೇ ಸೂರ್ಯಲೋಕ. ಇದೇ ನಮ್ಮ ಕಣ್ಣಿಗೆ ಕಾಣುವ ಸ್ಥೂಲ ಪ್ರಪಂಚ. ಇಲ್ಲಿ ಪ್ರಾಣ ವಾಸ್ತವಿಕ ಶಕ್ತಿಯಂತೆ ಕಾಣುವುದು, ಆಕಾಶ ಸ್ಥೂಲವಾದ ದ್ರವ್ಯದಂತೆ ಕಾಣುವುದು. ಅನಂತರ ಸೂರ್ಯನ ಆಚೆ ಇರುವುದೇ ಚಂದ್ರಲೋಕ. ಇದು ನಿಜವಾಗಿರುವ ಚಂದ್ರನಲ್ಲ. ದೇವತೆಗಳು ವಾಸಿಸುವ ಸ್ಥಳ. ಇಲ್ಲಿ ಪ್ರಾಣ ಮಾನಸಿಕ ಶಕ್ತಿಯಂತೆ ಇರುವುದು, ಆಕಾಶ ತನ್ಮಾತ್ರದಂತೆ ಇರುವುದು. ಇದರಾಚೆ ಇರುವುದೇ ವಿದ್ಯುತ್

ಲೋಕ. ಇಲ್ಲಿ ಆಕಾಶ ಮತ್ತು ಪ್ರಾಣವನ್ನು ವಿಭಾಗಿಸಲು ಆಗುವುದೇ ಇಲ್ಲ. ಅಲ್ಲಿ ವಿದ್ಯುತ್ ಅನ್ನು ದ್ರವ್ಯವೆಂದಾಗಲೀ, ಶಕ್ತಿಯೆಂದಾಗಲೀ ಹೇಳಲಾರೆವು. ಅನಂತರ ಬರುವುದೇ ಬ್ರಹ್ಮಲೋಕ. ಅಲ್ಲಿ ಪ್ರಾಣವೂ ಇರುವುದಿಲ್ಲ, ಆಕಾಶವೂ ಇರುವುದಿಲ್ಲ. ಎರಡೂ ಮೂಲ ಪ್ರಕೃತಿಯಲ್ಲಿ ಲಯವಾಗುವುದು. ಇಲ್ಲಿ ಪ್ರಾಣ ಮತ್ತು ಆಕಾಶಗಳು ಇಲ್ಲದೇ ಇರುವುದರಿಂದ ಜೀವ ಇಡೀ ವಿಶ್ವವನ್ನು ಸಮಷ್ಟಿಯಂತೆ ನೋಡುವುದು. ಆದರೂ ಇದು ಬ್ರಹ್ಮನಲ್ಲ. ಏಕೆಂದರೆ ಇಲ್ಲಿ ವೈವಿಧ್ಯತೆ ಇದೆ. ಇಲ್ಲಿಂದಲೇ ಜೀವ ಪರಮಗುರಿಯಾದ ಐಕ್ಯತೆಯ ಕಡೆಗೆ ಹೋಗುವುದು. ಅದ್ವೈತ, ಈ ಲೋಕಗಳೆಲ್ಲ ಒಂದಾದ ಮೇಲೊಂದು ನಮ್ಮ ಮುಂದೆ ಏಳುವ ದೃಶ್ಯಗಳಷ್ಟೇ ಎನ್ನುವುದು. ಆದರೆ ಜೀವವೇ ಬರುವುದೂ ಇಲ್ಲ ಹೋಗುವುದೂ ಇಲ್ಲ. ಇದರಂತೆಯೇ ಈಗ ನಾವು ನೋಡುವ ಪ್ರಪಂಚ ಕೂಡ ರಚಿತವಾಗಿದೆ. ಸೃಷ್ಟಿ ಪ್ರಳಯಗಳು ಕೂಡ ಇದೇ ರೀತಿಯನ್ನು ಅನುಸರಿಸುವುವು. ಆದರೆ ಸೃಷ್ಟಿ ಎಂದರೆ ಮುಂದೆ ಹೋಗುವುದು ಪ್ರಳಯವೆಂದರೆ ಹಿಂದೆ ಬರುವುದು ಅಷ್ಟೆ.

"ಪ್ರತಿಯೊಬ್ಬನೂ ತನ್ನ ಒಂದು ಪ್ರಪಂಚವನ್ನು ನೋಡುತ್ತಾನೆ. ಈ ಪ್ರಪಂಚಕ್ಕೆ ಕಾರಣ ಅವನ ಬಂಧನ. ಅವನು ಮುಕ್ತನಾದರೆ ಈ ಪ್ರಪಂಚ ಮಾಯವಾಗುವುದು. ಆದರೆ ಬಂಧನದಲ್ಲಿ ಇರುವ ಇತರರಿಗೆ ಅದು ಇರುವುದು. ನಾಮರೂಪಗಳಿಂದಲೇ ಪ್ರಪಂಚವಾಗಿರುವುದು. ಸಾಗರದ ಅಲೆಗೆ ನಾಮರೂಪಗಳು ಇರುವವರೆಗೆ ಮಾತ್ರ ಅದು ಅಲೆ. ಅಲೆ ಮಾಯವಾದರೆ ಅದು ಬರೀ ಸಾಗರವಾಗುವುದು. ಆದರೆ ಅಲೆಗೆ ಇದ್ದ ನಾಮರೂಪಗಳು ಇರುವುದಿಲ್ಲ. ನೀರಿಲ್ಲದೆ ಅಲೆಯ ನಾಮರೂಪಗಳು ಇರಲಾರವು. ನಾಮರೂಪಗಳು ಇರುವುದರಿಂದಲೇ ಅದು ಅಲೆಯಾಯ್ತು. ಆದರೂ ಬರೀ ನಾಮರೂಪವೇ ಎಂದಿಗೂ ಅಲೆಯಾಗಲಾರದು. ಅಲೆ ಸಾಗರಕ್ಕೆ ಸೇರಿದೊಡನೆ ನಾಮರೂಪಗಳು ಮಾಯವಾಗುವುವು. ಆದರೆ ಇತರ ಅಲೆಗಳ ನಾಮರೂಪಗಳು ಇದ್ದೇ ಇರುತ್ತವೆ. ಈ ನಾಮರೂಪವೇ ಮಾಯ, ಸಾಗರವೇ ಬ್ರಹ್ಮ. ಅಲೆ ಯಾವಾಗಲೂ ನೀರಾಗೇ ಇತ್ತು, ಆದರೆ ಅಲೆಯಾಗಿರುವ ತನಕ ಅದಕ್ಕೊಂದು ನಾಮರೂಪ ಇತ್ತು. ಪುನಃ ಅಲೆ ಇಲ್ಲದೆ ನಾಮರೂಪಗಳು ಒಂದು ಗಳಿಗೆಯೂ ಇರಲಾರವು. ಆದರೆ ಅಲೆಯ ನೀರಾದರೂ ನಾಮರೂಪಗಳಿಲ್ಲದೆ ಇದ್ದರೂ ಇರಬಲ್ಲದು. ನಾಮ

ರೂಪಗಳು ನೀರಿಲ್ಲದೆ ಇದ್ದರೆ ಇರುವುದಕ್ಕೆ ಸಾಧ್ಯವಿಲ್ಲವೆ ಇರುವುದರಿಂದ ಅವು ಇವೆ ಎಂದು ಹೇಳಲಾಗುವುದಿಲ್ಲ. ಆದರೂ ಅವು ಶೂನ್ಯವಲ್ಲ. ಇದೇ ಮಾಯೆ.

"ನಾನು ಈಗ ಜೋಪಾನವಾಗಿ ಇದನ್ನೆಲ್ಲ ಬರೆಯಬೇಕಾಗಿದೆ. ನಾನೀಗ ಸರಿಯಾದ ಹಾದಿಯಲ್ಲಿರುವೆ ಎಂಬುದು ನಿನಗೆ ತಕ್ಷಣವೇ ಗೊತ್ತಾಗುವುದು. ಮನಸ್ಸಿಗೆ ಸೇರಿದ ಚಿತ್ತ ಬುದ್ಧಿ ಮುಂತಾದುವನ್ನು ವಿವರಿಸಬೇಕಾದರೆ ಶರೀರಶಾಸ್ತ್ರಕ್ಕೆ ಸಂಬಂಧಪಟ್ಟ ಮೇಲೆ ಮತ್ತು ಕೆಳಗೆ ಇರುವ ಚಕ್ರಗಳ ವಿಷಯವಾಗಿ ತಿಳಿದುಕೊಳ್ಳಬೇಕಾದರೆ ಹೆಚ್ಚು ಅದನ್ನೆ ಅಧ್ಯಯನ ಮಾಡಬೇಕು. ಆದರೆ ಈಗ ನನಗೆ ಎಲ್ಲಾ ಸ್ಪಷ್ಟವಾಗಿ ಕಾಣುತ್ತಿದೆ. ಯಾವ ಮೌಢ್ಯತೆಯೂ ಇಲ್ಲ."

ಇತರ ಪತ್ರಗಳಂತೆ ಇಲ್ಲಿಯೂ ಕೂಡ ಸ್ವಾಮಿಜಿಯ ಸಾಮರಸ್ಯ ಪ್ರತಿಭೆಯನ್ನು ನಾವು ನೋಡುತ್ತೇವೆ. ಶಂಕರಾಚಾರ್ಯರ ನಿಲುವನ್ನು ಬಿಡುವುದಿಲ್ಲ. ಆತ್ಮ ಬರುವುದೂ ಇಲ್ಲ ಹೋಗುವುದೂ ಇಲ್ಲ ಎಂಬುದು ಯಾವಾಗಲೂ ಸತ್ಯವಾಗಿ ಉಳಿದಿರುವುದು. ಆದರೆ ಬೇರೆ ದಿಕ್ಕಿನಿಂದ ಪ್ರಯತ್ನಿಸಿದವರ ಶ್ರಮ ಕೂಡ ವ್ಯರ್ಥವಾಗದಂತೆ ನೋಡಿಕೊಂಡರು. ತಾತ್ತ್ವಿಕ ದೃಷ್ಟಿಯುಳ್ಳ ಅದ್ವೈತಿ, ಬೇರೆ ಬೇರೆ ಮಾನಸಿಕ ಸ್ಥಿತಿಗಳನ್ನು ವೈಜ್ಞಾನಿಕವಾಗಿ ಪರೀಕ್ಷಿಸಿದ ದ್ವೈತಿಗಳು ಇವರಿಬ್ಬರೂ ಒಬ್ಬರಿಗೊಬ್ಬರು ಪೋಷಕ ಮತ್ತು ಹೊಸ ಸಿದ್ಧಾಂತಕ್ಕೆ ಇವರಿಬ್ಬರೂ ಆವಶ್ಯಕ.

ಮೃತ್ಯು ಎಂಬ ಘಟನೆಯನ್ನು ಹೊರಗಿನಿಂದ ನಾವು ನೋಡಬೇಕಾದುದು. ನಮ್ಮ ಸ್ವಂತ ಜನರೇ ಕಾಲವಾದಾಗ ನಮ್ಮ ನಿತ್ಯಗುರಿ ಎಡೆಗೆ ನಾವು ನೋಡಲಾರೆವು. ನಾವು ಹೇಗೆ ದುಃಖಪಡುವೆವೋ ಹಾಗೆಯೇ ಇತರರ ದುಃಖವನ್ನು ನಾವು ಅನುಭವಿಸುವೆವು. ಯಾವ ಸಮಾಧಾನವನ್ನೂ ನೆಚ್ಚಲು ನಮಗೆ ಧೈರ್ಯ ಸಾಲದು. ಆದರೆ ಧೈರ್ಯವನ್ನು ಕೆಲವು ವೇಳೆ ಇತರರಿಗೆ ಹೇಳಲು ಯತ್ನಿಸುವೆವು. ಅದು ಸ್ಪಷ್ಟವಾದ ಸತ್ಯದಂತೆ ಅವರಿಗೆ ಉದಹರಿಸುವೆವು. ಸ್ವಾಮಿಜಿ ಕೂಡ ಇದಕ್ಕೆ ವಿನಾಯತಿ ಅಲ್ಲ. ಸ್ವಾಮಿಜಿ ಅಮೆರಿಕಾದೇಶದ ಧೀರಮಾತೆಯೆಂಬ ಹೆಂಗಸಿಗೆ ಬರೆದ ಪತ್ರ ಈ ವಿಷಯದ ಮೇಲೆ ಅವರು ವ್ಯಕ್ತಪಡಿಸಿರುವ ಅಭಿಪ್ರಾಯ ಬಹಳ ಮುಖ್ಯ ಎಂದು ನಾವು ಭಾವಿಸುವೆವು. ಆಕೆ ತನ್ನ ತಂದೆಯನ್ನು ಕಳೆದುಕೊಂಡಾಗ ಈ ಪತ್ರವನ್ನು ಬರೆದರು. ಇಲ್ಲಿ ಸ್ವಾಮಿಜಿ ಭಾವನೆಯ ತಿರುಳನ್ನು

ನೋಡುವೆವು. ವಿಶ್ವಾಸದಿಂದ ಆಕೆಗಾಗಿ ಬರೆದಿರುವರು. ನಾವು ಪ್ರೀತಿಸು ವವರ ಮರಣಾನಂತರದ ಸ್ಥಿತಿ ಕೂಡ ಹೀಗೆ ಆಗಬಹುದೆಂದು ಯೋಚಿಸ ಬಹುದು.

ಬ್ರುಕ್‌ಲಿನ್ನಿನಿಂದ ಅವರು ಜನವರಿ ೧೮೯೫ರಲ್ಲಿ ತಂದೆಯನ್ನು ಕಳೆದು ಕೊಂಡ ಮಗಳಿಗೆ ಹೀಗೆ ಕಾಗದ ಬರೆಯುವರು: "ನಿಮ್ಮ ತಂದೆ ತನ್ನ ಮುದಿ ದೇಹವನ್ನು ತೊರೆದನು ಎಂಬ ಭಾವನೆ ಹೇಗೋ ನನ್ನ ಮನಸ್ಸಿಗೆ ಬಂದಿತು. ಮಾಯೆ ಇಂತಹ ದುಃಖದಿಂದ ಯಾರನ್ನಾದರೂ ದಂಡಿಸುವಾಗ ನಾನು ಪತ್ರ ಬರೆಯುವುದು ಅಪರೂಪ. ಆದರೆ ಜೀವನದಲ್ಲಿ ಇವುಗಳಿಂದಲೇ ನಾವು ಬೇರೊಂದು ಅಧ್ಯಾಯವನ್ನು ಪ್ರಾರಂಭಿಸುವ ಕಾಲ. ನೀನು ಉದ್ವಿಗ್ನ ತೆಗೆ ಎಡೆಗೊಡದೆ ಇರುವೆ ಎಂದು ನಾನು ಭಾವಿಸುವೆ. ಸಾಗರದ ಮೇಲಿನ ಅಲೆಗಳು ಮೇಲೆದ್ದು ಬೀಳುತ್ತಿರಬಹುದು. ಆದರೆ ಜ್ಞಾನವನ್ನು ಪಡೆದ ಮಗುವಿಗೆ, ಜಾಗ್ರತನಾದವನಿಗೆ, ಪ್ರತಿಸಲ ಅಲೆ ಕೆಳಗೆ ಇಳಿದಾಗಲೂ ಸಾಗರದ ಆಳ ಗೊತ್ತಾಗುವುದು. ಕೆಳಗೆ ಇರುವ ಮುತ್ತು ಹವಳಗಳು ಗೋಚರವಾಗುವುವು. ಬರುವುದು ಹೋಗುವುದು ಎಲ್ಲಾ ಭ್ರಾಂತಿ. ಆತ್ಮ ಎಂದಿಗೂ ಬರುವುದೂ ಇಲ್ಲ, ಹೋಗುವುದೂ ಇಲ್ಲ. ಆತ್ಮ ಹೋಗುವುದೆಲ್ಲಿಗೆ, ಎಲ್ಲಾ ಲೋಕಗಳೂ ಅದರಲ್ಲಿರುವಾಗ? ಕಾಲವೆಲ್ಲ ಅದರಲ್ಲಿರುವುದರಿಂದ ಅದು ಯಾವಾಗ ಬರುವುದು ಯಾವಾಗ ಹೋಗುವುದು?

"ಭೂಮಿ ಸುತ್ತುತ್ತಿರುವುದು. ಆದರೆ ಸೂರ್ಯ ಸುತ್ತುತ್ತಿರುವಂತೆ ಭ್ರಾಂತಿಯಾಗುವುದು. ಆದರೆ ಸೂರ್ಯ ಚಲಿಸುವುದೇ ಇಲ್ಲ. ಇದರಂತೆಯೇ ಪ್ರಕೃತಿ ಅಥವಾ ಮಾಯೆ ಚಲಿಸುತ್ತಿದೆ, ಬದಲಾಯಿಸುತ್ತಿದೆ, ದೃಶ್ಯವಾದ ಮೇಲೆ ದೃಶ್ಯವನ್ನು ತೋರುತ್ತಿದೆ. ಜೀವನದ ಅದ್ಭುತವಾಗಿರುವ ಗ್ರಂಥ ದಲ್ಲಿ ಹಾಳೆಯಾದ ಮೇಲೆ ಹಾಳೆಯನ್ನು ತಿರುವಿಹಾಕುತ್ತಿದೆ. ಆದರೆ ಸಾಕ್ಷಿಯಾದ ಆತ್ಮ ಚಲಿಸದೆ ಬದಲಾಯಿಸದೆ ಜ್ಞಾನವನ್ನು ಪಡೆಯುತ್ತಿರು ವುದು. ಹಿಂದೆ ಇದ್ದ, ಈಗಿರುವ, ಮುಂದಿರುವ ಜೀವರುಗಳೆಲ್ಲ ವರ್ತ ಮಾನಕಾಲದಲ್ಲಿ ಇರುವರು. ದೇಶದ ಭಾವನೆ ಆತ್ಮನಲ್ಲಿ ಬರುವುದಿಲ್ಲ. ನಮ್ಮದಾದುದೆಲ್ಲ ಈಗಲೂ ನಮ್ಮದಾಗಿರಬೇಕು, ಮುಂದೆಯೂ ನಮ್ಮದಾಗಿರ ಬೇಕು. ಇವು ಯಾವಾಗಲೂ ನಮ್ಮ ಬಳಿಯೇ ಇದೆ, ಹಿಂದೆಯೂ ಯಾವಾಗಲೂ ನಮ್ಮಲ್ಲಿಯೇ ಇರುವುದು. ನಾವು ಅವರಲ್ಲಿರುವೆವು, ಅವು

ನಮ್ಮಲ್ಲಿರುವುವು. ಈ ಚಿತ್ರದಲ್ಲಿರುವ ಮನೆಗಳನ್ನು ತೆಗೆದುಕೊಳ್ಳಿ. ಪ್ರತಿಯೊಂದು ಬೇರೆ ಆದರೂ ಇವುಗಳೆಲ್ಲ A B ಹತ್ತಿರ ಸೇರುವುದು. ಅಲ್ಲಿ ಇವುಗಳೆಲ್ಲವೂ ಒಂದು. ಪ್ರತಿಯೊಂದು ಬೇರೆ ಬೇರೆ ಆದರೂ A B ಯಲ್ಲಿ ಸೇರಿವೆ. ಎಷ್ಟೇ ಪ್ರಯತ್ನ ಪಟ್ಟರೂ ಯಾರು ಅಕ್ಷರೇಖೆಯಿಂದ (Axis) ತಪ್ಪಿಸಿಕೊಂಡು ಹೋಗಲಾರರು. ಆದರೂ ಅಕ್ಷರೇಖೆಯ ಮೇಲೆ ನಿಂತರೆ ಯಾವ ಮನೆಗೆ ಬೇಕಾದರೂ ಹೋಗಬಹುದು. ಈ ಅಕ್ಷರೇಖೆಯೇ ದೇವರು. ಅಲ್ಲಿ ನಾವುಗಳೆಲ್ಲ ಒಂದು, ಎಲ್ಲರೂ ಎಲ್ಲರಲ್ಲಿಯೂ ಇರುವರು, ಎಲ್ಲರೂ ದೇವರಲ್ಲಿ ಇರುವರು.




"ಮೋಡ ಚಂದ್ರನ ಮುಂದೆ ಚಲಿಸುತ್ತಿರುವಾಗ ಚಂದ್ರ ಚಲಿಸುತ್ತಿರುವನು ಎಂಬ ಭ್ರಾಂತಿಯನ್ನುಂಟುಮಾಡುವುದು. ಹಾಗೆಯೇ ಪ್ರಕೃತಿ ದೇಹ ದ್ರವ್ಯ ಮುಂತಾದುವು ಚಲಿಸುತ್ತ ಆತ್ಮವೇ ಚಲಿಸುತ್ತಿದೆ ಎಂಬ ಭ್ರಾಂತಿಯನ್ನುಂಟು ಮಾಡುವುದು. ಪ್ರತಿಯೊಂದು ದೇಶದ ಜನರೂ ಸತ್ತವರು ತಮ್ಮ ಸಮೀಪದಲ್ಲಿರುವರೆಂದು ಭಾವಿಸುವ ಹುಟ್ಟುಗುಣ (ಅಥವಾ ಪ್ರತಿಭೆ?) ಬೌದ್ಧಿಕವಾಗಿಯೂ ಸತ್ಯ.

"ಪ್ರತಿಯೊಂದು ಆತ್ಮವೂ ಒಂದು ನಕ್ಷತ್ರದಂತೆ. ಎಲ್ಲಾ ತಾರೆಗಳೂ ಭಗವಂತನೆಂಬ ಆಗಸದಲ್ಲಿವೆ. ಪ್ರತಿಯೊಬ್ಬರ ಮೂಲವೆ ಅದು, ಸತ್ಯವೇ ಅದು, ನಿಜವಾದ ವ್ಯಕ್ತಿತ್ವವೇ ಅದು. ನಮ್ಮ ಕಣ್ಣಿಗೆ ಕಾಣದಂತೆ ಹೋದ ನಕ್ಷತ್ರವನ್ನು ಹುಡುಕುವ ಯತ್ನದಲ್ಲಿ ಧರ್ಮ ಪ್ರಾರಂಭವಾಯಿತು. ಎಲ್ಲ ತಾರೆಗಳನ್ನೂ ಕೊನೆಗೆ ನಮ್ಮನ್ನೂ ಕೂಡ ದೇವರಲ್ಲಿ ಕಂಡಾಗ ಅದು ತನ್ನ ಗುರಿಯನ್ನು ಮುಟ್ಟಿತು. ಸತ್ಯಾಂಶವೇನೆಂದರೆ ನಿನ್ನ ತಂದೆ ಧರಿಸಿದ್ದ ಹಳೆಯ ದೇಹವನ್ನು ತ್ಯಜಿಸಿ ತಾನು ಸರ್ವದಾ ಎಲ್ಲಿದ್ದನೋ ಅಲ್ಲಿಯೇ ನಿಂತಿರುವನು. ಈ ಪೃಥ್ವಿಯಲ್ಲಿಯೇ ಅಥವಾ ಇನ್ನೆಲ್ಲಿಯಾದರೋ ಅವನು ಬೇರೊಂದು ದೇಹವನ್ನು ಧರಿಸುವನೆ? ಆತನೇ ತಾನು ತಿಳಿದು ಮಾಡುವತನಕ ಅವನಿಗೆ ಹಾಗೆ ದೇಹ ಪ್ರಾಪ್ತವಾಗದೆ ಇರಲಿ ಎಂದು ನಾನು ಪ್ರಾರ್ಥಿಸುತ್ತೇನೆ. ಯಾರೂ ತಮ್ಮ ಪ್ರಾರಬ್ಧ ಕರ್ಮದಿಂದ ಬಲಾತ್ಕಾರವಾಗಿ ದೇಹ ಧರಿಸದಂತೆ ನಾನು ಪ್ರಾರ್ಥಿಸುತ್ತೇನೆ. ಎಲ್ಲರೂ ಮುಕ್ತರಾಗಲೆಂದು ನಾನು ಪ್ರಾರ್ಥಿಸುತ್ತೇನೆ. ಅಂದರೆ ಅವನು

ಮುಕ್ತ ಎಂಬುದನ್ನು ತಿಳಿದುಕೊಳ್ಳಲಿ ಎಂದು ಪ್ರಾರ್ಥಿಸುತ್ತೇನೆ. ಅವರು ಪುನಃ ಕನಸು ಕಾಣಬೇಕಾದರೆ ಅವರ ಕನಸೆಲ್ಲ ಶಾಂತಿಯಿಂದ ಕೂಡಿರಲಿ, ಆನಂದಮಯವಾಗಿರಲಿ.



೨೫

## ಪ್ರಜ್ಞಾತೀತ ಅನುಭವಗಳು

ಯಾರಾದರೂ ದೊಡ್ಡದೊಂದು ಹಳ್ಳವನ್ನು ಸಣ್ಣದೊಂದು ತೊಲೆಯ ಮೇಲೆ ದಾಟುತ್ತಿದ್ದರೆ ಅವನು ಆ ಎತ್ತರದಿಂದ ಬಿದ್ದರೆ ಪುನಃ ತಾನು ಹಿಂದೆ ಇದ್ದ ಸ್ಥಳಕ್ಕೇ ಬರಬೇಕಾಗುವುದು. ಹೀಗೆಯೆ ಇರುವುದು ಸಾಧಾರಣ ವಾಗಿ ನಮಗೆ ಅತೀತವಾದ ಆಧ್ಯಾತ್ಮಿಕ ಅನುಭವಗಳನ್ನು ಪಡೆಯುವುದು. ಈ ಕಥೆಗಳು ಪುರಾಣದಲ್ಲಿ ಬೇಕಾದಷ್ಟು ಇವೆ. ಸಮುದ್ರದಮೇಲೆ ನಡೆಯು ತ್ತಿದ್ದ ಪೀಟರ್ ತಾನೆಲ್ಲಿರುವೆನು ಎಂಬುದನ್ನು ಅರಿತಾಗ ಮುಳುಗುವನು. ಬೆಟ್ಟದ ತಪ್ಪಲಲ್ಲಿ ಮಲಗಿದ್ದ ದಣಿದ ಕೆಲವರು ಎದ್ದಾಗ ಅವರ ಯಜಮಾನ ಯಾವನೋ ಬೇರೊಬ್ಬನಂತೆ ಆಗಿರುವುದನ್ನು ಕಂಡರು. ಅವರು ಅನಂತರ ಪುನಃ ಪ್ರಪಂಚದಲ್ಲಿ ಬೆರೆತಾಗ ಹಿಂದಿನ ಅನುಭವ ಮಾಯವಾಗಿ ಅದೊಂದು ಅಸ್ಪಷ್ಟವಾದ ಸ್ಮೃತಿಯಾಗುವುದು. ಕುರುಬರು ರಾತ್ರಿ ತಮ್ಮ ಕುರಿ ಯನ್ನು ಕಾಯುತ್ತ ಧಾರ್ಮಿಕ ವಿಷಯಗಳನ್ನು ಮಾತನಾಡುತ್ತಿದ್ದಾಗ ಯಾರೋ ದೇವದೂತರು ಅವರ ಬಳಿ ಇರುವಂತೆ ಭಾವಿಸುವರು. ಸ್ವಲ್ಪ ಕಾಲವಾದ ಮೇಲೆ ಮನಸ್ಸು ಆ ಉತ್ತಮಸ್ಥಿತಿಯಿಂದ ಕೆಳಗೆ ಇಳಿಯುವುದು. ದೇವತೆಗಳೆಲ್ಲ ಆಕಾಶದಲ್ಲೆ ಮಾಯವಾದಂತೆ ತೋರುವರು! ಇದನ್ನು ಕೇಳುತ್ತಿದ್ದವರು ಹತ್ತಿರದ ಹಳ್ಳಿಯಲ್ಲಿ ಏನಾಗಿದೆಯೊ ಎಂದು ಸಾಧಾರಣ ವ್ಯಕ್ತಿಗಳಂತೆ ನೋಡಲು ಹೋಗುವರು.

ಇದಕ್ಕೆ ವ್ಯತ್ಯಾಸವಾಗಿರುವುದೇ ಭಾರತೀಯನ ಆದರ್ಶ. ಅವನ ಕೆಳಗಿನ ಮನಸ್ಸು ಸಂಪೂರ್ಣವಾಗಿ ಅವನ ವಶದಲ್ಲಿರುವುದು. ಮನ ಬಂದಾಗ ಬೇಕಾದರೆ ಅವನು ಸಮಾಧಿಯಲ್ಲಿ ಮಗ್ನನಾಗಬಲ್ಲ; ಅಲ್ಲಿ ಎಷ್ಟು ಹೊತ್ತು ಹೇಗಾದರೂ ಇರಬಲ್ಲ. ಅವನು ತನ್ಮಯತೆಯ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗಿ ಸಮಾಧಿಯಲ್ಲಿ ತಲ್ಲೀನನಾಗುವನು. ಅವನು ಪುನಃ ಪ್ರಾಪಂಚಿಕ ಜೀವನಕ್ಕೆ ಜಾರುವ ಅಂಜಿಕೆಯೇ ಇರುವುದಿಲ್ಲ. ಇದು ಅಭ್ಯಾಸ ಮತ್ತು ಅನುಭವದಿಂದ ಕ್ರಮೇಣ ನಿಸ್ಸಂದೇಹವಾಗಿ ಸಾಧ್ಯವಾಗು ವುದು. ಈ ಅನುಭವ ನಮ್ಮ ಸ್ವಂತ ಆಗಬೇಕಾದರೂ ಮನಸ್ಸು ಬಂದೊಡನೆ ಆಲೋಚನೆಗೆ ಅತೀತನಾಗಿ ಹೋಗಬಲ್ಲ ಶಕ್ತಿ ಇರಬೇಕು. ಮನಸ್ಸನ್ನು ಅಷ್ಟು ಚೆನ್ನಾಗಿ ಯಾರು ಏಕಾಗ್ರಮಾಡಬಲ್ಲರೊ, ತತ್‌ಕ್ಷಣದಲ್ಲಿ ನಿಗ್ರಹಿಸ

ಬಲ್ಲರೋ, ಅವರ ಕೈಯಲ್ಲಿ ಮನಸ್ಸು ನುರಿತ ಸವಾರನ ಕೈಯಲ್ಲಿರುವ ವೇಗ ವಾದ ಕುದುರೆಯಂತೆ ಆಗುವುದು. ಮನಸ್ಸಾದರೂ ಅವನು ಹೇಳಿದ ಮಾತನ್ನು ಕೇಳುವ ದಾಸನಂತೆ ಆಗುವುದು. ಈ ಶಕ್ತಿ ಇಲ್ಲದೇ ಇದ್ದರೆ ನಮ್ಮ ಮನೋನಿಗ್ರಹ ಇನ್ನೂ ಪೂರ್ಣವಾಗಿಲ್ಲ, ದೃಢವಾಗಿಲ್ಲ. ಯಾವು ದಾದರೂ ಒಂದು ಕಾಲದಲ್ಲಿ ಇಂತಹ ನಿಗ್ರಹವನ್ನು ಪಡೆದವರು ಎಷ್ಟು ಅಲ್ಪಮಂದಿ. ಇಂತಹವರು ಮಾಡುವ ಕೆಲಸ, ಆಡುವ ಮಾತಿನಲ್ಲಿ ಒಂದು ಕಾಂತಿ ಇದೆ, ಶಕ್ತಿ ಇದೆ. ಇದನ್ನು ನಾವು ಮರೆಯುವುದಕ್ಕೇ ಆಗುವುದಿಲ್ಲ. "ಅವರು ಅಧಿಕಾರವಾಣಿಯಿಂದ ಮಾತನಾಡುವರು, ಕಪಟಿಗಳಂತೆ ಅಲ್ಲ."

ಶ್ರೀರಾಮಕೃಷ್ಣರು ನರೇಂದ್ರನನ್ನು ನೋಡಿದೊಡನೆಯೆ ಇವನೊಬ್ಬ ಆಜನ್ಮ ಬ್ರಹ್ಮಜ್ಞಾನಿ ಎಂದು ತಿಳಿದರೆಂಬುದರಲ್ಲಿ ಸಂದೇಹವೇ ಇಲ್ಲ. ಒಬ್ಬ ನುರಿತ ಇಂಜನೀಯರ್ ವೇಗದಿಂದ ಹರಿವ ಪ್ರವಾಹವನ್ನು ನೋಡಿ ದಾಗ ಇದು ಎಷ್ಟು ಎತ್ತರದಿಂದ ಬಂದಿರಬಹುದು ಎಂಬುದನ್ನು ಗ್ರಹಿಸು ವಂತೆ ನರೇಂದ್ರನ ಮನಸ್ಸು ಯಾವ ಮಟ್ಟದಲ್ಲಿದೆ ಎಂಬುದನ್ನು ಗ್ರಹಿ ಸಿದರು. ಶ್ರೀರಾಮಕೃಷ್ಣರು ನರೇಂದ್ರನನ್ನು "ನೀನು ನಿದ್ದೆಗೆ ಹೋಗು ವಾಗ ಒಂದು ಜ್ಯೋತಿಯನ್ನು ನೋಡುತ್ತೀಯಾ ?" ಎಂದು ಉತ್ಸಾಹ ದಿಂದ ಕೇಳಿದರು. ಹುಡುಗ ಆಶ್ಚರ್ಯದಿಂದ ಎಲ್ಲರೂ ನೋಡುವುದಿಲ್ಲವೆ? ಎಂದು ಕೇಳಿದ. ಅನಂತರ ಜೀವನದಲ್ಲಿ ಈ ಪ್ರಶ್ನೆಯನ್ನು ನಮಗೆ ಹೇಳಿ ಇದನ್ನು ವಿವರಿಸುತ್ತಿದ್ದರು. ಕೆಲವು ವೇಳೆ ಈ ಜ್ಯೋತಿ ಹುಡುಗ ಒಂದು ಚೆಂಡನ್ನು ಹೊಡೆದರೆ ಹೇಗ ಬರುವುದೋ ಹಾಗೆ ಚೆಂಡಿನಾಕಾರದಲ್ಲಿ ಇವರ ಬಳಿಗೆ ಬರುತ್ತಿತ್ತು. ಅದು ಸಮೀಪಿಸುತ್ತಿತ್ತು. ಇವರು ಅದರಲ್ಲಿ ಒಂದಾಗಿ ಎಲ್ಲವನ್ನೂ ಮರೆತುಬಿಡುತ್ತಿದ್ದರು. ಕೆಲವು ವೇಳೆ ಅದೊಂದು ಜ್ವಾಲೆಯಂತೆ ಕಾಣುತ್ತಿತ್ತು. ಇವರು ಅದರೊಳಗೆ ಪ್ರವೇಶಿಸುತ್ತಿದ್ದರು. ಹೀಗೆ ಪ್ರಾರಂಭವಾದ ನಿದ್ರೆ ನಿಜವಾಗಿ ನಾವು ಮಾಡುವಂತಹ ನಿದ್ರೆಯೇ ಎಂದು ಕೆಲವು ವೇಳೆ ಸಂದೇಹವಾಗುವುದು. ಇವರು ನಿದ್ರೆಮಾಡುತ್ತಿ ದ್ದಾಗ ಶ್ರೀರಾಮಕೃಷ್ಣರು ನರೇಂದ್ರ ಉಸಿರಾಡುತ್ತಿದ್ದ ರೀತಿಯನ್ನು ನೋಡಿ ಇವನು ನಿದ್ರಿಸುವಂತೆ ಇದ್ದರೂ ಧ್ಯಾನಿಸುತ್ತಿರುವನು. ಧ್ಯಾನದ ಇಂತಹ ಅವಸ್ಥೆಯಲ್ಲಿರುವನು ಎಂದು ಹೇಳುತ್ತಿದ್ದರೆಂದು ಅವರ ಶಿಷ್ಯರು ಹೇಳು ವರು. ಒಂದು ಸಲ ಕಾಸೀಪುರದ ತೋಟದ ಮನೆಯಲ್ಲಿದ್ದಾಗ ಶ್ರೀರಾಮ

ಕೃಷ್ಣರು ರೋಗದಿಂದ ನರಳುತ್ತಿದ್ದರು. ಆ ಸಮಯದಲ್ಲಿ ನರೇಂದ್ರ ಹಲವು ಗಂಟೆಗಳು ನಿದ್ರೆಮಾಡುತ್ತಿರುವಂತೆ ಅವರ ಗುರುಭಾಯಿಗಳು ಕಂಡರು. ಇದಕ್ಕೆ ಇದ್ದಂತೆಯೆ ಮಧ್ಯರಾತ್ರಿಯಲ್ಲಿ ತಕ್ಷಣ ಎದ್ದು "ನನ್ನ ದೇಹ ವೆಲ್ಲಿ" ಎಂದು ಕಿರಿಚಿಕೊಂಡರಂತೆ. ಆಗ ಗೋಪಾಲದಾದಾ ಎಂಬ ಮತ್ತೊಬ್ಬ ಹಿರಿಯ ಗುರುಭಾಯಿಗಳು ಅವರ ಬಳಿಗೆ ಹೋಗಿ ಪ್ರಜ್ಞೆ ಬರು ವಂತೆ ಮಾಡಲು ದೇಹವನ್ನೆಲ್ಲಾ ಒತ್ತಿನೋಡಿದರು. ಇದೆಲ್ಲಾ ನಿಷ್ಫಲ ವಾದಾಗ, ಹುಡುಗ ದೇಹವೆಲ್ಲಿ ಎಂದು ಕೂಗಿಕೊಳ್ಳುತ್ತಿದ್ದಾಗ ಗೋಪಾಲ ದಾದ ಗಾಬರಿಯಾಗಿ ಶ್ರೀರಾಮಕೃಷ್ಣರ ಬಳಿಗೆ ಹೋಗಿ ನರೇಂದ್ರನ ಸ್ಥಿತಿ ಯನ್ನು ವಿವರಿಸಿದರು. ಅವರು ಆಗ" ಅವನು ಆ ಸ್ಥಿತಿಯಲ್ಲಿ ಸ್ವಲ್ಪಕಾಲ ಇರಲಿ. ಅದರಿಂದ ಏನೂ ತೊಂದರೆಯಾಗುವುದಿಲ್ಲ. ಆ ಅವಸ್ಥೆಗಾಗಿ ನನ್ನನ್ನು ಬಹಳ ಕಾಡಿರುವನು" ಎಂದರು. ಅನಂತರ ಶ್ರೀರಾಮಕೃಷ್ಣರು ನರೇಂದ್ರನಿಗೆ ನಿರ್ವಿಕಲ್ಪಸಮಾಧಿ ಸವಿನೋಡಿ ಆಯಿತು; ಅವನು ಇನ್ನೂ ಕೆಲಸಮಾಡಬೇಕಾಗಿದೆ ಎಂದರು. ಸ್ವಾಮಿಜಿಯೆ ತಮ್ಮ ಗುರುಭಾಯಿ ಶಾರದಾನಂದರಿಗೆ ಈ ಅನುಭವದಲ್ಲಿ ಪ್ರಾರಂಭದಲ್ಲಿ ಏನಾಯಿತು ಎಂಬು ದನ್ನು ವಿವರಿಸಿದ್ದರು. ತಲೆಯಲ್ಲಿ ಯಾವುದೋ ಜ್ಯೋತಿ ಇರುವಂತೆ ಕಂಡಿತು. ಅದೆಷ್ಟು ಪ್ರಕಾಶವಾಗಿತ್ತು ಎಂದರೆ ಯಾವುದೋ ಪ್ರಕಾಶ ಮಾನವಾದ ದೀಪವನ್ನು ಯಾರೊ ತಮ್ಮ ತಲೆಯ ಹಿಂದೆ ಇಟ್ಟರುವಂತೆ ಕಂಡರು. ಅನಂತರ ಪಂಚೇಂದ್ರಿಯಗಳಿಂದ ಅವರ ಮನಸ್ಸು ಕಳಚಿ ಕೊಂಡು ಹೋಗಿ ಸಮಾಧಿಯಲ್ಲಿ ತಲ್ಲೀನವಾಯಿತು. ಅದು ಮಾತಿನ ಮೂಲಕ ಯಾರೂ ವಿವರಿಸಲಾಗದ ಸ್ಥಿತಿ.

ಮನಸ್ಸನ್ನು ಏಕಾಗ್ರಮಾಡಬೇಕಾದರೆ ಮೊದಲು ನಾವು ದೇಹವನ್ನು ಮರೆಯಬೇಕು. ಇದನ್ನು ಗಮನದಲ್ಲಿಡಬೇಕು. ಇದಕ್ಕಾಗಿಯೆ ತಪಸ್ಸು ಮತ್ತು ಇಂದ್ರಿಯನಿಗ್ರಹ. ಸ್ವಾಮಿಜಿಗೆ ಕಠೋರ ತಪಸ್ಯೆ ಎಂದರೆ ಯಾವಾಗಲೂ ಆಸಕ್ತಿ. ಅವರು ಎಷ್ಟೇ ನಿರ್ಭಯವಾಗಿ ಪ್ರಪಂಚದಲ್ಲಿ ಕೆಲಸಮಾಡುತ್ತಿದ್ದರೂ ಮಧ್ಯೆಮಧ್ಯೆ ಈ ಆದರ್ಶದ ಕೇಂದ್ರದ ಕಡೆಗೆ ಮನಸ್ಸು ಓಡಿ ಓಡಿ ಬರುತ್ತಿತ್ತು. ನುರಿತ ಅಶ್ವಾರೂಢ ಲಗಾಮನ್ನು ಎಳೆಯುವಂತೆ, ವಾದ್ಯಗಾರ ತಂತಿಯನ್ನು ಬಾರಿಸುವಂತೆ, ತಮ್ಮ ದೇಹ ಎಷ್ಟುಮಟ್ಟಿಗೆ ಇಚ್ಛೆಗೆ ಅಧೀನವಾಗಿದೆ ಎಂಬುದನು.ೀಕ್ಷಾ. ಮನಸ್ಸನ್ನು ಯಾವಾಗ ಅದು ಹೇಳಿದಂತೆ ಕೇಳ್ವುಿಡಬಲ್ಲರೊ, ತತ್‌ಕ್ಷಣದಲ್ಲಿ ನಿಗ್ರಹಿಸ

ಒಂದು ಸಲ ಅವರು ಕಲ್ಕತ್ತೆಯಲ್ಲಿ ಬೇಸಿಗೆಕಾಲದಲ್ಲಿ ಚಿಕಿತ್ಸೆಯಕಾಲದಲ್ಲಿ ಇವರು ನೀರನ್ನು ಕುಡಿಯಕೂಡದಾಗಿತ್ತು. ಬರೀ ಬಾಯಿ ಮುಕ್ಕಳಿಸುವುದಕ್ಕೆ ಮಾತ್ರ ನೀರನ್ನು ಉಪಯೋಗಿಸಬಹುದಾಗಿತ್ತು. ಆಗ ಇವರು ಬಾಯಿಗೆ ನೀರು ಹಾಕಿಕೊಂಡರೆ ಗಂಟಲಿನ ಕೆಳಗೆ ನೀರು ಹೋಗದಂತೆ ಇವರ ಬಾಯಿನ ಮಾಂಸಖಂಡಗಳೇ ಇವರ ಇಚ್ಛೆ ಇಲ್ಲದೇ ತಡೆದುಬಿಡುತ್ತಿದ್ದುವು. "ನಾನು ಏನನ್ನು ಬೇಕಾದರೂ ಮಾಡಬಲ್ಲೆ ಎಂದು ತೋರುವುದು" ಎನ್ನುತ್ತಿದ್ದರು. ಇವರು ಏನಾದರೂ ಉಪವಾಸಮಾಡುತ್ತಿದ್ದರೆ ಇವರ ಹತ್ತಿರ ಇದ್ದವರಿಗೂ ಆಹಾರದ ಮೇಲೆ ಮನಸ್ಸೇ ಹೋಗುತ್ತಿರಲಿಲ್ಲ; ಅವರಿಗೂ ಆಹಾರ ಬೇಡ ಎನ್ನಿಸುತ್ತಿತ್ತು. ಒಂದು ಸಲ ಇವರ ಸುತ್ತಲೂ ಯಾರೊ ವಾದಮಾಡುತ್ತಿದ್ದರು. ಇವರು ಅದಕ್ಕೆ ಗಮನವನ್ನೇ ಕೊಡದಿರುವವರಂತೆ ಇದ್ದರು. ತಕ್ಷಣವೇ ಇವರ ಕೈಯಲ್ಲಿದ್ದ ಒಂದು ಬರೀ ಲೋಟವನ್ನು ಅಮುಕಿ ಪುಡಿಪುಡಿಮಾಡಿದರು. ವಾದದಿಂದ ಇವರಿಗೆ ಆದ ವ್ಯಥೆಯನ್ನು ತೋರಿದ್ದು ಇದು ಮಾತ್ರ.

ಇಂತಹ ಇಂದ್ರಿಯನಿಗ್ರಹವನ್ನು ಸಂಪಾದಿಸಿದ ಅಭ್ಯಾಸ ಎಷ್ಟು ಕಠೋರವಾದುದು ಎಂಬುವನ್ನು ಗ್ರಹಿಸುವುದು ಸುಲಭವಲ್ಲ. ಇದಕ್ಕಾಗಿ ಎಷ್ಟು ಪೂಜೆ ಧ್ಯಾನಗಳನ್ನು ಮಾಡಬೇಕಾಯಿತೊ! ನಿದ್ರೆ ಆಹಾರಗಳನ್ನು ತ್ಯಜಿಸಬೇಕಾಯಿತೊ! ನಿದ್ರೆಯ ವಿಷಯದಲ್ಲಂತೂ ಅವರು ಒಮ್ಮೆ ಇಪ್ಪತ್ತೈದು ದಿನಗಳಲ್ಲಿ ದಿನಕ್ಕೆ ಅರ್ಧ ಗಂಟೆ ಮಾತ್ರ ನಿದ್ರೆಮಾಡಿದರು. ಈ ಅರ್ಧ ಗಂಟೆಯ ನಿದ್ರೆಯಿಂದ ಏಳುತ್ತಿದ್ದರು! ಅಂದಿನಿಂದ ಇವರಿಗೆ ನಿದ್ರೆ ಸರಿಯಾಗಿ ಬರುತ್ತಿದ್ದುದೇ ಅಪರೂಪ. ಇವರು ಒಂದು ಸಲ ಹುಡುಗರಾಗಿದ್ದಾಗ ದೇವೇಂದ್ರನಾಥಠಾಕೂರರನ್ನು "ದೇವರನ್ನು ನೀವು ನೋಡಿರುವಿರಾ?" ಎಂದು ಕೇಳುವುದಕ್ಕಾಗಿ ಅವರು ಆಗ ಇದ್ದ ವಿಹಾರ ನೌಕೆಗೆ ಹೋಗಿದ್ದರು. ದೇವೇಂದ್ರನಾಥರು ನರೇಂದ್ರರನ್ನು ನೋಡಿ ನಿನಗೆ ಯೋಗಿಯ ಕಣ್ಣುಗಳಿವೆ ಎಂದಿದ್ದರು. ಎಂದರೆ ಅವರ ಕಣ್ಣುಗಳು ಎಂದಿಗೂ ಪೂರ್ತಿ ಮುಚ್ಚಿಕೊಳ್ಳುವುದೇ ಇಲ್ಲ, ಪ್ರಾತಃಕಾಲವಾಯಿತೆಂದರೆ ಸಾಕು ಎಚ್ಚರಗೊಳ್ಳುವರು. ಪಾಶ್ಚಾತ್ಯದೇಶದಲ್ಲಿ ಸ್ವಾಮಿಜಿ ಒಂದಿಗೆ ಒಂದೇ ಮನೆಯಲ್ಲಿದ್ದವರು ಬೆಳಗ್ಗೆ ಹೊತ್ತಿಗೆಮುಂಚೆಗೆ ಪರಬ್ರಹ್ಮ ಅವಸ್ಥೆಯಲ್ಲಿ[illegible]ಸುತ್ತ ಸ್ನಾನಕ್ಕೆ ಹೋಗುತ್ತಿದ್ದುದನ್ನು ಕೇಳುತ್ತಿದ್ದರು. ವರು. ಒಂದು ಸಲ ಕಾಸೀಪುರದ [illegible]ವಂತೆಯೇ ಕಾಣುತ್ತಿರಲಿಲ್ಲ.

ಆದರೆ ಇವರಲ್ಲಿ ಸ್ವಾಭಾವಿಕವಾಗಿಯೆ ಅಂತಹ ಅದ್ಭುತವಾದ ಏಕಾಗ್ರತೆ ಇತ್ತು. ಇತರರು ಇಂತಹ ಏಕಾಗ್ರತೆಯನ್ನು ಪಡೆಯಬೇಕಾದರೆ ಪ್ರಚಂಡ ವಾದ ತಪಸ್ಸನ್ನು ಮಾಡಬೇಕಾಗಿತ್ತು. ರೈಲು ಟ್ರಾಮ್ ಮುಂತಾದುವು ಗಳಿಂದ ಕೂಡಿದ ದೇಶದಲ್ಲಿ ಪ್ರಯಾಣಮಾಡುತ್ತಿದ್ದಾಗ ಪುನಃ ಪುನಃ ಧ್ಯಾನಮಗ್ನರಾಗುತ್ತಿದ್ದ ಅವರ ಮನಸ್ಸನ್ನು ಪ್ರಕೃತಿಸ್ಥರಾಗಿ ಮಾಡಲು ಎಷ್ಟು ಕಷ್ಟಪಡುತ್ತಿದ್ದರು ಎಂಬುದು ಇವರ ಅಮೆರಿಕದ ಸ್ನೇಹಿತರಿಗೆ ಗೊತ್ತಿತ್ತು. ಇಂಡಿಯಾದೇಶದಲ್ಲಿ ಇವರ ಗುರು ಭಾಯಿಗಳು, ನರೇಂದ್ರ ಧ್ಯಾನಕ್ಕೆ ಕುಳಿತರೆ ಹತ್ತುನಿಮಿಷ ಆಗು ವುದರೊಳಗೆ ತನ್ಮಯರಾಗಿ ಹೋಗುವರು; ದೇಹದ ಮೇಲೆಲ್ಲ ಸೊಳ್ಳೆ ಕುಳಿತಿದ್ದರೂ ಇವರಿಗೆ ಪ್ರಜ್ಞೆಯೇ ಇರುತ್ತಿರಲಿಲ್ಲ ಎನ್ನುತ್ತಿದ್ದರು. ಸ್ವಾಮಿಜಿ ಈ ಅಭ್ಯಾಸವನ್ನು ನಿಗ್ರಹಿಸಬೇಕಾಗಿತ್ತು. ಕೆಲವು ವೇಳೆ ಇವರಿಗಾಗಿ ಒಂದು ನಿಲ್ದಾಣದಲ್ಲಿ ಜನ ಕಾಯುತ್ತಿದ್ದರೂ ಧ್ಯಾನಮಗ್ನರಾಗಿದ್ದು ದರಿಂದ ಇವರು ಹೀಗೆಯೇ ಮುಂದಿನ ಸ್ಟೇಶನ್ನಿಗೆ ಹೊರಟು ಹೋಗು ತ್ತಿದ್ದರು. ಇದನ್ನು ತಿಳಿದಮೇಲೆ ಇವರು ಬಹಳ ವ್ಯಥೆ ಪಡುತ್ತಿದ್ದರು. ಒಂದು ಸಲ ಇವರು ನ್ಯೂಯಾರ್ಕಿನಲ್ಲಿ ಪ್ರವಚನ ನಡೆಸುತ್ತಿದ್ದಾಗ ಧ್ಯಾನ ಹೇಗೆ ಮಾಡಬೇಕೆಂಬುದನ್ನು ಕಲಿಸಲು ಪ್ರಯತ್ನಿಸಿದರು. ಆಗ ಇವರೇ ಧ್ಯಾನಮಾಡಿ ತೋರಿಸಲು ಯತ್ನಿಸಿದಾಗ ಧ್ಯಾನಕ್ಕೆ ಪ್ರಾರಂಭಿಸಿದವರಿಗೆ ಬಾಹ್ಯಪ್ರಜ್ಞೆಯ ಅರಿವೇ ಇರಲಿಲ್ಲ. ಕುಳಿತ ಜನರೆಲ್ಲ ಕ್ರಮೇಣ ಒಬ್ಬೊಬ್ಬ ರಾಗಿ ಹೊರಟುಹೋದರು. ಇದನ್ನು ತಿಳಿದಾಗ ಸ್ವಾಮಿಜಿ ಬಹಳ ವ್ಯಸನ ಪಟ್ಟು ಇನ್ನೊಮ್ಮೆ ಹಾಗಾಗದಂತೆ ಪ್ರಯತ್ನ ಪಟ್ಟರು. ಒಬ್ಬರೊ ಇಬ್ಬರೊ ಇರುವಾಗ ಧ್ಯಾನ ಮಾಡುತ್ತಿದ್ದರೆ ಇವರನ್ನು ಎಚ್ಚರಿಸುವುದಕ್ಕೆ ಕೆಲವು ಮಂತ್ರಗಳನ್ನು ಅವರಿಗೆ ಹೇಳಿಕೊಟ್ಟಿದ್ದರು.

ಧ್ಯಾನ ಮಾಡದೇ ಇದ್ದರೂ, ಆಲೋಚನೆ ಕೂಡ ಅದೇ ವಿಷಯಕ್ಕೆ ಸಂಭಂಧ ಪಟ್ಟುದಾಗಿತ್ತು. ಗುಂಪಿನಲ್ಲಿ ಹರಟೆ ಹೊಡೆಯುತ್ತಿರುವಾಗ ಮತ್ತು ಹಾಸ್ಯಮಾಡುತ್ತಿರುವಾಗ ಸ್ವಾಮಿಜಿ ಎದೆ ಕ್ರಮೇಣ ಹಾಗೆಯೇ ನಿಲ್ಲುತ್ತಿತ್ತು, ಉಸಿರು ನಿಧಾನವಾಗುತ್ತಿತ್ತು, ಕ್ರಮೇಣ ಅವರ ಮನಸ್ಸು ಪ್ರಪಂಚದ ಕಡೆ ಬರುತ್ತಿತ್ತು. ಇವರ ಸ್ನೇಹಿತರಿಗೆ ಇದು ಗೊತ್ತಿತ್ತು, ಇದಕ್ಕೆ ಅವರು ಸಿದ್ಧರಾಗಿರುತ್ತಿದ್ದರು. ಇವರು ಕೆಲವು ವೇಳೆ ಯಾರನ್ನೊ ಹುಡುಕಿಕೊಂಡು ಮನೆಗೆ ಹೋಗುವರು, ಅಲ್ಲಿ ಮಾತನಾಡದೆ ಇರುವಾಗ,

ಅಥವಾ ಇವರು ಕೋಣೆಯಲ್ಲಿ ಒಬ್ಬರೆ ಮೌನವಾಗಿರುವಾಗ ಯಾರೂ ಇವರಿಗೆ ತೊಂದರೆ ಕೊಡುತ್ತಿರಲಿಲ್ಲ. ಕೆಲವು ವೇಳೆ ಸ್ವಾಮಿಜಿ ಎದ್ದು ಬಂದವರಿಗೆ ಏನುಬೇಕೊ ಅದನ್ನು ಮಾತಿಲ್ಲದೆ ಕೊಟ್ಟು ಕಳುಹಿಸುತ್ತಿದ್ದರು. ಅವರ ಆಸಕ್ತಿಯೆಲ್ಲ ಒಳಗೆ ಇದ್ದಿತೇ ಹೊರತು ಹೊರಗಲ್ಲ. ಅವರ ಮಾನಸಿಕ ವೈಶಾಲ್ಯವನ್ನು ಅವರ ಮಾತೊಂದೆ ನಮಗೆ ವಿವರಿಸುತ್ತಿತ್ತು. ಅವರು ಯಾವಾಗಲೂ ವ್ಯಕ್ತಿಯನ್ನು ಕುರಿತು ಮಾತನಾಡುತ್ತಿರಲಿಲ್ಲ. ಅವರು ಯಾವಾಗಲೂ ಧಾರ್ಮಿಕ ವಿಷಯವಾಗಿಯೇ ಮಾತನಾಡುತ್ತಿರಲಿಲ್ಲ. ಶ್ರೀರಾಮಕೃಷ್ಣರು ಕೂಡ ಹಾಗೆಯೆ. ಆದರೆ ವಿಷಯ ಯಾವಾಗಲೂ ವಿಶಾಲವಾಗಿತ್ತು. ಅಲ್ಲಿ ಎಂದಿಗೂ ಕ್ಷುದ್ರತೆಗೆ, ಅಲ್ಪಕ್ಕೆ, ನೀಚತನಕ್ಕೆ ಎಡೆ ಇರಲಿಲ್ಲ. ಅವರ ಅನುಕಂಪಕ್ಕೆ ಯಾವ ವಿಧವಾದ ಮೇರೆಯೂ ಇರಲಿಲ್ಲ. ಇವರ ಟೀಕೆಯಲ್ಲಿ ಉದ್ದೇಶವಿರಲಿಲ್ಲ, ವಿಷವಿರಲಿಲ್ಲ. "ಸ್ವಲ್ಪವೂ ಗೌರವ ಕಳೆದುಕೊಳ್ಳದೆ ನಾನು ಬೇಕಾದರೆ ಒಂದು ಅವತಾರ ವನ್ನು ಕೂಡ ಟೀಕಿಸಬಲ್ಲೆ. ಆದರೆ ಅನೇಕರಿಗೆ ಇದು ಸಾಧ್ಯವಿಲ್ಲ ಎಂಬುದು ನನಗೆ ಗೊತ್ತು. ಅಂತವರು ತಮ್ಮ ಭಕ್ತಿ ಶ್ರದ್ಧೆಗೆ ಧಕ್ಕೆ ಬಾರದಂತೆ ನೋಡಿಕೊಳ್ಳಬೇಕು" ಎಂದರು ಸ್ವಾಮಿಜಿ ಒಮ್ಮೆ. ಇವರ ಟೀಕೆಯನ್ನು ಕೇಳುವಾಗ ಅವಹೇಳನವನ್ನಾಗಲಿ ನಿಂದೆಯನ್ನಾಗಲಿ ಗಮನಿಸಿದ ಸಂಧರ್ಭವೇ ಇಲ್ಲ.

ಸ್ವಾಮಿಜಿಯಲ್ಲಿದ್ದ ವೈಶಾಲ್ಯತೆ ಮತ್ತು ಮಾಧುರ್ಯಕ್ಕೆ ಕಾರಣ ಇವರಲ್ಲಿದ್ದ ಅಪರಿತ ಗುರುಭಕ್ತಿ. "ನನ್ನ ಭಕ್ತಿ ನಾಯಿಯಂತೆ. ಏಕೆ ಎನ್ನುವುದನ್ನು ವಿಚಾರಮಾಡಲು ನನಗೆ ಇಚ್ಛೆಯಿಲ್ಲ. ಸುಮ್ಮನೆ ಅವರು ಹೇಳಿದಂತೆ ಕೇಳಿದರೆ ಸಾಕು" ಎಂದರು ಒಮ್ಮೆ. ಶ್ರೀರಾಮಕೃಷ್ಣರಿಗೂ ಕೂಡ ಅವರ ಗುರುಗಳಾದ ತೋತಪುರಿ ಎಂಬುವರ ಮೇಲೆ ಅಂತಹ ವಿಶ್ವಾಸವೇ ಇತ್ತು. ಆತ ಉಂಬಲ್ಲದಲ್ಲಿರುವ ಕೈಥಾಲ್ ಎಂಬಲ್ಲಿ ತನ್ನ ಶಿಷ್ಯರನ್ನೆಲ್ಲ ಬಿಟ್ಟು ದಕ್ಷಿಣ ಬಂಗಾಳದಲ್ಲಿ ಯಾರಿಗೊ ನಾನು ಬೇಕಾಗಿದೆ ಎಂದು ಶ್ರೀರಾಮಕೃಷ್ಣರ ಬಳಿಗೆ ಬಂದನು. ಆತ ತನ್ನ ಕೆಲಸವನ್ನು ಪೂರೈಸಿಕೊಂಡು ವಾಯುವ್ಯದ ಪ್ರಾಂತದ ಕಡೆಗೆ ಹೊರಟು ಹೋದ. ಈಗಲೂ ಆತನ ಸಮಾಧಿಯನ್ನು ಜನರು ಗೌರವಿಸುವರು. ಆದರೆ ಯಾರಿಗೆ ಸನ್ಯಾಸದೀಕ್ಷೆ ಈತ ಕೊಟ್ಟನೋ ಶ್ರೀರಾಮಕೃಷ್ಣರಿಗೆ ತಮ್ಮ ಗುರುಗಳ ಮೇಲೆ ಅಪರಿಮಿತವಾದ ಭಕ್ತಿ ಶ್ರದ್ಧೆಗಳಿದ್ದುವು. ಶ್ರೀರಾಮಕೃಷ್ಣರು

ತೋತಪುರಿಯ ಹೆಸರನ್ನು ಕೂಡ ಹೇಳುತ್ತಿರಲಿಲ್ಲ. ನಂಗ್ಟ ಎಂದರೆ ನಗ್ನಸನ್ಯಾಸಿ ಎಂದು ಸಾಧಾರಣವಾಗಿ ಹೇಳುತ್ತಿದ್ದರು. ಯಾರಿಗೆ ಪರಮ ಸತ್ಯದ ಸಾಕ್ಷಾತ್ಕಾರವಾಗಿರುವುದೋ ಅವರು ಮಾತ್ರ ಪ್ರಪಂಚವನ್ನೆಲ್ಲ ಪ್ರೀತಿಸಬಲ್ಲರು, ಮನುಷ್ಯನನ್ನು ಸಂಪೂರ್ಣ ನೆಚ್ಚ ಬಲ್ಲರು.

ನನ್ನ ಗುರುದೇವನಂತೆ ಆಗಬೇಕಾದರೆ ದೇಹ ಭಾವನೆಯಿಂದ ಮೀರಿ ಹೋದರೆ ಮಾತ್ರ ಸಾಲದು. ಆದಿಶಕ್ತಿ ಜಾಗೃತಳಾಗಬೇಕಾದರೆ ಮೊದಲು ಭಾವೋದ್ರೇಕವಾಗಬೇಕು, ಅನಂತರ ಆ ಉದ್ರೇಕವನ್ನು ಸಂಪೂರ್ಣ ನಿಗ್ರಹಿಸಬೇಕು. ಇದೇ ಹಿಂದೂಗಳ ರೀತಿ. ಈ ಅನುಭವ ಮುಕ್ಕಾಲು ಪಾಲು ನಮ್ಮಂತವರಿಗೆ ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲದಂತೆ ತೋರುವುದು. ಆದರೂ ನರೇಂದ್ರರ ಜೀವನದಲ್ಲಿ ನಡೆದ ಒಂದು ಘಟನೆಯಿಂದ ನಾವು ಇದನ್ನು ಸ್ವಲ್ಪ ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದು. ಇವರ ತಂದೆ ಅಕಸ್ಮಾತ್ತಾಗಿ ಕಾಲವಾದಾಗ ಇವರಿಗೆ ಇನ್ನು ಚಿಕ್ಕ ವಯಸ್ಸು. ದರಿದ್ರ ಲಕ್ಷ್ಮೀ ಇವರ ಮನೆಗೆ ಕಾಲಿಟ್ಟಳು. ದಿನ ಬೆಳಗಾದರೆ ಇವರೇ ಹಿರಿಯ ಮಗನಾದುದರಿಂದ ಇತರರ ದುಃಸ್ಥಿತಿಯನ್ನು ಸಹಿಸಲಸಾಧ್ಯವಾಯಿತು ಇವರಿಗೆ. ತಮ್ಮ ಪ್ರೀತಿಗೆ ಪಾತ್ರರಾದವರ ದುಃಖವನ್ನು ನೋಡಿದಾಗ ಇವರ ಹೃದಯವನ್ನು ಹಿಂಡಿದಂತೆ ಆಗುತ್ತಿತ್ತು. ಹಿಂದಿನ ದಿನ ಶ್ರೀಮಂತ ರಾಗಿದ್ದವರು ಮಾರನೆ ದಿನದಲ್ಲಿ ಬಡವರಾಗಬೇಕಾಯಿತು. ನಿರ್ಗತಿಕ ರಾದರು. ಇದರಿಂದ ದಿಕ್ಕೇ ಕಾಣದಂತೆ ಆಯಿತು. ಈ ಘಟನೆಯನ್ನು ನಂಬಲೇ ಸಾಧ್ಯವಾಗಲಿಲ್ಲ ಇವರಿಗೆ.

ದುಃಖವನ್ನು ಸಹಿಸಲಾರದೆ ದೇವರನ್ನು ದೂರುತ್ತ ಗುರುದೇವನಲ್ಲಿಗೆ ಕೊನೆಗೆ ಓಡಿದರು. ಆ ವೃದ್ಧರು ಸಾವಧಾನದಿಂದ ಶಿಷ್ಯ ಹೇಳುವುದನ್ನೆಲ್ಲ ಕೇಳಿದರು. ಮೃದು ಮಂದಹಾಸದಿಂದ ಹೀಗೆ ಹೇಳಿದರು: "ಮಗು, ಹೋಗಿ ಅಲ್ಲಿ ದೇವಿಯ ವಿಗ್ರಹದ ಹತ್ತಿರ ಪ್ರಾರ್ಥಿಸು. ನೀನು ಏನು ಕೇಳಿದರೆ ಅವಳು ನಿಸ್ಸಂದೇಹವಾಗಿ ಅದನ್ನು ಕರುಣಿಸುವಳು."

ಸಾಧಾರಣ ದೃಷ್ಟಿಯಿಂದ ನೋಡಿದರೂ ಶ್ರೀರಾಮಕೃಷ್ಣರು ಕೊಟ್ಟ ಭರವಸೆ ನಿರಾಧಾರವೆನ್ನಲು ಸಾಧ್ಯವಿರಲಿಲ್ಲ. ಶ್ರೀರಾಮಕೃಷ್ಣರಿಗೆ ಎಷ್ಟೋ ಜನ ಶ್ರೀಮಂತ ಮಾರ್ವಾಡಿ ಶಿಷ್ಯ[illegible] ಶ್ರೀರಾಮಕೃಷ್ಣರು ಒಂದು ಮಾತು ಹೇಳಿದ್ದರೆ ಅವರು [illegible]ಗುವರು[illegible]ದರೂ ಮಾಡಲು ಸಿದ್ಧರಿದ್ದರು.

ಹುಡುಗನಿಗೆ ಶ್ರೀರಾಮಕೃಷ್ಣರ ಮಾತಿನಿಂದ ಸ್ವಲ್ಪ ಸಮಾಧಾನ ಸಿಕ್ಕಿ ವಿಗ್ರಹದೆದುರು ಪ್ರಾರ್ಥಿಸುವುದಕ್ಕೆ ಹೋದರು. ಅವರು ಅಲ್ಲಿಂದ ಬರಬೇಕಾದರೆ ಸ್ವಲ್ಪ ಹೊತ್ತೇ ಆಯಿತು. ಬರುವಾಗ ಯಾವುದೋ ಒಂದು ಕಾಂತಿ ಕಣ್ಣಿನಲ್ಲಿ ಮಿಂಚುತಿತ್ತು. ಅವರಿಗೆ ಆಗ ಮಾತನಾಡಲೂ ಸಾಧ್ಯವಿರಲಿಲ್ಲ ಎಂದು ಅವರನ್ನು ನೋಡಿದವರು ಹೇಳುವರು. ಶ್ರೀರಾಮಕೃಷ್ಣರು ನರೇಂದ್ರನನ್ನು, ಏನು, ಪ್ರಾರ್ಥಿಸಿದೆಯೋ? ಎಂದು ಕೇಳಿದರು. ಶಿಷ್ಯ ಹೌದು ಪ್ರಾರ್ಥಿಸಿದೆ ಎಂದರು. ಶ್ರೀರಾಮಕೃಷ್ಣರು ತಾಯಿಯನ್ನು ಏನು ಕೇಳಿದೆ ಎಂದರು. ಶ್ರೇಷ್ಠ ಭಕ್ತಿ ಜ್ಞಾನಗಳನ್ನು ನೀಡೆಂದು ಕೇಳಿದೆ ಎಂದರು ನರೇಂದ್ರ. ಹೆಚ್ಚು ಮಾತನಾಡದೆ ಪುನಃ ಹೋಗಿ ಕೇಳು ಎಂದು ಶ್ರೀರಾಮಕೃಷ್ಣರು ಶಿಷ್ಯನನ್ನು ಪುನಃ ಕಳುಹಿಸಿದರು. ಪುನಃ ನರೇಂದ್ರ ಹೋದರು.

ಆದರೆ ಸ್ವಲ್ಪವೂ ಬದಲಾವಣೆ ಇಲ್ಲ. ಮೂರು ಸಲ ಏನುಬೇಕೋ ಅದನ್ನು ಕೇಳು ಎಂದು ಶ್ರೀರಾಮಕೃಷ್ಣರು ನರೇಂದ್ರನನ್ನು ಕಳುಹಿಸಿದರು. ಮೂರು ಸಲಿಯೂ ನರೇಂದ್ರ ಜ್ಞಾನ ಭಕ್ತಿಯನ್ನೇ ಕೇಳಿದೆ ಎಂದು ಬಂದರು. ಒಮ್ಮೆ ತಾಯಿ ಮುಂದೆ ನಿಂತರೆ ಸಾಕು, ಏತಕ್ಕೆ ಬಂದೆ ಎಂಬುದನ್ನು ಕೂಡ ಮರೆಯುತ್ತಿದ್ದರು. ನಾವು ಯಾವಾಗಲಾದರೂ ದೇವರನ್ನು ಪ್ರಾರ್ಥಿಸುವಾಗ ಪ್ರೇಮಾಧಿಕ್ಯದಿಂದ ನಮ್ಮನ್ನು ನಾವು ಮರೆಯುವ ಸ್ಥಿತಿಯೇ ನಮಗೆ ಯಾವಾಗಲಾದರೊಮ್ಮೆ ಕ್ಷಣಕಾಲವಾದರೂ ಪ್ರಾಪ್ತವಾದರೆ, ಸಾಪೇಕ್ಷ ಜಗಕ್ಕೆ ಅತೀತವಾದ ನರೇಂದ್ರರ ಮನದ ತೀವ್ರತೆಯನ್ನು ಸ್ವಲ್ಪವಾದರೂ ಊಹಿಸಬಹುದು.

ಸ್ವಾಮಿಜಿ ಮಾತನಾಡುತ್ತಿದ್ದಂತೆ ಅವರ ಆಲೋಚನೆ ಮೇಲೆ ಮೇಲಕ್ಕೆ ಏರುತ್ತಿತ್ತು. ಆಲೋಚನೆ ಕೂಡ ಆದಿಶಕ್ತಿಯ ಒಂದು ಆವಿರ್ಭಾವವೆ. ಆಲೋಚಿಸುವವನ ದೃಷ್ಟಿಯಿಂದ ಈ ಶಕ್ತಿ ವ್ಯರ್ಥವಾಯಿತೆಂದು ಭಾವಿಸಬೇಕೆ? ಮೊದಲು ಸ್ಥೂಲಪ್ರಪಂಚ, ಅನಂತರ ಆಲೋಚನೆ, ಕೊನೆಗೆ ಪರಬ್ರಹ್ಮ. ಹೀಗಿದ್ದರೆ ಮಹಾಪುರುಷರು ತಮ್ಮ ಅನುಭವವನ್ನು ಇತರರಿಗೆ ಕೊಡಲು ಯತ್ನಿಸುವುದಕ್ಕಿಂತ ಮಿಗಿಲಾದ ನಿಸ್ವಾರ್ಥತೆ ಬೇರೊಂದು ಇಲ್ಲ. ಅವರ ಆಲೋಚನೆಯಲ್ಲಿ ಭಾಗಿಯಾಗುವುದೇ ದೊಡ್ಡದೊಂದು ವಿಮೋಚನೆ. ಏಕೆಂ[illegible]ನ್ನೊಂದು ಅನುಭವದ ಬೀಜವನ್ನು ಪ್ರತ್ಯಕ್ಷವಾಗಿ ಮತ್ತೊಂದು ಜಿಶ್ರದ್ಧ[illegible]ಸ್ವೀಕರಿಸುವುದು. ಇದು

ಎಂದಿಗೂ ನಾಶವಾಗಲಾರದು. ಸ್ವೀಕರಿಸಿದವನ ಜೀವನದಲ್ಲಿ ಒಂದು ಭವ್ಯದರ್ಶನವಾಗಿ ಪರಿಣಾಮವಾಗುವುದು.

ನನ್ನ ಗುರುದೇವರ ಆಲೋಚನೆಯೆ ಆದರ್ಶದ ರೂಪವನ್ನು ತಾಳುತ್ತಿತ್ತು. ಆದರೆ ಅವರು ವಿವರಿಸುತ್ತಿದ್ದಾಗ ಆದರ್ಶಗಳು ಸಚೇತನವಾಗುತ್ತಿದ್ದವು, ಕಣ್ಣಿಗೆ ಕಾಣದ ವಸ್ತುವಂತೆ ಇರಲಿಲ್ಲ. ಜನ ಮತ್ತು ಜನಾಂಗಗಳನ್ನು ಸ್ವಾಮಿಜಿ ಆದರ್ಶ ಮತ್ತು ರೂಢಿಯಲ್ಲಿದ್ದ ನೀತಿಯ ಮೂಲಕ ವಿವರಿಸುತ್ತಿದ್ದರು. ಎರಡು ಬಗೆಯ ಜನರಿರುವರು. ಅವರಲ್ಲಿ ಒಬ್ಬರು ಯಾವಾಗಲೂ ಯಾವುದಾದರೂ ಆದರ್ಶವನ್ನು ಎರಡೋ ಮೂರೋ ದೃಷ್ಟಿಯಿಂದ ವಿವರಿಸುತ್ತಿದ್ದರು. ಸ್ವಾಮಿಜಿ ಸ್ವಭಾವ ಯಾವಾಗಲೂ ಮೂರು ಭಾಗ ಮಾಡುವುದು. ಎರಡು ಮಾಡಿದರೆ ಯಾವಾಗಲೂ ಒಂದು ಅತಿರೇಕವಿರುವುದು. ಅದರ ಮಧ್ಯದಲ್ಲಿ ಮತ್ತೊಂದನ್ನು ಸೇರಿಸಿದರೆ ಈ ಅತಿರೇಕಗಳು ಇಲ್ಲದಂತೆ ಕಾಣುವುದು. ಇದೊಬ್ಬ ಪ್ರತಿಭಾವಂತನ ಸಾಧಾರಣ ಚಿಹ್ನೆಯೋ ಅಥವಾ ಹಿಂದೂವಿನ ವೈಶಿಷ್ಟ್ಯವೋ ?

ಸ್ವಾಮಿಜಿ ಒಂದು ವಸ್ತುವಿನಲ್ಲಿ ಏನನ್ನು ನೋಡುತ್ತಾರೋ, ಯಾವುದು ಅವರ ಮನಸೆಳೆಯುವುದೊ ಎಂದು ಹೇಳುವುದಕ್ಕೆ ಆಗುತ್ತಿರಲಿಲ್ಲ. ಇವರು ಯಾವಾಗಲೂ ಪದಗಳಿಗಿಂತ ಹೆಚ್ಚಾಗಿ ಆಲೋಚನೆಗೆ ಉತ್ತರ ಕೊಡುತ್ತಿದ್ದರು. ಇಲ್ಲೊಂದು ಅಲ್ಲೊಂದು ಆಡಿದ ಮಾತಿನ ಹಿಂದೆ ಇರುವ ಆಲೋಚನೆಯನ್ನು ಒಟ್ಟುಗೂಡಿಸಿದಾಗ ಮಾತ್ರ ಅವರ ಮನಸ್ಸು ಏನನ್ನು ಕುರಿತು ಚಿಂತಿಸುತ್ತಿತ್ತು ಎಂಬುದನ್ನು ಊಹಿಸಲು ಸಾಧ್ಯ. ನಾವು ಕಾಶ್ಮೀರದಲ್ಲಿದ್ದಾಗ ಬೇಸಿಗೆಯ ಕೊನೆಯಲ್ಲಿ ಅವರು ಒಂದು ದಿನ ನಮಗೆ, ತಾಯಿ ಯಾವಾಗಲೂ ನಮ್ಮೊಡನೆ ಇರುವುದನ್ನು ನಿಜವಾಗಿ ನೋಡುತ್ತಿರುವೆ ಎಂದರು. ಅವರ ಜೀವನದ ಕೊನೆಯ ಚಳಿಗಾಲದಲ್ಲಿ ಶಿಷ್ಯ ಸ್ವರೂಪಾನಂದರಿಗೆ, ಒಮ್ಮೆ, ಕೆಲವು ತಿಂಗಳಿಂದಲೂ ಯಾರೊ ಎರಡು ಕೈಗಳಿಂದ ತಮ್ಮನ್ನು ಹಿಡಿದುಕೊಂಡಿರುವರೆಂದು ಅನುಭವವಾಗುತ್ತಿದೆ ಎಂದರು. ಎಲ್ಲಿಯಾದರೂ ತೀರ್ಥಯಾತ್ರೆಗೆ ಹೋದಾಗ ಅವರು ಜಪಮಾಡುತ್ತಿದ್ದುದು ಕಾಣುತ್ತಿತ್ತು. ಗಾಡಿಯಲ್ಲಿ ಅವರ ಹಿಂದೆ ಕುಳಿತಿದ್ದರೆ ಪದೇ ಪದೇ ಅವರು ಶಾಂತಿ ಪಾಠವನ್ನು ಹೇಳುತ್ತಿದ್ದುದು ಕೇಳಿ ಬರುತ್ತಿತ್ತು. ಅವರು ಈ ಕಾಲದಲ್ಲಿ ಹೇಳುತ್ತಿದ್ದ ಶ್ಲೋಕದ ಅರ್ಥ

ಗೊತ್ತಿತ್ತು. ಯಾರನ್ನಾದರೂ ಕಾರ್ಯಕ್ಷೇತ್ರಕ್ಕೆ ಕಳುಹಿಸಬೇಕಾದಾಗ ಶ್ರೀರಾಮಕೃಷ್ಣರು ಬೆಳಿಗ್ಗೆ ಎದ್ದ ತಕ್ಷಣ "ಸಚ್ಚಿದಾನಂದ, ಶಿವೋಹಂ" ಮುಂತಾದ ಹೆಸರನ್ನು ಮಾತ್ರ ಹೇಳಿಕಳುಹಿಸುತ್ತಿದ್ದರು. ಇದಿಷ್ಟೆ ಅವರು ಕೊಡುತ್ತಿದ್ದ ಸೂಚನೆ.

ಸತತವಾದ ಏಕಾಗ್ರತೆ ಇವರಲ್ಲಿದ್ದ ಭಕ್ತಿಯಿಂದ ಮಾತ್ರ ಪೋಶಿತ ವಾಗಿತ್ತು. ಇವರ ಮಾತಿನ ಮಧ್ಯೆ ಮಿಂಚಿನಂತೆ ಬರುತ್ತಿದ್ದ ಅನರ್ಘ್ಯ ರತ್ನಗಳ ಹಿಂದೆ ಏಕಾಗ್ರತೆ ಇತ್ತು. ಮಾತನಾಡುತ್ತಿರುವಾಗ ಆಳವಾದ ಭಾವಿಯಿಂದ ತಿಳಿಯಾದ ನೀರನ್ನು ತಂದು ಬಡಿಸಿದಂತೆ ಇತ್ತು ಇವರ ಸಂವಾದ. ಅವರ ಆಲೋಚನೆ ಶ್ರೇಷ್ಠ ವರ್ಗಕ್ಕೆ ಸೇರಿದ್ದು. ಅದು ಅಷ್ಟೇ ಸುಂದರವಾಗಿತ್ತು ಮತ್ತು ತೀವ್ರವಾಗಿತ್ತು. ಇದು ಆತ್ಮಸಾಕ್ಷಾತ್ಕಾರದ ಉತ್ತುಂಗ ಹಿಮಶೈಲದಿಂದ ತಂದಂತೆ ಇತ್ತು.

ಉಪನ್ಯಾಸ ಮಾಡುತ್ತಿದ್ದಾಗ ಇವರಿಗೆ ಆದ ಅನುಭವವನ್ನು ಕೆಲವು ವೇಳೆ ವಿವರಿಸುತ್ತಿದ್ದಾಗ ಇವರ ಏಕಾಗ್ರತೆಯನ್ನು ಗ್ರಹಿಸಬಹುದಾಗಿತ್ತು. ರಾತ್ರಿ ಮಲಗಿರುವಾಗ ಯಾರೋ ಇವರಿಗೆ ಮಾರನೆ ದಿನ ಮಾತನಾಡುವು ದನ್ನೆಲ್ಲ ಹೇಳುತ್ತಿರುವಂತೆ ಇತ್ತು. ಮಾರನೆ ದಿನ ಉಪನ್ಯಾಸದಲ್ಲಿ ಮಾತ ನಾಡುವಾಗ ಹಿಂದಿನ ರಾತ್ರಿ ಕೇಳಿದುದನ್ನೆಲ್ಲ ಹೇಳುತ್ತಿದ್ದರು. ಕೆಲವು ವೇಳೆ ಇಬ್ಬರು ಅವರಿಗೆ ಗೊತ್ತಾಗುವಂತೆ ವಾದ ಮಾಡುತ್ತಿದ್ದುದು ಹೇಳಿ ಬರುತ್ತಿತ್ತು. ಕೆಲವು ವೇಳೆ ದೂರದಿಂದ ಯಾವುದೋ ರಸ್ತೆಯ ಮೂಲಕ ಕೇಳಿಬರುವಂತೆ ಇರುತ್ತಿತ್ತು ಆ ಧ್ವನಿ. ಅದು ಕ್ರಮೇಣ ಇವರ ಹತ್ತಿರಕ್ಕೆ ಬಂದು ಜೋರಾಗಿ ಕೇಳಿ ಬರುತ್ತಿತ್ತು. "ಹಿಂದೆ ಯಾವುದನ್ನು ಆದೇಶವಾಣಿ ಎನ್ನುತ್ತಿದ್ದರೋ ಅದು ಹೀಗೆಯೆ ಇರಬೇಕೆಂದು ಕಾಣುವುದು" ಎನ್ನುತ್ತಿದ್ದರು.

ಇದರಲ್ಲೆಲ್ಲ ಯಾವುದೊ ಒಂದು ಪವಾಡವನ್ನು ಸ್ವಾಮಿಜಿ ಕಾಣಲಿಲ್ಲ. ಇವುಗಳೆಲ್ಲ ಮನಸ್ಸು ತನಗೆ ತಾನೇ ಕೆಲಸಮಾಡುತ್ತಿದ್ದರೀತಿ. ಅದಕ್ಕೆ ಬೇಕಾದಷ್ಟು ಆಲೋಚನೆ ಕೊಟ್ಟು, ತಾವು ಯಾವುದೋ ಭಾವದಲ್ಲಿ ತನ್ಮಯ ರಾಗಿರುವಾಗ ಅದು ತನಗೆ ತಾನೆ ಕೆಲಸ ಮಾಡುವುದು. ಹಿಂದೂಗಳು ಮನಸ್ಸೆ ಗುರುವಾಗ ಬಲ್ಲದು ಎಂಬುದಕ್ಕೆ ಜ್ವಲಂತ ಉದಾಹರಣೆಯಂತೆ ಇದೆ ಇದು ಎನ್ನಬಹುದು. ಅವರಲ್ಲಿ ನೋಡುವುದು ಮತ್ತು ಕೇಳುವುದು ಎರಡೂ ತೀವ್ರವಾಗಿ ಜಾಗೃತವಾಗಿದ್ದರೂ ಕೆಲವು [illegible]ಳೆ ಕೇಳುವುದು ನೋಡುವು

ದಕ್ಕಿಂತ ಚುರುಕಾಗಿತ್ತು ಎನ್ನಬಹುದು. ಇವರ ಶಿಷ್ಯರೇ ಅನಂತರ ಹೇಳಿದಂತೆ ಸ್ವಾಮಿಜಿ ತಮ್ಮ ಮನಸ್ಸಿನಲ್ಲಿ ಏನಿದೆಯೋ ಅದನ್ನೆಲ್ಲ ಚೆನ್ನಾಗಿ ವಿವರಿಸಬಲ್ಲವರಾಗಿದ್ದರು. ಈ ವಾಣಿಗಳೆಲ್ಲ ಎಲ್ಲಿಯೋ ಹೊರಗಿನಿಂದ ಬರುತ್ತಿದ್ದವು ಎಂದು ಸ್ವಾಮಿಜಿ ಕೂಡ ನಂಬುತ್ತಿರಲಿಲ್ಲ.

ನಾನು ಸ್ವಾಮಿಜಿಯಿಂದ ಮತ್ತೊಂದು ಅವರ ಇಚ್ಛೆಯಿಲ್ಲದೆ ಯಾಂತ್ರಿಕವಾಗಿ ಅವರ ಮನಸ್ಸಿನಲ್ಲಿ ಕೆಲಸಮಾಡುತ್ತಿದ್ದುದನ್ನು ಕೇಳಿದೆ. ಅದು ಇಚ್ಛೆಗಿಂತ ಕೆಳಗಿನ ಹಂತದಲ್ಲಿರುವುದು. ಮನಸ್ಸಿನಲ್ಲಿ ಯಾವಾಗಲಾದರೂ ಕೆಟ್ಟ ಆಲೋಚನೆ ಎದ್ದ ತಕ್ಷಣ ಮತ್ತಾವುದೋ ಒಂದು ಅದರ ಮೇಲೆ ಅಪ್ಪಳಿಸಿದಂತೆ ಆಗಿ 'ಇಲ್ಲ! ಈ ರೀತಿಯಲ್ಲ!' ಎಂದು ಹೇಳುತ್ತಿದ್ದರು.

ಇತರರಲ್ಲಿ ಯಾವುದು ಸ್ವಾಭಾವಿಕವಾದ ಕ್ರಿಯೆಗಳಂತೆ ಕಾಣುವುದೋ ಅವುಗಳಲ್ಲಿ ಕೆಲವನ್ನು ಸ್ವಾಮಿಜಿ ಪ್ರಜ್ಞಾತೀತವಾದ ಕ್ಷೇತ್ರದಿಂದ ಇದನ್ನು ಹೇಳಿಸಿ ಮಾಡಿಸಿದಂತೆ ನೋಡುತ್ತಿದ್ದರು. ಒಂದು ಸರಿಯಾಗಿದ್ದರೆ ಅದು ಏತಕ್ಕೆ ಎಂಬುದಕ್ಕೆ ಯಾರೂ ವಿವರಣೆ ಕೊಡುವಂತೆ ಇರಲಿಲ್ಲ. ಆದರೆ ಸಾಧಾರಣ ದೃಷ್ಟಿಯಿಂದ ನೋಡಿದಾಗ ಅದು ತಪ್ಪಾದಂತೆ ಕಾಣುತ್ತಿತ್ತು. ಸ್ವಾಮಿಜಿ ದೃಷ್ಟಿಯಲ್ಲಿ ತಿಳಿಯದೆ ಮಾಡಿದುದೆಲ್ಲ ಅಜ್ಞಾನಕ್ಕೆ ಸಂಬಂಧಪಟ್ಟುದಲ್ಲ.

ಇವರ ಗುರುಗಳು ಹಿಂದೆ ಹೇಳಿದ ಮಾತನ್ನು ಸ್ವಾಮಿಜಿ ಗುರುಭಾಯಿಗಳು ಎಂದಿಗೂ ಮರೆತಿರಲಿಲ್ಲ. ನಿನ್ನ ಕೆಲಸವನ್ನು ಮಾಡಿ ಆದಮೇಲೆ ನೀನು ಪುನಃ ನಿರ್ವಿಕಲ್ಪಸಮಾಧಿಯ ಫಲವನ್ನು ಅನುಭವಿಸುವೆ ಎಂದಿದ್ದರು. ಎಂದು ಕರ್ಮಕೊನೆಗಂಡು ಆತ್ಮಸಾಕ್ಷಾತ್ಕಾರದಲ್ಲಿ ಸಂಪೂರ್ಣ ಐಕ್ಯವಾಗುವರೆಂಬುದನ್ನು ಯಾರೂ ಹೇಳುವಂತೆ ಇರಲಿಲ್ಲ. ಸ್ವಾಮಿಜಿ ಕೊನೆಯವರುಷದಲ್ಲಿ ಕೆಲವು ಇವರ ಬಾಲ್ಯ ಸ್ನೇಹಿತರೆಲ್ಲ ಒಟ್ಟಿಗೆ ಕೂಡಿ ಹಿಂದಿನ ದಿನವನ್ನು ಕುರಿತು ಮಾತನಾಡುತ್ತಿದ್ದರು. ಆಗ ನರೇಂದ್ರ ಹಿಂದೆ ಯಾರಾಗಿದ್ದ ಎಂಬುದನ್ನು ಅರಿತರೆ ಅವನು ಇನ್ನು ಮೇಲೆ ದೇಹದಲ್ಲಿರುವುದಿಲ್ಲ ಎಂಬುದನ್ನು ಎತ್ತಿದರು. ಅವರಲ್ಲಿ ಒಬ್ಬ ಗುರುಭಾಯಿಗಳು ಹಾಸ್ಯವಾಗಿ "ಸ್ವಾಮಿಜಿ, ನಿಮಗೆ ಗೊತ್ತೆ ನೀವು ಯಾರು?" ಎಂದು ಕೇಳಿದರು. ಆಗ ಸ್ವಾಮಿಜಿ ತಕ್ಷಣ ಅ[illegible]ಗು. "ಹೌದು, ನನಗೆ ಈಗ ಗೊತ್ತಿದೆ ನಾನು ಯಾ[illegible]ಳಬೇಕೆಂದು ಕಾಯುತ್ತಿದ್ದರ ವಿತ್ತರು. ಆಗ

ಎಲ್ಲರೂ ಮೌನವಾದರು. ಆಗ ಸ್ವಾಮಿಜಿಗೆ ಹೆಚ್ಚು ಪ್ರಶ್ನೆ ಹಾಕಲು ಯಾರಿಗೂ ಧೈರ್ಯ ವಿರಲಿಲ್ಲ.

ಸ್ವಾಮಿಜಿ ಜೀವನದ ಸಂಜೆ ಸಮೀಪಿಸಿದಂತೆಲ್ಲ ಹೆಚ್ಚು ಹೆಚ್ಚು ಧ್ಯಾನ್ಯ ಮಗ್ನರಾಗುತ್ತ ಬಂದರು. ಮುಂಚೆ ಯಾವುದರಮೇಲೆ ಅಷ್ಟೊಂದು ಆಸಕ್ತಿಯನ್ನು ಇಟ್ಟು ಕೊಂಡಿದ್ದರೋ ಅದರ ಮೇಲೆ ಸ್ವಲ್ಪವೂ ಗಮನವಿರ ಲಿಲ್ಲ. ಅವರು ಮಹಾಸಮಾಧಿಯನ್ನು ಪಡೆದಾಗ ಆ ಪರಮಸಾಕ್ಷಾ ತ್ಕಾರದ ಕಿರಣ ಸ್ವಾಮಿಜಿಯ ಭಕ್ತರಿಗೆಲ್ಲ ದೂರದಲ್ಲಿರಲಿ ಹತ್ತಿರದಲ್ಲಿರಲಿ ಅವರಿಗೆ ಗೋಚರಿಸಿತು. ಒಬ್ಬರು ಅಂದಿನ ರಾತ್ರಿ ಶ್ರೀರಾಮಕೃಷ್ಣರು ಪುನಃ ಕಾಲವಾದಂತೆ ಸ್ವಪ್ನ ಕಂಡರು. ಬೆಳಿಗ್ಗೆ ಎದ್ದಾಗ ಸ್ವಾಮಿಜಿ ಕಾಲ ವಾದ ಸಮಾಚಾರವನ್ನು ತಂದವನನ್ನು ಬಾಗಿಲಲ್ಲಿ ಸಂಧಿಸಿದರು. ಇವರ ಬಾಲ್ಯದ ಗುರುಭಾಯಿಗೆ ಸ್ವಾಮಿಜಿ ಕಾಣಿಸಿಕೊಂಡು "ಶಶಿ, ನಾನು ದೇಹ ವನ್ನು ಆಚೆಗೆ ಕಿತ್ತೊಗೆದು ಬಂದೆ" ಎಂದರಂತೆ. ಮೂರನೆಯವರಿಗೆ ಸಂಜೆ ಧ್ಯಾನಮಾಡುವ ಸ್ಥಳಕ್ಕೆ ಯಾರೊ ಬಲಾತ್ಕಾರವಾಗಿ ಸೆಳೆತಂದಂತೆ ಆಯಿತಂತೆ. ಅಲ್ಲಿ ಜ್ಯೋತಿಃಪುಂಜವಾಗಿ ಇವರು ಕಾಣಿಸಿಕೊಂಡರು. ಆಗ ಅವರು ಶಿವಗುರು ಎಂದು ಕಂಬನಿದುಂಬಿ ಅವರಿಗೆ ನಮಸ್ಕಾರ ಮಾಡಿದರು.

# ೨೬

## ಮಹಾಸಮಾಧಿ

೧೯೦೦ ಕೊನೆಯ ಹೊತ್ತಿಗೆ ಸ್ವಾಮಿಜಿ ಕೆಲವು ಸ್ನೇಹಿತರೊಡನೆ ಈಜಿಪ್ಟಿನಲ್ಲಿ ಸಂಚರಿಸುತ್ತಿದ್ದವರು ಇದ್ದಕ್ಕೆ ಇದ್ದಂತೆ ಅವರನ್ನೆಲ್ಲಾ ಬಿಟ್ಟು ಇಂಡಿಯಾದೇಶಕ್ಕೆ ಮರಳಿದರು. ಈ ಸಮಯದಲ್ಲಿ ಇವರೊಡನೆ ಇದ್ದವರು, ಸ್ವಾಮಿಜಿಗೆ ಬಹಳ ಸಾಕಾಗಿರುವಂತೆ ಇತ್ತು ಎನ್ನುವರು. ಸ್ವಾಮಿಜಿ ಪಿರಮಿಡ್ಡು ಮತ್ತು ಸ್ಫಿನಿಕ್ಸ್‌ಗಳನ್ನು ನೋಡಿದಾಗ ತಮ್ಮ ಜೀವನದ ಕೊನೆಯ ಹಾಳೆಗಳನ್ನು ತಿರುವಿಹಾಕುತ್ತಿರುವಂತೆ ಕಂಡಿತು. ಚಾರಿತ್ರಿಕ ಸ್ಮಾರಕಗಳು ಹಿಂದಿನಷ್ಟು ಇವರನ್ನು ಆಕರ್ಷಿಸಲಿಲ್ಲ.

ಅಲ್ಲೆಲ್ಲ ಜನರನ್ನು 'ನೇಟೀವ್ಸ್' ಎಂದು ಕರೆಯುತ್ತಿದ್ದರು. ಇವರನ್ನು ಪರದೇಶೀಯರೊಡನೆ ಹೋಲಿಸುತ್ತಿದ್ದರೇ ಹೊರತು ನೇಟೀವ್ಸ್ ಒಂದಿಗೆ ಪರಿಗಣಿಸುತ್ತಿರಲಿಲ್ಲ. ಇದನ್ನು ಕಂಡು ಸ್ವಾಮಿಜಿಗೆ ವ್ಯಥೆಯಾಯಿತು. ಈ ದೃಷ್ಟಿಯಲ್ಲಿ ಸ್ವಾಮಿಜಿ ಈಜಿಪ್ಟಿಗಿಂತ ಕಾನ್‌ಸ್ಟಾಂಟಿನೋಪಲ್ಲನ್ನು ಮೆಚ್ಚಿದರು. ಅಲ್ಲಿ ಒಬ್ಬ ತುರ್ಕಿದೇಶದವನು ಒಂದು ಅನ್ನಛತ್ರವನ್ನು ಇಟ್ಟುಕೊಂಡಿದ್ದ. ಪ್ರಯಾಣೀಕರಿಗೆಲ್ಲ ಉಚಿತವಾದ ಅನ್ನವಸತಿಗಳನ್ನು ಕೊಡುತ್ತಿದ್ದ. ಆ ಪ್ರಯಾಣೀಕರ ಗುಂಪಿನಲ್ಲಿ ಒಬ್ಬ ಭಾರತೀಯನೂ ಇದ್ದ. ಸ್ವಾಮಿಜಿ ತಮ್ಮ ಕೊನೆದಿನಗಳಲ್ಲಿ ಈ ವಿಷಯವನ್ನು ಮತ್ತೆ ಮತ್ತೆ ಪ್ರಸ್ತಾಪಿಸುತ್ತಿದ್ದರು. ಆಧುನಿಕ ಸೋಂಕಿಲ್ಲದ ಪೌರಾತ್ಯನಿಗೆ ಪ್ರಯಾಣೀಕರೆಲ್ಲ ಯಾತ್ರಿಕರು, ಯಾತ್ರಿಕರೆಲ್ಲ ಅತಿಥಿಗಳು.

ಮುಂದಿನ ಛಳಿಗಾಲದಲ್ಲಿ ಪೂರ್ವಬಂಗಾಳದಲ್ಲಿರುವ ಢಾಕಾಕ್ಕೆ ಹೊರಟರು. ಅಸ್ಸಾಮಿನಲ್ಲಿ ಒಂದು ತೀರ್ಥಸ್ಥಳಕ್ಕೆ ಹೋಗುವುದಕ್ಕಾಗಿ ದೊಡ್ಡ ಒಂದು ತಂಡವನ್ನೇ ಸ್ವಾಮಿಜಿ ತಮ್ಮ ಜೊತೆಯಲ್ಲಿ ಬ್ರಹ್ಮಪುತ್ರ ನದಿಯ ಮೇಲೆ ಕರೆದುಕೊಂಡು ಹೋದರು. ಅವರ ಆರೋಗ್ಯ ಬಹಳ ಬೇಗ ಶಿಥಿಲವಾಗುತ್ತಿತ್ತು. ಅವರ ಸುತ್ತಮುತ್ತಲಿದ್ದವರಿಗೆ ಮಾತ್ರ ಇದು ವೇದ್ಯವಾಗುತ್ತಿತ್ತು. ದೂರದಲ್ಲಿದ್ದ ನಮಗೆ ಯಾರಿಗೂ ಇದರ ಸುಳಿವು ಕೂಡ ಗೊತ್ತಾಗಲಿಲ್ಲ. ೧೯೦೧ ನೇ ಬೇಸಿಗೆಯ ಕಾಲವನ್ನು ಬೇಲೂರು ಮಠದಲ್ಲಿ ಕಳೆದರು. ತಾವು ಹುಡ[illegible]ಡ್ಡಾಗ ಕೇಳಿದ ಬೀಳುವ ಮಳೆಯ ದ[illegible]ನಿಯನ್ನು ಮತ್ತೊಮ್ಮೆ [illegible]ೇಳಬೇಕೆಂದು ಕಾಯುತ್ತಿದ್ದರು. ಪುನಃ ಛಳಿ

ಗಾಲ ಬಂದಾಗ ಇವರ ಆರೋಗ್ಯ ತುಂಬಾ ಕೆಟ್ಟು ಹಾಸಿಗೆಯಲ್ಲಿಯೇ ಇರ ಬೇಕಾಯಿತು.

೧೯೦೨ನೇ ಜನವರಿ ಫೆಬ್ರುವರಿ ತಿಂಗಳಲ್ಲಿ ಸ್ವಾಮಿಜಿ ಮತ್ತೊಂದು ಪ್ರಯಾಣವನ್ನು ಕೈಕೊಂಡರು. ಮೊದಲು ಬೋಧಗಯೆಗೆ ಹೋದರು. ಅನಂತರ ಕಾಶಿಗೆ ಹೋದರು. ಅವರ ಯಾತ್ರೆಗೆಲ್ಲ ಇದು ಬಹಳ ಚೆನ್ನಾದ ಪರಮಾವಧಿಯಾಯಿತು. ಸ್ವಾಮಿಜಿ ತಮ್ಮ ಕೊನೆಯ ಜನ್ಮದಿನದ ಮಾರ ನೆಯ ದಿನ ಬೋಧಗಯೆಗೆ ಬಂದರು. ಅಲ್ಲಿಯ ಮಹಂತರು ಸ್ವಾಮಿಜಿಗೆ ತೋರಿದ ಆದರಾತಿಥ್ಯಕ್ಕೆ ಎಣೆಯಿಲ್ಲದಂತೆ ಇತ್ತು. ಇಲ್ಲಿ ಮತ್ತು ಕಾಶಿ ಯಲ್ಲಿ ಸಂಪ್ರದಾಯ ಮಠದವರು ಸ್ವಾಮಿಜಿಗೆ ಅಪೂರ್ವ ವಿಶ್ವಾಸ ಮತ್ತು ಗೌರವವನ್ನು ತೋರಿದರು. ಇದನ್ನು ನೋಡಿ ತಮ್ಮ ಪ್ರಭಾವ ಜನರ ಹೃದಯದಲ್ಲಿ ಎಷ್ಟು ಆಳಕ್ಕೆ ಹೋಗಿದೆ ಎಂದು ಇವರಿಗೇ ಆಶ್ಚರ್ಯವಾಯಿತು. ಬೋಧಗಯೆ ಈಗ ಕೊನೆಯದಾದರೂ ಅವರು ಹಿಂದೆ ಮಾಡಿದ ತೀರ್ಥ ಯಾತ್ರೆಯಲ್ಲಿ ಇದೇ ಪ್ರಥಮ. ಕಾಶಿಯಲ್ಲಿದ್ದಾಗಲೆ ಹಿಂದೆ ಕೆಲವು ವರ್ಷ ಗಳಲ್ಲಿ ಒಬ್ಬರನ್ನು ಬೀಳ್ಕೊಡುವಾಗ "ನಾನೊಂದು ಸಿಡಿಲಿನಂತೆ ಸಮಾಜದ ಮೇಲೆ ಬೀಳುವ ತನಕ ಈ ಸ್ಥಳಕ್ಕೆ ನಾನು ಮತ್ತೊಮ್ಮೆ ಬರುವುದಿಲ್ಲ" ಎಂದಿದ್ದರು.

ಸ್ವಾಮಿಜಿ ಕಲ್ಕತ್ತೆಗೆ ಬಂದ ಮೇಲೆ ಅನೇಕ ಜನ ಶಿಷ್ಯರು ಇವರನ್ನು ನೋಡಲು ನೆರೆದರು. ಸ್ವಾಮಿಜಿ ಆರೋಗ್ಯ ಹದಗೆಟ್ಟಿದ್ದರೂ ಅವರು ಅಷ್ಟು ಬೇಗ ಮಾಯವಾಗಿ ಬಿಡುವರೆಂದು ಯಾರೂ ಊಹಿಸಿರಲಿಲ್ಲ. ಆದರೂ ಇವರನ್ನು ನೋಡಲು ಬಂದರು, ಬೀಳ್ಕೊಂಡರು. ಇದಕ್ಕಾಗಿ ಅವರು ಅರ್ಧ ಪ್ರಪಂಚವನ್ನೇ ಸುತ್ತಿಕೊಂಡು ಬರಬೇಕಾಗಿತ್ತು. ಕಾಶಿಯಿಂದ ಮಠಕ್ಕೆ ಬಂದ ಮೊಲೆ ಸ್ವಲ್ಪಕಾಲ ತಾವು ಯಾವ ಸಂಪರ್ಕವನ್ನು ಇಟ್ಟು ಕೊಳ್ಳದೇ ದೂರ ಇರಬೇಕೆಂದು ಹೇಳುತ್ತಿದ್ದರು. ಇದರಿಂದ ಇವರ ಗುರು ಭಾಯಿಗಳಿಗೆ ಸ್ವಲ್ಪ ಸ್ವಾತಂತ್ರ್ಯ ಬರುವುದು ಎಂದು ಭಾವಿಸಿದರು.

"ಗುರು ಯಾವಾಗಲೂ ಶಿಷ್ಯನ ಹತ್ತಿರವೇ ಇದ್ದು ಎಷ್ಟೋ ವೇಳೆ ಶಿಷ್ಯನ ಅಧಃಪತನಕ್ಕೆ ಕಾರಣವಾಗುತ್ತಾನೆ. ಒಂದು ಸಲ ಗುರು ಶಿಷ್ಯ ರನ್ನು ತರಬೇತುಮಾಡಿದ ಮೇಲೆ ಗುರು ಅವರನ್ನು ಬಿಟ್ಟು ಹೋಗುವುದು ಆವಶ್ಯಕ. ಶಿಷ್ಯರು ಬೆಳೆಯಬೇಕಾ[illegible] ಗುರುವಿನಿಂದ ದೂರ ಇರಬೇಕು" ಎನ್ನುತ್ತಿದ್ದರು ಸ್ವಾಮಿಜಿ.

ಸ್ವಾಮಿಜಿಗೆ ಪಾಶ್ಚಾತ್ಯ ದೇಶಗಳೊಡನೆ ಸಂಪರ್ಕ ದಿನ ಕಳೆದಂತೆ ಹೆಚ್ಚಾಗುತ್ತಾ ಬಂದಿತ್ತು. ಆಗ ಆಧ್ಯಾತ್ಮಿಕ ಜೀವನದ ಆದರ್ಶಕ್ಕೆ ಆದರ್ಶ ಗೃಹಸ್ಥಜೀವನ ತಳಹದಿ ಎಂಬುದನ್ನು ಅರಿತರು. ಸನ್ಯಾಸಿ ಎಲ್ಲಕ್ಕಿಂತ ಹೆಚ್ಚಾಗಿ ತಾನು ಸ್ವೀಕರಿಸಿದ ವ್ರತವನ್ನು ಎಲ್ಲಾ ವಿಧದಿಂದಲೂ ಪರಿಪಾಲಿಸ ಬೇಕಾಗಿದೆ. ಸಾಮಾಜಿಕ ಆದರ್ಶಗಳು ಇಂತಹ ಸನ್ಯಾಸಿಗೆ ವ್ಯರ್ಥ ಎನ್ನಿಸಬಹುದು. ಯಾವ ಜನಾಂಗ ಪಾತಿವ್ರತ್ಯ ಧರ್ಮವನ್ನು ಪರಿಪಾಲಿಸ ಲಾರದೋ ಅವರೆಂದಿಗೂ ದೊಡ್ಡ ಸನ್ಯಾಸಿಗಳನ್ನಾಗಲಿ ಪಾದ್ರಿಗಳನ್ನಾಗಲಿ ಸೃಷ್ಟಿಸಲಾರರೆಂದು ಅವರು ಹೇಳಿದರು. ಎಲ್ಲಿ ದಾಂಪತ್ಯವನ್ನು ಯಾರೂ ಭೇದಿಸಲಾರರು ಎಂದು ದೃಢವಾಗಿ ನಂಬಿರುವರೋ ಅಲ್ಲಿ ಮಾತ್ರ ದಾಂಪತ್ಯಕ್ಕೆ ಅತೀತವಾದ ಆದರ್ಶವನ್ನು ಸರಿಯಾಗಿ ಪಾಲಿಸಬಲ್ಲರು.

ಈ ತಿಳಿವಳಿಕೆಯೇ ಸ್ವಾಮಿಜಿಯ ಜ್ಞಾನದ ಪರಮಾವಧಿ. ಇದು ತಾಯಿಯ ಆಟದ ಕೊನೆಯ ಅಂಕವನ್ನು ಕೋರುವುದು. ಸನ್ಯಾಸದ ಆದರ್ಶ ಸಾಧ್ಯವಾಗಲು ಇಡೀ ಸಮಾಜ ಯಾವುದಾದರೂ ಗಹನ ಆದರ್ಶ ಕ್ಕಾಗಿ ಹೋರಾಡುತ್ತಿರಬೇಕು. ಸನಾತನ ಧರ್ಮಕ್ಕೆ ಒಳ್ಳೆಯ ಸನ್ಯಾಸಿ ಎಷ್ಟು ಮಟ್ಟಿಗೆ ಆವಶ್ಯಕವೋ ಅಷ್ಟೇ ಮಟ್ಟಿಗೆ ಸದ್ಗೃಹಸ್ಥನೂ ಆವಶ್ಯಕ. ದಾಂಪತ್ಯವನ್ನು ಹೇಗೆ ಭೇದಿಸುವುದು ಅಧರ್ಮವೋ ಹಾಗೆಯೇ ಸನ್ಯಾಸ ವ್ರತವನ್ನು ತ್ಯಜಿಸುವುದು ಕೂಡ ಅಧರ್ಮ. ಇವೆರಡೂ ನಾಣ್ಯದ ಎರಡು ಕಡೆಗಳಂತೆ. ಒಳ್ಳೆಯ ಪೌರರಿಲ್ಲದೆ ಶ್ರೇಷ್ಠ ಸನ್ಯಾಸಿಗಳು ದೊರಕಲಾರರು; ಒಳ್ಳೆಯ ವ್ಯವಹಾರವಿಲ್ಲದೆ ಪಾರಮಾರ್ಥವಿಲ್ಲ; ಒಳ್ಳೆಯ ಲೌಕಿಕವಿಲ್ಲದೇ ಆಧ್ಯಾತ್ಮವಿಲ್ಲ. ಎಲ್ಲವೂ ಒಂದೇ. ಆದರೂ ಯಾವ ಒಂದನ್ನೂ ನಾವು ನಿರ್ಲಕ್ಷಿಸುವಂತಿಲ್ಲ. ಏಕೆಂದರೆ ಪ್ರತಿಯೊಂದು ಕಣದ ಮೂಲಕವೂ ಸಮಷ್ಟಿ ಕಂಗೊಳಿಸುತ್ತಿದೆ. ನಿಜವಾಗಿಯೂ ಇದೇ ಹೊಸ ವೇಷದಲ್ಲಿರುವ ಅವರ ಹಳೆಯ ಸಂದೇಶವೆ. ಸ್ವಾಮಿಜಿ ಮತ್ತು ಅವರ ಗುರುಗಳು ಸಾರಿದ ಚಾರಿತ್ರ್ಯಶುದ್ಧಿಯೇ ಆಧ್ಯಾತ್ಮಿಕ ಪರವಶತೆಗಿಂತ ಮಿಗಿಲಾದ ನೈವೇದ್ಯ. ನಿಗ್ರಹಿಸುವ ಶಕ್ತಿಯಿಲ್ಲದೇ ಇದ್ದರೆ ನಾವು ತ್ಯಜಿಸುವುದಾವುದೂ ಇರುವು ದಿಲ್ಲ.

ಮಾಡಬೇಕಾದ ಕೆಲಸ ಹೆ : ಬೇ[illegible]ರುವಾಗ ಸ್ವಾಮಿಜಿ ೧೯೦೨ನೇ ವಸಂತದಲ್ಲಿ ಹೇಗಾದರೂ [illegible]ಸ್ಥಾಗುತ್ತ ಪಟ್ಟರು. ಅದಕ್ಕಾಗಿ [illegible]ರ್ವೇದ ಚಿಕಿತ್ಸೆಯ[illegible]ಳಬೇಕೆಂದು ಕಾಯ ಅದರ ಪ್ರಕಾರ ಏಪ್ರಿಲ್

ಮೇ ಜೂನ್ ತಿಂಗಳಲ್ಲಿ ಒಂದು ತೊಟ್ಟು ತಣ್ಣೀರನ್ನೂ ಅವರು ಕುಡಿಯ ಬಾರದಾಗಿತ್ತು. ಎಷ್ಟುಮಟ್ಟಿಗೆ ಇದರಿಂದ ಗುಣವಾಯಿತೊ ಗೊತ್ತಿಲ್ಲ. ಆದರೆ ಇದನ್ನೆಲ್ಲಾ ನಿರ್ವಹಿಸಲು ಇವರಲ್ಲಿದ್ದ ಇಚ್ಛಾಶಕ್ತಿಯನ್ನು ಕಂಡಾಗ ಇವರಿಗೇ ಪರಮ ಸಂತೋಷವಾಯಿತು.

ಜೂನ್ ತಿಂಗಳು ಮುಗಿಯುವ ಹೊತ್ತಿಗೆ ಇವರ ಕೊನೆಗಾಲವೂ ಸನ್ನಿಹಿತವಾಯಿತೆಂದು ಇವರು ಅರಿತರು. ಇವರು ಕಾಲವಾಗುವುದಕ್ಕೆ ಒಂದು ದಿನ ಮುಂಚಿತವಾಗಿ ಬುಧವಾರ ಇವರೊಡನೆ ಇದ್ದವರೊಬ್ಬರಿಗೆ ನಾನು ಸಾಯಲು ಅಣಿಯಾಗುತ್ತಿರುವೆ ಎಂದರು. "ಮಹಾ ತಪಸ್ಸು ಮತ್ತು ಧ್ಯಾನಪ್ರವೃತ್ತಿ ನನ್ನನ್ನು ವಶಮಾಡಿಕೊಂಡಿದೆ. ನಾನು ಕೊನೆಗೆ ಅಣಿ ಯಾಗುತ್ತಿರುವೆ."

ಇನ್ನೂ ಮೂರುನಾಲ್ಕು ವರುಷಗಳವರೆಗೆ ಸ್ವಾಮಿಜಿ ನಮ್ಮೊಡನೆ ಇರುವರೆಂದು ನಾವು ಭಾವಿಸಿದ್ದರೂ ಇವರು ಹೇಳುವ ಮಾತು ಸತ್ಯ ಎಂದು ಹೇಗೊ ಹೊಳೆಯಿತು. ಈ ಸಮಯದಲ್ಲಿ ಪ್ರಪಂಚದ ಯಾರ ಸುದ್ದಿಗೂ ಅವರು ಗಮನಕೊಡುತ್ತಿರಲಿಲ್ಲ. ಮಳೆ ಬರಲಿಲ್ಲ ಇನ್ನೂ ಎಂದು ಇತರರು ಕಾತರಪಡುತ್ತಿದ್ದರೂ ಸ್ವಾಮಿಜಿ ಇದನ್ನು ಗಮನಿಸಲೇ ಇಲ್ಲ. ಇದನ್ನೊಂದು ಕನಸಿನಂತೆ ಭಾವಿಸಿದರು. ಆಗಿನ ಯಾವ ವಿಷಯಗಳಮೇಲೂ ಸ್ವಾಮಿಜಿ ಅಭಿಪ್ರಾಯವನ್ನು ಕೇಳಿದರೂ ಪ್ರಯೋಜನವಿರಲಿಲ್ಲ. ಒಂದು ಸಲ ಅವರು ಮೆಲ್ಲಗೆ ಹೀಗೆ ಹೇಳಿದರು: "ನೀನು ಹೇಳುವುದು ಸರಿ ಇರಬಹುದು; ಆದರೆ ನಾನು ಪುನಃ ಈ ವಿಷಯಗಳನ್ನು ಮನಸ್ಸಿಗೆ ಹಚ್ಚಿಕೊಳ್ಳಲಾರೆ. ನಾನು ಮೃತ್ಯುಗುಹೆಗೆ ಹೋಗುತ್ತಿರುವೆ."

ಒಂದು ಸಲ ಕಾಶ್ಮೀರದಲ್ಲಿದ್ದಾಗ ಸ್ವಾಮಿಜಿ ಖಾಯಿಲೆಯಿಂದ ಪಾರಾಗಿದ್ದಾಗ ನೆಲದ ಮೇಲೆ ಬಿದ್ದ ಕಲ್ಲನ್ನು ತೆಗೆದುಕೊಂಡು ಹೀಗೆ ಹೇಳು ತ್ತಿದ್ದುದನ್ನು ಕೇಳಿದೆ: "ಮೃತ್ಯು ನನ್ನನ್ನು ಸಮೀಪಿಸಿದೆ ಎಂದು ಅರಿತಾಗ ಲೆಲ್ಲ ನನ್ನ ದೌರ್ಬಲ್ಯವೆಲ್ಲಾ ಹೋಗುವುದು. ನಾನು ಬಾಹ್ಯ ಪ್ರಪಂಚಕ್ಕೆ ಅಂಜುವವನಲ್ಲ. ಅದರ ಮೇಲೆ ನನಗೆ ಆಸಕ್ತಿಯೂ ಇಲ್ಲ, ಅನುಮಾನವೂ ಇಲ್ಲ. ಸುಮ್ಮನೆ ಸಾಯಲು ನಾನ[illegible]ಣಿಯಾಗುವೆ. ನಾನು ಇದರಷ್ಟು ಗಟ್ಟಿಯಾಗಿರುವೆ" ಎಂದು [illegible] ಗುರು[illegible]ಳಲ್ಲಿದ್ದ ಕಲ್ಲನ್ನು ಒಂದಕ್ಕೊಂದು ತಾಕಿಸಿದರು. "ಏಕೆಂದ[illegible]ುಬೇಕ[illegible] ಪಾದಪದ್ಮಗಳನ್ನು [illegible]ಟ್ಟಿ ರುವೆನು" ಎಂದರು.

ಸ್ವಾಮಿಜಿ ತಮ್ಮ ಜೀವನಕ್ಕೆ ಸಂಬಂಧಪಟ್ಟ ಘಟನೆಗಳನ್ನು ಹೇಳುತ್ತಿದ್ದುದು ಬಹಳ ಅಪರೂಪ. ಆದಕಾರಣ ಮೇಲಿನ ಮಾತುಗಳನ್ನು ನಾನು ಎಂದಿಗೂ ಮರೆಯುವಂತೆ ಇರಲಿಲ್ಲ. ೧೮೯೮ನೇ ಜೇಸಿಗೆಯಲ್ಲಿ ಅಮರನಾಥದ ಗುಹೆಯಿಂದ ಹಿಂತಿರುಗಿ ಬರುವಾಗ ಸ್ವಾಮಿಜಿ ನಗುತ್ತಾ "ನನಗೆ ಅಮರನಾಥನ ವರ ದೊರಕಿತು. ನಾನೇ ಇಚ್ಛಿಸುವವರೆಗೆ ನಾನು ಸಾಯುವಂತೆ ಇಲ್ಲ" ಎಂದರು. ಮೃತ್ಯು ಎಂದಿಗೂ ಸ್ವಾಮಿಜಿಗೆ ಅರಿಯದೆ ಬರುವಂತೆ ಇರಲಿಲ್ಲ. ಶ್ರೀರಾಮಕೃಷ್ಣರು ಕೂಡ ನರೇಂದ್ರ, ಯಾರು ಏತಕ್ಕೆ ಬಂದನೆಂಬುದು ಗೊತ್ತಾದ ಮೇಲೆ ಅವನು ಒಂದು ದಿನವೂ ಹೆಚ್ಚಾಗಿ ಪ್ರಪಂಚದಲ್ಲಿ ಇರುವುದಿಲ್ಲ ಎಂದು ಭವಿಷ್ಯ ಹೇಳಿದ್ದರು. ಈ ಭವಿಷ್ಯ ನಮ್ಮಲ್ಲಿದ್ದ ಅಂಜಿಕೆಯನ್ನೆಲ್ಲಾ ಹೊರದೂಡಿತ್ತು. ಸ್ವಾಮಿಜಿಯೇ ಮಧ್ಯೆ ಮಧ್ಯೆ ಗಂಭೀರವಾಣಿಯಿಂದ ಹೇಳಿದ ಮಾತನ್ನು ಕೂಡ ನಾವು ಗ್ರಹಿಸುವ ಸ್ಥಿತಿಯಲ್ಲಿರಲಿಲ್ಲ.

ಸ್ವಾಮಿಜಿ ಶ್ರೀರಾಮಕೃಷ್ಣರ ಸಮೀಪದಲ್ಲಿದ್ದಾಗ ಅವರಿಗೆ ನಿರ್ವಿಕಲ್ಪ ಸಮಾಧಿ ಪ್ರಾಪ್ತವಾದ ಕಥೆ ನಮಗೆ ಗೊತ್ತಿಲ್ಲವೆ? ಆಗ ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ನೋಡು ಇದು (ನಿರ್ವಿಕಲ್ಪಸಮಾಧಿ) ನಿನ್ನ ಹಣ್ಣು. ಈಗ ನಾನು ಇದನ್ನು ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕುತ್ತೇನೆ. ನೀನು ನಿನ್ನ ಕೆಲಸವನ್ನು ಮಾಡಿದ ಮೇಲೆ ಮಾತ್ರ ಇದರ ರುಚಿಯನ್ನು ಪುನಃ ನೋಡುವೆ."

ಮೇಲಿನ ಕಥೆಯನ್ನು ಹೇಳಿದ ಗುರುಭಾಯಿಗಳೊಬ್ಬರು "ನಾವು ಅದಕ್ಕಾಗಿ ಕಾಯಬಹುದು. ಆ ಸಮಯ ಯಾವಾಗ ಎನ್ನುವುದು ನಮಗೆ ಗೊತ್ತಾಗುವುದು. ಸ್ವಾಮಿಜಿ ಪುನಃ ಆ ಮಾವಿನಹಣ್ಣಿನ ರುಚಿ ನೋಡಿದೆ ಎಂದು ನಮಗೆ ಹೇಳುವರು" ಎಂದರು.

ನಾವು ಹಿಂದಿನದನ್ನು ಈಗ ನೆನಸಿಕೊಂಡರೆ, ಎಷ್ಟುವೇಳೆ ಮುಂದೆ ಪ್ರಾಪ್ತವಾಗುವ ಘಟನೆಯನ್ನು ಊಹಿಸಿಕೊಳ್ಳಲು ಅವಕಾಶ ಸಿಕ್ಕಿತ್ತು ಎಂದು ಆಶ್ಚರ್ಯವಾಗುವುದು. ಆದರೂ ಈ ಮಾತುಗಳು ಕಿವುಡುಗಿವಿಯ ಮೇಲೆ ಬಿದ್ದಂತೆ ಆಯಿತು. ಇದನ್ನು ಅರಿಯಲಾರದವರಿಗೆ ತಿಳಿಸದಂತೆ ಆಯಿತು.

ಸ್ವಾಮಿಜಿ ಎಲ್ಲಾ ವಿಧವಾ[illegible] [illegible]ಲ್ಯ ಮತ್ತು ಆಸಕ್ತಿಯಿಂದ [illegible] ಅವರಲ್ಲಿ [illegible]ಯಿತಿ ಇತ್ತು. ಅವರಿಗೆ ತಮ್ಮ

ಜೀವನಕ್ಕಿಂತ ಹೆಚ್ಚು ಪ್ರಿಯಕರವಾಗಿದ್ದುದು ಈಗಲೂ ಅವರನ್ನು ಕೆಣಕುವ ಸ್ಥಿತಿಯಲ್ಲಿತ್ತು. ಇವರ ಮಹಾಸಮಾಧಿಗೆ ಮುಂಚಿನ ಭಾನುವಾರ ತಮ್ಮ ಶಿಷ್ಯರೊಬ್ಬರಿಗೆ ಹೇಳಿದರು: "ನೋಡು, ಕೆಲಸವೇ ಯಾವಾಗಲೂ ನನ್ನ ದೌರ್ಬಲ್ಯ; ಅದು ಕೊನೆಗೊಳ್ಳುವುದೆಂದು ಗೊತ್ತಾದರೆ ನಾನು ಹತಾಶನಾಗುವೆನು."

ಬುಧವಾರ. ಏಕಾದಶಿ ಅಂದು. ಸ್ವಾಮಿಜಿಯೇ ಉಪವಾಸ ಮಾಡುತ್ತಿದ್ದರು. ಆದರೂ ಅದೇ ಶಿಷ್ಯನಿಗೆ ತಾವೇ ಬಡಿಸಬೇಕೆಂದರು. ಅವನಿಗೆ ಬೇಯಿಸಿದ ಹಲಸಿನ ಬೀಜ, ಆಲೂಗಡ್ಡೆ, ಅನ್ನ, ತಂಪಾದ ಹಾಲನ್ನು ಕೊಟ್ಟರು. ಊಟದ ಕಾಲದಲ್ಲಿ ಸಂತೋಷವಾಗಿ ಮಾತನಾಡುತ್ತಿದ್ದರು. ಸ್ವಾಮಿಜಿಯೇ ಕೈ ತೊಳೆಯಲು ನೀರು ಕೊಟ್ಟು ಟವಲ್ಲಿನಿಂದ ತಾವೇ ಶಿಷ್ಯನ ಕೈಗಳನ್ನು ವರಿಸಿದರು. ಆದರೆ ಆಗ ಶಿಷ್ಯ ಸ್ವಾಭಾವಿಕವಾಗಿ "ಸ್ವಾಮಿಜಿ, ನಾನು ನಿಮಗೆ ಇದನ್ನು ಮಾಡಬೇಕಾಗಿದೆ, ನೀವು ನನಗೆ ಮಾಡಬಾರದು" ಎಂದರು. ಆದರೆ ಸ್ವಾಮಿಜಿ ಗಾಂಭೀರ್ಯದಿಂದ ಇತ್ತ ಉತ್ತರ ಅನಿರೀಕ್ಷಿತವಾಗಿತ್ತು. "ಜೀಸಸ್ ತನ್ನ ಶಿಷ್ಯರ ಕಾಲನ್ನು ತೊಳೆದ" ಎಂದರು.

ಮುಂದೆ ಮಾತನಾಡಲು ಶಿಷ್ಯನಿಗೆ ಬಾಯಿ ಬರಲಿಲ್ಲ. ಅವನು ಹಾಗೆ ಕಾಲು ತೊಳೆದದ್ದು ಕೊನೆಗಾಲದಲ್ಲಿ ಎಂದು ಹೇಳಬೇಕೆಂದು ಇದ್ದವನು ಅದನ್ನು ಉಚ್ಚರಿಸಲಾರದೇ ಹೋದ. ಇಲ್ಲಿಕೂಡ ಕೊನೆಯ ಸಮಯವೇ ಬಂದಿತ್ತು.

ಕೊನೆಯದಿನಗಳಲ್ಲಿ ಸ್ವಾಮಿಜಿಯಲ್ಲಿ ಯಾವ ವಿಧವಾದ ವ್ಯಸನವಾಗಲಿ, ಉದ್ವೇಗವಾಗಲಿ ಇರಲಿಲ್ಲ. ಇವರಿಗೆ ಎಲ್ಲಿ ಸಾಕಾಗುವುದೋ ಎಂದು ಜೋಪಾನವಾಗಿ ನೋಡಿಕೊಳ್ಳುತ್ತಿದ್ದರು. ಬೇಕೆಂತಲೇ ಲಘು ವಿಷಯವಾಗಿ ಸ್ವಾಮಿಜಿ ಹತ್ತಿರ ಮಾತನಾಡುತ್ತಿದ್ದರು. ಸುತ್ತಲಿರುವ ಮೃಗಗಳು, ತೋಟ, ಇವರು ಮಾಡುತ್ತಿದ್ದ ಪ್ರಯೋಗ, ಓದುತ್ತಿದ್ದ ಪುಸ್ತಕ, ದೂರದ ಸ್ನೇಹಿತರು ಈ ವಿಷಯವಾಗಿಯೇ ಮಾತನಾಡಿಸುತ್ತಿದ್ದರು. ಆದರೆ ಯಾವುದೋ ಒಂದು ಅನಿರ್ವಚನೀಯ ಜ್ಯೋತಿ ಇವರನ್ನು ಆವರಿಸಿದಂತೆ ತೋರುತ್ತಿತ್ತು. ಆ ಜ್ಯೋತಿಯ ನೆರಳಿನಂತೆ ಇತ್ತು [illegible] ಇವರ ದೇಹ, ಅದಕ್ಕೆ ಚಿಹ್ನೆ [illegible]ತ್ತಿತ್ತು. ಈಗಿನಷ್ಟು ಹಿಂದೆ [illegible] ಇವರ ಮುಂದೆ ನಿಂತಾಗ ಒಂದು [illegible] ...ತಿಯ ಎದುರ[illegible]

ಎಂದು ಭಾಸವಾಗುತ್ತಿರಲಿಲ್ಲ. ಆದರೆ ಯಾರೂ ಅವರಿಷ್ಟುಬೇಗ ಮಹಾ ಸಮಾಧಿಯನ್ನು ಪಡೆಯುವರೆಂದು ಎಣಿಸಿಯೇ ಇರಲಿಲ್ಲ. ಆದರಲ್ಲಿಯೂ ೧೯೦೨ ಜುಲೈ ನಾಲ್ಕನೇ ತೇದಿ. ಎಂದಿಗಿಂತ ಅಂದು ಬಲವಾಗಿರುವಂತೆ ಕಂಡರು, ಆರೋಗ್ಯವಾಗಿರುವಂತೆ ಕಂಡರು.

ಅಂದು ಬೆಳಗ್ಗೆ ಧೀರ್ಘಕಾಲ ಧ್ಯಾನಮಾಡಿದರು. ಅನಂತರ ಬಹಳ ಹೊತ್ತಿನವರೆಗೆ ಸಂಸ್ಕೃತ ಪ್ರವಚನ ನಡೆಸಿದರು. ಅನಂತರ ಮಠದಿಂದ ದೂರದ ರಸ್ತೆಯವರೆಗೆ ಗಾಳಿ ಸಂಚಾರಕ್ಕೆ ಹೊರಟರು.

ಸಂಚಾರದಿಂದ ಬಂದಾಗ ಸಂಜೆಯ ಮಂಗಳಾರತಿಯ ಗಂಟೆ ಕೇಳಿ ಬರುತ್ತಿತ್ತು. ಸ್ವಾಮಿಜಿ ತಮ್ಮ ಕೋಣೆಗೆ ಹೋಗಿ ಗಂಗಾನದಿಯ ಕಡೆ ಮುಖ ಮಾಡಿಕೊಂಡು ಧ್ಯಾನಕ್ಕೆ ಕುಳಿತರು. ಇದೇ ಕೊನೆ. ಇವರ ಗುರುದೇವ ಮೊದಲಿನಿಂದಲೂ ಹೇಳುತ್ತಿದ್ದ ದಿನ ಬಳಿಸಾರಿತು. ಅರ್ಧ ಗಂಟೆ ಆಯಿತು. ಇವರ ಆತ್ಮ ಧ್ಯಾನವಿಹಂಗಮದ ಹೆಗಲನೇರಿ ಪುನಃ ಬರಲಾರದ ಲೋಕಕ್ಕೆ ಹಾರಿಯೇ ಹೋಯಿತು. ಭೂಮಿಯ ಮೇಲೆ ಕಳಚಿಟ್ಟ ಒಂದು ಅಂಗಿಯಂತೆ ಇತ್ತು ಇವರ ದೇಹ.



## ೨೭

# ಉಪಸಂಹಾರ

೧೯೦೨ನೇ ಕ್ರಿಸ್‌ಮಸ್ ಸಮಯದಲ್ಲಿ ಕಟಕ್ಕಿನಲ್ಲಿರುವ ಖಂಡಗಿರಿ ಸಮಿಾಪದಲ್ಲಿ ಕೆಲವು ಸ್ವಾಮಿ ವಿವೇಕಾನಂದರ ಶಿಷ್ಯರು ಆ ದಿನವನ್ನು ಆಚರಿಸಬೇಕೆಂದು ನೆರೆದರು. ಸಂಜೆ. ನಾವು ಒಂದು ಧೂನಿಯ ಸುತ್ತಲೂ ಕುಳಿತೆವು. ಒಂದು ಕಡೆ ಗುಹೆ ಮತ್ತು ಚಿತ್ರದಿಂದ ಕೊರೆದ ಬಂಡೆಗಳ ಬೆಟ್ಟ. ಸುತ್ತಲೂ ನಿದ್ರಿಸುತ್ತಿರುವ ಕಾನನದ ಪಿಸುಮಾತು. ಶ್ರೀರಾಮಕೃಷ್ಣ ಸಂಸ್ಥೆಯ ಹಳೆಯ ವಾಡಿಕೆಯಂತೆ ನಾವಂದು ಕ್ರಿಸ್‌ಮಸ್ ದಿನವನ್ನು ಆಚರಿಸಬೇಕಾಯಿತು. ಒಬ್ಬ ಸನ್ಯಾಸಿಗಳ ಕೈಯಲ್ಲಿ ಬಾಗಿದ ದಂಡವಿತ್ತು. ನಮ್ಮಗಳ ಹತ್ತಿರ ಸೇಂಟ್ ಲೂಕನ ಗಾಸ್ಪೆಲ್ ಇದ್ದಿತು. ಅಲ್ಲಿ ದೇವದೂತರು ಬರುವುದು ಅವರು ಪ್ರಥಮವಾಗಿ ಹೇಳುವ ಹಾಡು ಇವನ್ನು ಓದುತ್ತ ಹಿಂದಿನ ಚಿತ್ರವನ್ನು ಕಲ್ಪಿಸಿಕೊಳ್ಳುತ್ತಿದ್ದೆವು.

ನಾವು ಕಥೆಯನ್ನು ಓದುತ್ತಾ ಹೋದೆವು. ಕ್ರಿಸ್ತನ ಜನನದಲ್ಲೇ ಅದು ಪರ್ಯವಸಾನವಾಗಲಿಲ್ಲ. ಮುಂದೆಯೂ ಓದುತ್ತಾ ಹೋದೆವು. ಇಡೀ ಕ್ರಿಸ್ತನ ಜೀವನವನ್ನು ಓದಿದೆವು. ಕೊನೆಗೆ ಅವನನ್ನು ಶಿಲುಬೆಗೆ ಏರಿಸಿದ್ದು ಅನಂತರ ಅವನ ಪುನರುತ್ಥಾನ ಎಲ್ಲವನ್ನೂ ಪೂರೈಸಿದೆವು. ನಾವು ಗಾಸ್ಪೆಲ್ಲಿನಲ್ಲಿರುವ ಇಪ್ಪತ್ತನಾಲ್ಕನೇ ಅಧ್ಯಾಯದಲ್ಲಿ ಒಂದಾದಮೇಲೊಂದು ಬರುವ ಘಟನೆಗಳನ್ನು ಓದತೊಡಗಿದೆವು.

ಆದರೆ ಈ ಕಥೆ ಹಿಂದೆ ಎಂದೂ ನಮ್ಮ ಮನಸ್ಸಿನ ಮೇಲೆ ಮಾಡದ ಪರಿಣಾಮವನ್ನು ಉಂಟುಮಾಡಿತು. ಇದು ಕೇವಲ ನ್ಯಾಯಾಸ್ಥಾನಕ್ಕೆ ಯೋಗ್ಯವಾದ ಒಂದು ವರದಿಯಂತೆ ಕಾಣಲಿಲ್ಲ. ಇದು ಸತ್ಯವಾಗಬೇಕಾದರೆ ಸ್ಪಷ್ಟವಾಗಿರಬೇಕು, ಒಂದಕ್ಕೂ ಮತ್ತೊಂದಕ್ಕೂ ಒಂದು ಸಂಬಂಧವಿರಬೇಕಾಗಿತ್ತು. ಆದರೆ ಗ್ರಹಿಸಲಾಗದ, ಬಗೆಗೆ ನಿಲುಕದ, ಒಂದು ಅನುಭವವನ್ನು ಯಾವನೊ ಅದನ್ನು ಅನುಭವಿಸಿದವನು ಅಸ್ಪಷ್ಟವಾದ ಭಾಷೆಯಲ್ಲಿ ಅದನ್ನು ವಿವರಿಸುತ್ತಿರುವಂತೆ ಕಂಡಿತು. ಕ್ರಿಸ್ತ ಪರಲೋಕಕ್ಕೆ ಹೋದ ವರದಿ, ಸ್ವೀಕರಿಸುವ [illegible] ಜಿಸುವ ಒಂದು ಘಟನೆ[illegible] ಲಿಲ್ಲ. ಇದೊಂದು ಆಧ್ಯಾತ್ಮಿ[illegible] [illegible]ತ್ತು. [illegible]ಯಿತು. ಇದನ್ನು [illegible] ಇದ್ದರೂ [illegible] ಸಿದವನು ಭಾಷೆಯ ಮೂಲ-[illegible]

ಯತ್ನಿಸುತ್ತಿರುವಂತೆ ಕಂಡಿತು. ಹರಿದು ಹಂಚಿಹೋಗಿದ್ದರೂ ಕ್ರಮೇಣ ಬಲಗೂಡುತ್ತಾ ಹೋಗುವ ಒಂದು ಸ್ವಂತ ಅನುಭವದಂತೆ ಕಂಡಿತು. ಓದುವವರನ್ನು ಮೆಚ್ಚಿಸುವುದಕ್ಕಿಂತ ಬರಹಗಾರನಿಗೆ ತೃಪ್ತಿಯನ್ನು ಕೊಡುವಂತೆ ಆಯಿತು.

ನಾವು ಈಗ ಕ್ರಿಸ್ತನೊಡನೆ ಮತ್ತೊಂದು ಪುನರುತ್ಥಾನದ ಘಟನೆಯನ್ನು ಇಡಬೇಕಾಗಿದೆಯಲ್ಲ? ನನ್ನ ಗುರುದೇವರೆ ಹಿಂದೆ ಒಮ್ಮೆ ಹೇಳಿದ್ದು ತಕ್ಷಣ ಸ್ಪಷ್ಟವಾಗಿ ಜ್ಞಾಪಕಕ್ಕೆ ಬಂದಿತು: "ಅನೇಕ ವೇಳೆ ನಾನೇ ಗತಿಸಿದವರನ್ನು ಕಂಡಿರುವೆನು. ಒಮ್ಮೆ ಶ್ರೀರಾಮಕೃಷ್ಣರು ಕಾಲವಾದ ಒಂದು ವಾರದ ಮೇಲೆ ನಾನೆ ಒಂದು ಜ್ಯೋತಿಃಪುಂಜ ಮೂರ್ತಿಯನ್ನು ಕಂಡೆ."

ತಮ್ಮಿಂದ ಮರೆಯಲಾರದ, ಗುರುದೇವನನ್ನು ನೋಡಲು ತವಕಪಡುತ್ತಿದ್ದ ಶಿಷ್ಯರು ಮಾತ್ರ ಅಲ್ಲ ನಮ್ಮ ಮುಂದೆ ಇದ್ದುದು. ಅದಕ್ಕಿಂತ ಹೆಚ್ಚಾಗಿ ತಾನು ಬಿಟ್ಟ ಶಿಷ್ಯನನ್ನು ಹೋಗಿ ಉದ್ಧರಿಸಬೇಕು ಎಂದು ಹಂಬಲಿಸುತ್ತಿದ್ದ ಗುರುವಿನ ಸಾನ್ನಿಧ್ಯವನ್ನು ಅನುಭವಿಸಬಹುದಾಗಿತ್ತು.

"ದಾರಿಯಲ್ಲಿ ಹೋಗುತ್ತಿದ್ದಾಗ ಅವನಾಡಿದ ಮಾತನ್ನು ಕೇಳಿದಾಗ ನಮ್ಮ ಒಳಗೇ ದಹಿಸಲಿಲ್ಲವೆ?" ನಮ್ಮ ಗುರು ಕಾಲವಾದ ಮೊದಲನೇ ವಾರದಲ್ಲಿ ನಮ್ಮಲ್ಲಿ ಎಷ್ಟು ಜನರ ಹೃದಯದಲ್ಲಿ ಇಂತಹ ಭಾವನೆಗಳು ಏಳಲಿಲ್ಲ. ಅವರು ನಿಜವಾಗಿಯೂ ನಮ್ಮ ಬಳಿಯಲ್ಲಿ ಇಲ್ಲ ಎಂದು ಆಲೋಚಿಸಲೂ ಸಾಧ್ಯವಾಗಲಿಲ್ಲ.

"ಅವನು ರೊಟ್ಟಿಯನ್ನು ಹಂಚುತ್ತಿರುವಾಗ ಗೊತ್ತಾಯಿತು"— ಇದರಂತೆಯೆ. ಹೀಗೆಯೆ ಯಾವುದಾದರೂ ಇಲ್ಲೊಂದು ಅಲ್ಲೊಂದು ಮಾತು, ಹಿಂದೆ ಅವರ ಸಾನ್ನಿಧ್ಯದಲ್ಲಿ ಪಟ್ಟ ಆನಂದ, ಅವರ ಬಾಯಿಂದ ಹೊಮ್ಮಿದ ಜ್ಯೋತಿರ್ನುಡಿಗಳು, ಇವುಗಳಲ್ಲಿ ಯಾವುದಾದರೂ ಒಂದು ಸಾಕಾಗಿತ್ತು ನಮಗೆ, ಸ್ವಾಮಿಜಿ ನಮ್ಮನ್ನು ಬಿಟ್ಟುಹೋದ ಹೊಸದರಲ್ಲಿ ನಮ್ಮ ಪೂಜ್ಯತಮ ವ್ಯಕ್ತಿಯು ಇರವನ್ನು ನಮ್ಮ ಮುಂದೆ ತರುವುದಕ್ಕೆ. [illegible]ನಸ್ಸು ಅನುಮಾನ ಹಂಬಲಿಕೆಗಳ ತುಮುಲವಾಗಿತ್ತು.

[illegible] ಖಂಡಗಿರಿಯಲ್ಲಿ [illegible] ರಾತ್ರಿಯನ್ನು ಕಳೆದೆವು. ಪುನ[illegible]ಷಯವನ್ನು [illegible] ನಂತರ ಜನರನ್ನು ನಂಬಿಸಲು

ಕಥೆಗೆ ಕಳೆ ಕಟ್ಟಲು ಬರೆದು ಸೇರಿಸಿದ್ದಿರಬಹುದು. ನಾವು ಇದಕ್ಕಿಂತ ಹಳೆಯದಾದ ವರದಿಯನ್ನು ತೆಗೆದುಕೊಂಡೆವು. ಹನ್ನೊಂದು ಜನ ಶಿಷ್ಯರಿಗೆ ಯಾವುದೋ ದರ್ಶನ ಕಂಡು ಮಾಯವಾದಾಗ ಹೃದಯಾವೇಗದಿಂದ ಅವರಾಡಿದ ಮಾತನ್ನು ತೆಗೆದುಕೊಂಡೆವು. "ಏಸು ನಿಜವಾಗಿ ಮೇಲೆದ್ದನು" ಎಂಬುದು. ಆ ಕಥೆ ಆಶೀರ್ವಾದವನ್ನು ಮಳೆಗರೆಯುತ್ತ ಕೊನೆಗಾಣುವುದು. ಓದುತ್ತಿದ್ದಂತೆ ಹಿಂದಿನ ಕಥೆಯಲ್ಲಿ ಕಾಣುವ ಪುನರುತ್ಥಾನವಲ್ಲ. ಇದು ವೇದಾಂತದ ದೃಷ್ಟಿಯಲ್ಲಿ ತನ್ನ ನೈಜಸ್ಥಿತಿಯನ್ನು ಪಡೆದವನ ಸ್ಥಿತಿ. ಗುರುಶಿಷ್ಯರು ಇದ್ದಕ್ಕೆ ಇದ್ದಂತೆಯೆ ಸಂಧಿಸಿದರು. ಇದರಿಂದ ಪ್ರೀತಿ ವಿಶ್ವಾಸ ಶಿಷ್ಯನಲ್ಲಿ ಉಕ್ಕಿತು. ತಾತ್ಕಾಲಿಕವಾಗಿ ಶಿಷ್ಯರು ಧ್ಯಾನಾವಸ್ಥೆಯಲ್ಲಿ ಪ್ರಾರ್ಥಿಸಿದರು. ಈಗ ಗುರು ಸೂಕ್ಷ್ಮವಾದ ಅಂತರತಮ ಆಕಾಶದಲ್ಲಿ ವಿರಾಜಮಾನನಾಗಿದ್ದನು. ಇಂದ್ರಿಯ ರಾಜ್ಯದಲ್ಲಿ ಬದ್ಧರಾದ ನಮಗೆ ಅದನ್ನು ತಿಳಿದುಕೊಳ್ಳುವುದಕ್ಕೂ ಸಾಧ್ಯವಿಲ್ಲ.

ಅರ್ಧ ಕೇಳಿದ ಅರ್ಧ ನೋಡಿದ ಈ ವಿಷಯಗಳು ಎಲ್ಲರಿಗೂ ಅನುಭವ ವೇದ್ಯವಾಗುವಂತಹವಲ್ಲ. ಸ್ಥೂಲವಾಗಿರುವುದನ್ನು ಎಲ್ಲರೂ ನೋಡಬಹುದು. ಸೂಕ್ಷ್ಮವಾಗಿರುವುದನ್ನು ನಾವು ಪ್ರಶ್ನಿಸಬೇಕಾಗಿದೆ. ಉತ್ಸಾಹದಿಂದ ಅದನ್ನು ಚರ್ಚಿಸಬೇಕಾಗಿದೆ. ಒಂದಾದಮೇಲೊಂದನ್ನು ಜೋಡಿಸಿ ಅದನ್ನು ನಮ್ಮ ಹೃದಯದಲ್ಲಿ ರಕ್ಷಿಸಬೇಕಾಗಿದೆ. ಕ್ರಿಸ್ತನ ಶಿಷ್ಯರಲ್ಲಿ ಪರಮಪ್ರಿಯರಾದವರಲ್ಲೆ ಕೆಲವರು ಅನುಮಾನಿಸಿದವರು ಇದ್ದಿರಬೇಕು. ಆದರೆ ಅಂದಿನ ರಾತ್ರಿ ಖಂಡಗಿರಿಯ ಕಾನನ ಮತ್ತು ಗುಹೆಗಳ ಮಧ್ಯದಲ್ಲಿದ್ದ ನಾವು, ಕ್ರಿಸ್ತನ ಪುನರುತ್ಥಾನದ ಕಥೆಯನ್ನು ಕೇಳುತ್ತಿದ್ದವರು, ಈ ಕಥೆಯ ಹಿಂದೆ ಮತ್ತು ಇದರ ಮೂಲಕ ಒಂದು ಸತ್ಯಾಂಶ ಇದೆ ಎಂಬುದನ್ನು ಅನುಮಾನಿಸಲು ಸಾಧ್ಯವೇ ಆಗಲಿಲ್ಲ. ಇವು, ಈ ಸಂಸಾರ, ಹಿಂದೆ ಎಂದೋ ಎಲ್ಲೋ ಬಿಟ್ಟುಹೋದವನ ಹೆಜ್ಜೆ ಗುರುತುಗಳಂತೆ ನಮಗೆ ಕಂಡು ನಾವು ಹೀಗೆಯೇ ನಂಬಿದೆವು. ಹೀಗೆಯೇ ಅನುಭವಿಸಿದೆವು. ಏಕೆಂದರೆ ಅದನ್ನು ಎಷ್ಟೇ ಅನುಮಾನಿಸಿದರೂ, ಅಂತಹದೇ ಒಂದು ಅನುಭವ ನಮಗೆ ಇಂದು ಆಯಿತು.

ಈಶ್ವರ ನಮಗೆ ಇದನ್ನು ಕರುಣಿಸಲಿ: ನಮ್ಮ [illegible]
ನಮ್ಮ ಪಾಲಿಗೆ ಜೀವಂತ ಸತ್ಯವಾ[illegible] ಮೃತ್ಯುವಿಗೂ [illegible]

ಅಪಹರಿಸುವ ಶಕ್ತಿ ಇಲ್ಲದಿರಲಿ. ಅವರು ಶಿಷ್ಯರ ಮನಸ್ಸಿನಲ್ಲಿ ಬರೀ ಸ್ಮರಣೀಯ ವ್ಯಕ್ತಿಯಾಗದೆ, ಚಿರಕಾಲ ಜ್ವಲಂತ ಜಾಗ್ರತಭಾವದಲ್ಲಿ ಅವರ ಹೃದಯಾಂತರಾಳದಲ್ಲಿ ನೆಲಸಲಿ.

---



ರಾತ್ರಿಯ.
ನಂತರ ಜನರನ್ನು.

## ಶ್ರೀ ರಾಮಕೃಷ್ಣಾಶ್ರಮದ ಪ್ರಕಟನೆಗಳು, ಮೈಸೂರು.

—o—

| | ರೂ. | ಆ. | ಪೈ. |
|---|---|---|---|
| ಶ್ರೀ ರಾಮಕೃಷ್ಣ ವಚನವೇದ (ಪೂರ್ವಾರ್ಧ) | ೧೦ | ೦ | ೦ |
| ಶ್ರೀ ರಾಮಕೃಷ್ಣ ವಚನವೇದ (ಉತ್ತರಾರ್ಧ) | ೧೦ | ೦ | ೦ |
| ಕೊಲಂಬೊ ಇಂದ ಆಲ್ಮೋರಕೆ | ೫ | ೦ | ೦ |
| ಸಂವಾದ ತರಂಗಿಣಿ (ಸ್ವಾಮಿ ಶಿಷ್ಯ ಸಂವಾದ) | ೫ | ೦ | ೦ |
| ಶ್ರೀರಾಮಕೃಷ್ಣ ಉಪದೇಶಾಮೃತ | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) | ೩ | ೮ | ೦ |
| ಪ್ರವಚನಾದಿ | ೩ | ೮ | ೦ |
| ಶ್ರೀರಾಮಕೃಷ್ಣ ಶಿಷ್ಯಕೋಟಿ | ೩ | ೮ | ೦ |
| ಸ್ತವಕುಸುಮಾಂಜಲಿ | ೩ | ೪ | ೦ |
| ಭಗವಾನ್ ಶ್ರೀ ರಾಮಕೃಷ್ಣ | ೩ | ೦ | ೦ |
| ಪತ್ರಮಾಲೆ | ೩ | ೦ | ೦ |
| ಜ್ಞಾನಯೋಗ | ೩ | ೦ | ೦ |
| ಗುರುವಿನೊಡನೆ ದೇವರಡಿಗೆ (ಕುವೆಂಪು) | ೩ | ೦ | ೦ |
| ಜೀವ ಈಶ್ವರ ಧರ್ಮ | ೩ | ೦ | ೦ |
| ರಾಜಯೋಗ | ೨ | ೧೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ | ೨ | ೮ | ೦ |
| ಗೀತಾ ಪತ್ರಗಳು | ೨ | ೮ | ೦ |
| ಮಿಂಚುನೋಟಕೆ ಹಿಂದೂಧರ್ಮ | ೨ | ೮ | ೦ |
| ಶ್ರೀ ಶಾರದಾದೇವಿ | ೨ | ೦ | ೦ |
| ಸಾಧಕನ ಕೈದೀವಿಗೆ | ೨ | ೦ | ೦ |
| ಪರಮಾರ್ಥ ಪ್ರಸಂಗ | ೨ | ೦ | ೦ |
| ಹೈಮಾಚಲ ಸಾನ್ನಿಧ್ಯದಲ್ಲಿ (ಹರಿದ್ವಾರದಿಂದ ಕೇದಾರ ಬದರಿಗೆ) | ೨ | ೦ | ೦ |
| ಕರ್ಮಯೋಗ | ೧ | ೮ | ೦ |
| ಸನಾತನ ಭಾರತ | ೧ | ೮ | ೦ |
| ಬ್ರಹ್ಮಾನಂದ ವಚನಸುಧೆ | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ | ೧ | ೪ | [illegible] |
| ಪರಿವ್ರಾಜಕ | ೧ | [illegible] | [illegible] |
| ಪ್ರಾಚ್ಯ ಮತ್ತು ಪಾಶ್ಚಾತ | [illegible] | [illegible] | [illegible] |
| ಭಕ್ತಿಯೋಗ | [illegible] | [illegible] | [illegible] |
| ಭಾರತದಲ್ಲಿ ಶಕ್ತಿ ಜೀವಂತ ಸತ್ಯವಾ[illegible] | [illegible] | [illegible] | [illegible] |

| | ರೂ. | ಆ. | ಪೈ. |
|---|---|---|---|
| ಭಕ್ತಿ : ಗೌಣೀ ಮತ್ತು ಪರಾ .. .. .. | ೧ | ೦ | ೦ |
| ದಾರಿಯಲ್ಲಿ ದೀಪಧಾರಿ .. .. .. | ೧ | ೦ | ೦ |
| ಶ್ರೀ ಗುರುದೇವರ ವಚನ .. .. .. | ೧ | ೦ | ೦ |
| ಅಮರನಾಥ ಯಾತ್ರೆ .. .. .. | ೧ | ೦ | ೦ |
| ಧನ್ಯತೆಗೆ ದಾರಿ .. .. .. | ೧ | ೦ | ೦ |
| ಅನುಷ್ಠಾನ ವೇದಾಂತ .. .. .. | ೧ | ೦ | ೦ |
| ಧ್ಯಾನ ಚಿಂತನಾಧಾರೆ .. .. .. | ೧ | ೦ | ೦ |
| ವೇದಾಂತ .. .. .. | ೦ | ೧೦ | ೦ |
| ವಿದ್ಯಾಭ್ಯಾಸ .. .. .. | ೦ | ೧೦ | ೦ |
| ಹಿಂದೂ ಧರ್ಮಸಾರ .. .. .. | ೦ | ೧೦ | ೦ |
| ವರ್ತಮಾನ ಭಾರತ .. .. .. | ೦ | ೧೦ | ೦ |
| ವಿವೇಕವಾಣಿ .. .. .. | ೦ | ೧೦ | ೦ |
| ನನ್ನ ಗುರುದೇವ .. .. .. | ೦ | ೮ | ೦ |
| ಜ್ಞಾನಮಾರ್ಗ .. .. .. | ೦ | ೮ | ೦ |
| ಭಕ್ತಿಮಾರ್ಗ .. .. .. | ೦ | ೮ | ೦ |
| ಈಶಾವಾಸ್ಯ ಉಪನಿಷತ್ .. .. .. | ೦ | ೮ | ೦ |
| ಪುನರ್ಜನ್ಮ .. .. .. | ೦ | ೮ | ೦ |
| ಚಿಕಾಗೋ ಉಪನ್ಯಾಸ .. .. .. | ೦ | ೬ | ೦ |
| ಆರತಿ .. .. .. | ೦ | ೬ | ೦ |
| ಶ್ರೀ ರಾಮಕೃಷ್ಣ (ಸಂಕ್ಷಿಪ್ತ ಜೀವನ) .. .. | ೦ | ೫ | ೦ |
| ಸ್ವಾಮಿ ವಿವೇಕಾನಂದ ,, .. .. .. | ೦ | ೫ | ೦ |
| ಶ್ರೀ ಶಾರದಾದೇವಿ ,, .. .. .. | ೦ | ೫ | ೦ |
| ಮುಮುಕ್ಷು ಲಕ್ಷಣ .. .. .. | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ .. .. .. | ೦ | ೪ | ೦ |
| ಈಶ್ವರಾನುರಾಗ .. .. .. | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ | ೦ | ೪ | ೦ |
| ಭಾರತ ಮಹಿಳೆ | ೦ | ೪ | ೦ |
| ಕರ್ಮರಹಸ್ಯ | ೦ | ೪ | ೦ |
| [illegible]ನ .. | ೦ | ೪ | ೦ |
| [illegible] ಬಾಬಾ .. | ೦ | ೪ | ೦ |
| [illegible] ಏಸುಕ್ರಿಸ್ತ .. | ೦ | ೪ | ೦ |
| [illegible] .. .. | ೦ | ೪ | ೦ |
| [illegible] ಷರು | | | |

